# ಕಾಮನ ಬಿಲ್ಲಿನ ಉಜ್ವಲ ವರ್ಣಗಳನ್ನು ಸೆರೆಹಿಡಿದು



## ನಿಮ್ಮ ಮನೆಯೊಳಗಿರಿಸಿರಿ - ಇಓಮೈಟ್‌ನಿಂದ

ಪ್ರಕೃತಿಯು ಅತ್ಯಂತ ಸುಂದರ ರೂಪದಲ್ಲಿರುವಾಗ ಅದನ್ನು ಮೀರಿಸಬೇಕಾದರೆ ಅತ್ಯಂತ ಶ್ರೇಷ್ಠವಾದ ಪ್ರಾವೀಣ್ಯತೆ ಮತ್ತು ಅನುಭವಗಳ ಸಂಯೋಜನೆ ಅಗತ್ಯ. ಅಂತಹ ಪ್ರಾವೀಣ್ಯತೆ ಮತ್ತು ಅನುಭವಗಳು ಕೇವಲ ಇಓಮೈಟ್‌ರವರಲ್ಲಿ ಮಾತ್ರ ಇವೆ ಎಂದು ಸಿದ್ಧವಾಗಿದೆ.

ಕೇವಲ ಇಓಮೈಟ್ ಪೇಯಿಂಟ್ ಮನೋಹರವಾದ ಪ್ರಕೃತಿಯ ವರ್ಣ, ಛಾಯೆ ಮತ್ತು ಸಂಯೋಜನೆಗಳನ್ನು ನಿಮಗಾಗಿ ನಿರ್ಮಿಸುತ್ತಾರೆ.

ಅವನ್ನು ಉಪಯೋಗಿಸಿದ ಯಾರೊಬ್ಬರನ್ನೂ ಕೇಳಿರಿ. ಆ ಮೇಲೆ ಇಓಮೈಟ್‌ನ್ನು ಬಿಟ್ಟು ಇನ್ನಾವುದನ್ನೂ ನೀವು ಕೇಳಲಿಕ್ಕಿಲ್ಲ.

bp ಓರ್ವ ಸದಸ್ಯರು




ಬ್ಲಂಡೆಲ್ - ಪರ್ಮೋಗ್ಲೇಝ್ ಗ್ರೂಪ್‌ನ

## ಬ್ಲಂಡೆಲ್ ಇಓಮೈಟ್ ಪೇಯಿಂಟ್ಸ್ ಲಿ.

ರಿಜಿಸ್ಟರ್ಡ್ ಆಫೀಸು:
ರುಸ್ತುಮ್ ಬಿಲ್ಡಿಂಗ್, ವೀರ ನಾರಿಮನ್ ರೋಡ್, ಬೊಂಬಾಯಿ 400 001.
ಶಾಖೆಗಳು: ಥಾನಾ, ಅಹಮ್ಮದಾಬಾದ್, ದಿಲ್ಲಿ, ಕಾನ್ಪುರ, ಚಂಢಿಗರ್, ಕಲ್ಕತ್ತಾ, ಬೆಂಗಳೂರು, ಮದರಾಸು, ಕೊಚ್ಚಿನ್, ಮತ್ತು ಹೈದರಾಬಾದು.

## ಇಓಮೈಟ್ ಪೇಯಿಂಟ್ಸ್




ಉತ್ಕೃಷ್ಟತೆ ಮತ್ತು ಸೇವೆಯ
ಒಂದು ವರ್ಣರಂಜಿತ ಸಂಯೋಜನೆ

VENART/GAA/KAN.

ಪ್ರಕಟನೆ :
ಪ್ರತಿ ತಿಂಗಳ ೧ ನೇ ದಿನಾಂಕ

ವ್ಯವಸ್ಥಾಪಕ ಸಂಪಾದಕರು :
ರಂಗನಾಥ ದಿವಾಕರ

ಪ್ರಧಾನ ಸಂಪಾದಕರು :
ಖಾದ್ರಿ ಶಾಮಣ್ಣ

ಸಂಪಾದಕರು :
ದೆ. ಲ. ಕೆರೂರ

ಪ್ರಕಾಶಕರು :
ಕರ್ನಾಟಕ ಪತ್ರಿಕಾ ಪ್ರೈ. ಲಿ.
ಹುಬ್ಬಳ್ಳಿ

ಕಚೇರಿ :
ಕಸ್ತೂರಿ ಕಾರ್ಯಾಲಯ ಹುಬ್ಬಳ್ಳಿ

ಕಲೆ :
ಕೆ. ಬಿ. ಕುಲಕರ್ಣಿ

ಮುದ್ರಣ :
ಸಂಯುಕ್ತ ಕರ್ನಾಟಕ ಪ್ರೆಸ್
ಹುಬ್ಬಳ್ಳಿ

ಮುಖಪುಟ :
ಶಬರಿಮಲೈ ಯಾತ್ರಿಕ
ಶ್ರೀ ಎಮ್. ವಿಶ್ವನಾಥ

ಚಂದಾದರ

| | | |
|---|---|---|
| ೩ ವರ್ಷ | (ಅಂಚೆ ಸೇರಿ) | ರೂ. ೩೫-೦೦ |
| ೨ ವರ್ಷ | " | ರೂ. ೨೫-೦೦ |
| ೧ ವರ್ಷ | " | ರೂ. ೧೪-೦೦ |
| ಅರ್ಧ ವರ್ಷ | " | ರೂ. ೭-೫೦ |

KASTURI April 1976

ಕಸ್ತೂರಿಯಲ್ಲಿ ಪ್ರಕಟಣೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವುದು. ಕಾಗದದ ಒಂದೇ ಮಗ್ಗುಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖನಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖನಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವುದು. ಅಸ್ವೀಕೃತ ಲೇಖನಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯ ಬೇಕುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. 'ಇದುವೆ ಜೀವ' ಮೊದಲಾದ ಚುಟುಕುಗಳನ್ನು ತಿರುಗಿ ಕಳಿಸಲು, ಆ ಬಗ್ಗೆ ಪತ್ರವ್ಯವಹಾರ ಮಾಡಲು ಸಾಧ್ಯವಿಲ್ಲ. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವುದು. ಲೇಖಕರು ತಮ್ಮ ಲೇಖನಗಳ ಸ್ವಕಪ್ರತಿಗಳನ್ನು ಕಾಯ್ದುಕೊಳ್ಳುವುದೊಳಿತು. ಲೇಖನಗಳು ಅಕಸ್ಮಾತ್ತಾಗಿ ಕಳೆದುಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖನ ಪ್ರಕಟವಾದರೆ, ಕಸ್ತೂರಿಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡುವುದು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

---

## ಚಂದಾದಾರರಿಗೆ ಸೂಚನೆ

ಪ್ರತಿ ತಿಂಗಳ ಕಸ್ತೂರಿ ಆಯಾ ತಿಂಗಳ ೧ ನೇ ದಿನಾಂಕದೊಳಗೆ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲುಪುವುದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲುಕಚೇರಿಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರ್ ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

ಅಧಿಕ ವರ್ಷದಲ್ಲೂ ಫೆಬ್ರವರಿ ಪ್ರಾರಂಭವಾಗುವ ವಾರ ೫ ಬಂದೇ ಬರುತ್ತವೆ. ಉದಾ: ೧೯೭೨ ರ ಫೆಬ್ರವರಿ ೫ ಮಂಗಳವಾರ ಇತ್ಯಾದಿ.

ನಾರ್ವೆ -ಎನ್. ಎಸ್. ಸೀತಾರಾಮರಾವ್

## 'ಗುಮಾಸ್ತನ ದಿನಚರಿ'

ಶ್ರೀ ಪಿ. ಪಿ. ಉಪಾಧ್ಯರವರು ಮಾರ್ಚ್ ತಿಂಗಳ 'ಕಸ್ತೂರಿ'ಯಲ್ಲಿ ಬರೆದ ಗುಮಾಸ್ತನ ದಿನಚರಿಯನ್ನು ಓದಿ ತುಂಬಾ ಸಂತೋಷವಾಯಿತು. ಇಂತಹ ಒಂದು ಚಿತ್ರಣವನ್ನು ಕೊಡಬೇಕಾದರೆ ಶ್ರೀಯುತರು ಸ್ವಅನುಭವದಿಂದ ಅವರ ಸ್ಥಿತಿಗತಿಗಳನ್ನು ಅರ್ಥಮಾಡಿಕೊಂಡು ಅವನ ಮನಸ್ಸಿನಲ್ಲಾಗುವ ತುಮುಲವನ್ನು ತುಂಬಾ ಸ್ವಾರಸ್ಯವಾಗಿ ಬರೆದಿದ್ದಾರೆ ಎನ್ನಬಹುದು ತಿಂಗಳ ಕೊನೆಯಲ್ಲಿ ಬಚ್ಚಲ ಮನೆಯಲ್ಲಿ ಟೂತ್‌ಪೇಸ್ಟ್ ಮತ್ತು ಸಾಬೂನುಗಳು ನೀಡುವ ಆರ್ಥಿಕ ಪ್ರಜ್ಞೆ ಗಮನಾರ್ಹ. ಇಂತಹವನ ಬಗ್ಗೆ ಸಮಾಜದ ಜನತೆ ಇಟ್ಟಿರುವ ಮನೋಭಾವನೆ, ಈ ಗುಮಾಸ್ತ ಆ ಜನತೆಯನ್ನು ತಾತ್ವಿಕ ದೃಷ್ಟಿಯಿಂದ ನೋಡುವ ರೀತಿ ಆಗ ಮನಸ್ಸಿನಲ್ಲಾದ ಮಾರ್ಮಿಕ ಹೋರಾಟ ವಾಸ್ತವಿಕವಾದರೂ ಅವನ್ನು ಕೃತಿ ರೂಪದಲ್ಲಿ ತರಲಾರದೆ ತಿಣಕಾಡುವ ಸ್ಥಿತಿಯನ್ನು ಉಪಾಧ್ಯರವರು ಚೆನ್ನಾಗಿ ಕಥೆಯಲ್ಲಿ ಮೂಡಿಸಿದ್ದಾರೆ.

ಮುಂಜಾನೆಯ ರಸಿಕತೆಯು ಸಂಜೆ ಮುಸುರಿನಂತೆ ಮಾಯವಾಗಿ ಮನೆಯನ್ನು ಸೇರಿದರೆ ಸಾಕೆಂಬ ಕಾತುರದಲ್ಲಿ ಒಂದು ದಿನದ ಕಾಲಚಕ್ರ ಉರುಳುವಿಕೆಯನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

-ಎಂ. ಎನ್. ಮಂಜೇಗೌಡಾ ಅಮರೇಗೌಡಾ

## ಅಪರೂಪದ ತಿಂಗಳು

ಮಾರ್ಚ ೧೯೭೬ರ 'ಕಸ್ತೂರಿ'ಯಲ್ಲಿ ಪ್ರಕಟವಾಗಿರುವ, "ಅಪರೂಪದ ತಿಂಗಳು ಐದು ಭಾನುವಾರಗಳ ಫೆಬ್ರವರಿ'' ಓದಿದೆ. ಇದು ಇಪ್ಪತ್ತೆಂಟು ವರ್ಷಗಳಿಗೊಮ್ಮೆ ಮಾತ್ರ ಬರುತ್ತದೆ ಎಂಬುದು ಸರಿಯಲ್ಲ. ೧೯೨೦, ೧೯೪೮, ೧೯೭೬, ೨೦೦೪, ೨೦೩೨, ೨೦೬೦, ೨೦೮೮ ಈ ಇಸವಿಗಳ ಅಂತರ ೨೮ ವರ್ಷಗಳು ನಿಜ. ಆದರೆ ೧೯೨೦ಕ್ಕೆ ೨೮ ವರ್ಷಗಳ ಮೊದಲು, ಅಂದರೆ ೧೮೯೨ ರ ಫೆಬ್ರವರಿಯಲ್ಲಿ ಐದು ಭಾನುವಾರಗಳಿರಲಿಲ್ಲ. ಐದು ಸೋಮವಾರಗಳು ಮಾತ್ರ ಇದ್ದವು. ಹಾಗೆಯೇ ೨೦೮೮ ರ ನಂತರ ೨೮ ವರ್ಷಗಳಿಗೆ, ಎಂದರೆ, ೨೧೧೬ ರ ಫೆಬ್ರವರಿಯಲ್ಲಿ ಕೂಡ ೫ ಭಾನುವಾರಗಳು ಬರುವುದಿಲ್ಲ. ಅದರಲ್ಲಿ ೫ ಶನಿವಾರಗಳಿವೆ. ೧೯೨೦ ಕ್ಕೆ ೨೮ ವರ್ಷಗಳ ಮೊದಲು ಯಾವ ಫೆಬ್ರವರಿಯಲ್ಲೂ ೫ ಭಾನುವಾರಗಳಿಲ್ಲ. ಆದರೆ ೧೮೮೦ ರಲ್ಲಿ ೫ ಭಾನುವಾರಗಳಿವೆ. ಅದರಂತೆ ೨೦೮೮ ರ ನಂತರ ೨೧೨೮ ರ ಫೆಬ್ರವರಿಯಲ್ಲಿ ೫ ಭಾನುವಾರಗಳಿವೆ. ಅಂದರೆ ೧೮೮೦-೧೯೨೦, ಮತ್ತು ೨೦೮೮-೨೧೨೮ ಈ ಇಸವಿಗಳ ಅಂತರ ೪೦ ವರ್ಷಗಳ

## ಅಫಜಲ್ ಖಾನ

'ಹತ್ಯಾಕಾರಿ ಅಫಜಲ್‌ಖಾನ' ಎಂಬ ಚಿಕ್ಕ ಲೇಖನ ಕುತೂಹಲದಿಂದ ಓದಿದೆ. ಹತ್ಯಾಕಾಂಡ ನಡೆದ ಸ್ಥಳ ಮಹಾರಾಷ್ಟ್ರದ ಜಾವಳಿ ಗ್ರಾಮವಲ್ಲ; ಅದು ಬಿಜಾಪೂರದ ಹತ್ತಿರವಿರುವ ಒಂದು ಚಿಕ್ಕ ಸರೋವರದಲ್ಲಿ. ಆ ಸರೋವರ ಬಿಜಾಪೂರದಿಂದ ೫-೬ ಮೈಲಿನಲ್ಲಿ, ತೊರವೀ ಗ್ರಾಮದ ಸಮೀಪದಲ್ಲಿರುವದು. ಅದು ಇಂದಿಗೂ ಮುಹಮ್ಮದ ಸರೋವರ ಎಂಬ ಹೆಸರಿನಲ್ಲಿರುವದು. ಅಲ್ಲಿ ಈಗಲೂ 'ತಿರಸಸ್ಟ ಗೋರಿ' ಅಥವಾ ಅರವತ್ತಮೂರು ಗೋರಿಗಳು ಎಂಬುದಾಗಿ ಪ್ರಸಿದ್ಧವಾಗಿವೆ. ಜನರು ಅಲ್ಲಿಗೆ ಹೋಗಿ ಪ್ರತ್ಯಕ್ಷವಾಗಿ ನೋಡಿಕೊಂಡು ಬರಬಹುದು. ಅಲ್ಲಿಯ ಪ್ರಚಲಿತ ಕಥೆ ಬೇರೆ ಇದೆ.

ಅಫಜಲ್‌ಖಾನನನ್ನು ಶಿವಾಜಿಯ ಜತೆಗೆ ಸಂಧಾನಕೋಸ್ಕರ ಕಳಿಸಬೇಕೆಂದು ನಿಶ್ಚಯವಾಯಿತು. ಅವನಿಗೆ ಜೋತಿಷ್ಯದಲ್ಲಿ ಬಹಳೇ ನಂಬಿಕೆ. ವಿಜಾಪೂರದ ಜ್ಯೋತಿಷಿ ಅಫಜಲ್‌ಖಾನನು ಮರಳಿ ಬರುವದಿಲ್ಲವೆಂಬುದಾಗಿ ಹೇಳಿದವಂತೆ. ಹೀಗಾಗಿ ತನ್ನ ಎಲ್ಲ ೬೪ ಹೆಂಡಂದಿರನ್ನು ಕೊಲ್ಲುವುದಾಗಿ ನಿಶ್ಚಯಿಸಿದ. ಅದರಂತೆ ಆ ಸ್ಥಳದಲ್ಲಿ ೬೩ ಜನರನ್ನು ಕೊಂದನಂತೆ. ಅರವತ್ನಾಲ್ಕನೇಯವಳನ್ನು ಬೆನ್ನಟ್ಟಿ ಆ ಸ್ಥಳದಿಂದ ೮-೧೦ ಮೈಲಿನ ಮೇಲೆ ಕೊಂದನೆಂದು ಪ್ರತೀತಿ.

ಮುಹಮ್ಮದೀಯರು ತಾವು ಮೃತರಾದ ನಂತರ ತಮಗಾಗಿ ವಿಶೇಷ ಸ್ಥಳವನ್ನು ಮೊದಲೇ ಕಾದಿರಿಸುತ್ತಿದ್ದರು. ಮತ್ತು ಅಲ್ಲಿ ದೊಡ್ಡದಾದ ಮಸೀದೆ, ತೋಜಾ ಅಥವಾ ಮಹಲನ್ನು ಕಟ್ಟಿಸುತ್ತಿದ್ದರು. ಅದರಂತೆ ಮುಹಮ್ಮದ್ ಅಫಜಲ್‌ಖಾನನು ಒಂದು ಮಹಲನ್ನು ವಿಜಾಪೂರದ ಹತ್ತಿರವಿರುವ ದರ್ಗಾ ಎಂಬ ಗ್ರಾಮದ ಹತ್ತಿರ ಕಟ್ಟಿಸಿದ್ದನು. ಆದರೆ ದುರ್ದೈವದಿಂದ ಅವನ ಮೃತ ಶರೀರದ ಸಂಸ್ಕಾರ ಅಲ್ಲಿ ಆಗಲಿಲ್ಲ.

ಮದ್ರಾಸ -ಮನೋಹರ ಕೃ. ಜೋಶಿ

## ಜೀವನ-ವಿಜ್ಞಾನ

ಶ್ರೀಯುತ "ರಾಗೋ''ರವರು ಮಾರ್ಚ್ ೭೬ ರ "ಕಸ್ತೂರಿ''ಯಲ್ಲಿ ಪ್ರಚುರಪಡಿಸಿದ "ವೈಜ್ಞಾನಿಕ ಹಿನ್ನೆಲೆಯಲ್ಲಿ ಜೀವನಕ್ಕೆ ಅರ್ಥವಿದೆಯೇ?'' ಲೇಖನದ ಬಗ್ಗೆ ನನ್ನ ಅನಿಸಿಕೆ ಹೀಗಿದೆ:

ಲೇಖನದ ಸಂಕೀರ್ಣ ವಾಚನದಿಂದ "ಮನುಷ್ಯ ಶರೀರವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿರುವ ಲೇಖಕರು ಆವನ ಜೀವನವನ್ನು ಅದೇ ವಿಧದಲ್ಲಿ ಸಂಶ್ಲೇಷಿಸುವಲ್ಲಿ ಸೋತಿದ್ದಾರೆ", ಎನಿಸುತ್ತದೆ. ಈ ಸೋಲಿಗೆ ಕಾರಣವೂ

ಇಲ್ಲದಿಲ್ಲ

ಸರಸ ಜನನ, ವಿರಸ ಮರಣ, ಸಮರಸವೇ ಜೀವನ- ಎಂದಿದ್ದಾರೆ ವರಕವಿ ಡಾ. ದ. ರಾ. ಬೇಂದ್ರೆ ಅವರು. ಸರಸ, ವಿರಸ, ಸಮರಸ ಇವೆಲ್ಲ ಮನುಷ್ಯನ ಕಲ್ಪನೆಗಳು. ಕಲ್ಪನೆಯೊಂದಿಲ್ಲವಾದಲ್ಲಿ ಮನುಷ್ಯ ಜೀವಿಸುವುದೇ ದುಸ್ತರ. ಕಲ್ಪನೆಯೇ ಜೀವನವೇನೋ ಎನ್ನುವಷ್ಟರ ಮಟ್ಟಿಗೆ ಕಲ್ಪನೆ ಜೀವನದಲ್ಲಿ ಆಳವಾಗಿ ಬೇರೂರಿದೆ. ಕಲ್ಪನೆಗೂ ಜೀವನಕ್ಕೂ ಅಷ್ಟೊಂದು ನಂಟು.

ಆದರೆ, ವಿಜ್ಞಾನದ ಸಮಾಚಾರ ಹೀಗಲ್ಲ. ವಿಜ್ಞಾನಕ್ಕೆ ಬೇಕಿರುವುದು ಕಲ್ಪನೆಯಲ್ಲ, ವಾಸ್ತವ್ಯ. ಹೀಗೆ ಕಲ್ಪನಾಧಾರಿತ ಜೀವನ ಹಾಗೂ ವಾಸ್ತವ್ಯಾವಲಂಬಿತ ವಿಜ್ಞಾನ ಇವೆರಡೂ ಪರಸ್ಪರ ವಿರುದ್ಧ ದಿಕ್ಕಿನಲ್ಲಿರುವಾಗ ಒಂದನ್ನು ಇನ್ನೊಂದರ ದೃಷ್ಟಿಯಲ್ಲಿ ವೀಕ್ಷಿಸುವುದು ಸಾಧ್ಯವಿರಬಹುದಾದರೂ, ಸಾಧುವಲ್ಲ.

ಇನ್ನೊಂದು ವಿಚಾರ. ವಿಜ್ಞಾನ ಜೀವನವನ್ನು ನಿರೂಪಿಸುವುದಿಲ್ಲ. ವಿಜ್ಞಾನ ಜೀವನಕ್ಕೆ ಸೌಲಭ್ಯಗಳನ್ನು, ಸೌಕರ್ಯಗಳನ್ನು ಒದಗಿಸುತ್ತದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ವಿಜ್ಞಾನವು ಜೀವನಕ್ಕೆ ಪೂರಕವಾಗುತ್ತದೆ. ಇದರರ್ಥ ವಿಜ್ಞಾನವು ಜೀವನದೊಂದಿಗೆ ಸಾಯುಜ್ಯವನ್ನು ಪಡೆಯುತ್ತದೆಯೇ ಹೊರತು ವಿಜ್ಞಾನವೇ ಜೀವನವಾಗಲಾರದು. ಹೀಗೆ ಒಂದರೊಳಗೊಂದು ಸಮ್ಮಿಳನಗೊಂಡು, "ಏಕಮೇವ ಭಾವ" ಎನಿಸುವ ಜೀವನ ಹಾಗೂ ವಿಜ್ಞಾನಗಳನ್ನು ಬೇರ್ಪಡಿಸಿ, ಒಂದರ ಮುಖಾಂತರ ಇನ್ನೊಂದನ್ನು ನೋಡುವುದೂ ಸಹ ಸಾಧ್ಯವಿಲ್ಲ, ಸಾಧುವೂ ಅಲ್ಲ.

ಕೂಡ್ಲಿಗಿ -ಉಡುಪಿ ಅನಂತೇಶ ರಾವ್

## ದೀರ್ಘ ನಿರೀಕ್ಷೆ

ಹೇಮಲತಾ ಮಹಿಷಿಯವರ 'ದೀರ್ಘ ನಿರೀಕ್ಷೆ' ಮಾರ್ಚ್ ತಿಂಗಳ 'ಕಸ್ತೂರಿ'ಯಲ್ಲಿ ಮೂಡಿ ಬಂದ ಹೃದಯಂಗಮ ಲೇಖನ. ೩೦ ವರ್ಷಗಳು ಕಳೆದರೂ ಇನ್ನೂ ೨ನೇ ಮಹಾ ಯುದ್ಧದ, ಹಿಟ್ಲರನ ಮೇಲಿನ ಸೇಡನ್ನು ರುಡಾಲ್ಫ್ ಹೆಸ್‌ನ ಮೇಲೆ ತೀರಿಸಿಕೊಳ್ಳುವುದು ಮಿತ್ರ ರಾಷ್ಟ್ರಗಳ ಅಮಾನುಷತೆ. ಶ್ರೀಮತಿ ಹೆಸ್ ರುಡಾಲ್ಫ್ ಹೆಸ್‌ನ ಸ್ವಾಗತದ ಚಿಂತೆಯಲ್ಲಿರುವಾಗ ಮಿತ್ರ ರಾಷ್ಟ್ರಗಳು ಹೆಸ್ ಸತ್ತಾಗ ಅವನ ಹೆಣದ ವ್ಯವಸ್ಥೆಯ ಬಗೆ ಚಿಂತಿಸುತ್ತಿರುವುದು ಎಂಥ ವಿಪರ್ಯಾಸ!

ಹಿಟ್ಲರನ ಅಮಾನುಷತೆಯ ಕಾಲ ಮುಗಿದು ಜರ್ಮನಿ ಈಗ ಒಂದು ಸಾಮಾನ್ಯ ರಾಷ್ಟ್ರವಾಗಿದೆ. ಹೀಗಿರುವಾಗ ಇನ್ನು ರುಡಾಲ್ಫ್ ಹೆಸ್‌ನನ್ನು ಸೆರೆಯಲ್ಲಿಯೇ ಏಕಾಕಿಯಾಗಿಟ್ಟಿರುವುದು ಸಲ್ಲದು. ರುಡಾಲ್ಫ್‌ನು ಅಂತಿಮ ಕ್ಷಣಗಳನ್ನಾದರೂ ಹೆಂಡತಿ ಮಕ್ಕಳೊಡನೆ ಸುಖವಾಗಿ ಕಳೆಯಗೊಡುವುದರಲ್ಲದೆ ಮಿತ್ರ ರಾಷ್ಟ್ರಗಳ ಮಾನವೀಯತೆ!

ಬೆಳಗಾವಿ -ಎಂ. ಜಿ. ಶಿವಪ್ರಸಾದ್

## ರಾಜ ನರ್ತಕಿ

ಜೀವನ ವಿಪ್ಲವದ ಬಿರು ಸುಟ್ಟರೆಯಲ್ಲಿ ತೂರಿ ಹೋಗದೆ ಉಳಿದು ದುಃಖಾಗ್ನಿಯಿಂದ ಮೇಲೆದ್ದು ಸತ್ ಪಥಕ್ಕೆ ದಾರಿ ದೀಪಗಳಾದ ಆನಂದ, ವಿಮಲ ಮತ್ತು ಪಾಲಿಥೇರಿ ಪ್ರಾತಃ ಸ್ಮರಣೀಯ ಪಾತ್ರಗಳು ಗೋರೂರರದು ಕಮನೀಯ ಮನಂಬುಗುವ ಬರವಣಿಗೆ. ಸಂಗ್ರಹ ಸೊಗಸು. ಮಕ್ಕಳ ಭಿನ್ನ ಗುಣವನ್ನು ಎತ್ತಿ ಹಿಡಿಯುವ "ನಡೆ ಸಂಜಯ ಕಾರಾಗೃಹಕ್ಕೆ. ಒಬ್ಬ ಮಗ ತಾಯಿಯನ್ನು ಸಂಸಾರದ ಕಾರಾಗೃಹದಿಂದ ಮುಕ್ತಗೊಳಿಸಿದರೆ ಇನ್ನೊಬ್ಬ ಮಗ ತಂದೆಯನ್ನು ಕಾರಾಗೃಹಕ್ಕೆ ಹಾಕುತ್ತಿದ್ದಾನೆ" ಅನ್ನುವ ಮಾತು ಚಿಂತನೀಯ. "ದೇಹದ ಮಮತೆ ಮಿಥ್ಯ - ಇಂದಿರುವುದು ನಾಳೆಯಿಲ್ಲ. ದುಃಖ ನಿತ್ಯವಾದುದು. ದುಃಖದಿಂದ ಬಿಡುಗಡೆ ಹೊಂದಲು ಪ್ರಯತ್ನಿಸುವುದೇ ಮಾನವ ಕರ್ತವ್ಯ" ಅನ್ನುವ ಮಾತು ಮನನೀಯ.

ಕನಸಿನ ಕಷ್ಟ, ವಾಸ್ತವ ಜೀವನದ ಸುಖ ಎರಡೂ ಅಸ್ಥಿರ, ಅಶಾಶ್ವತ ಎನ್ನುವುದನ್ನು ಸಾರಿ ಹೇಳುವ ಶ್ರೀಮತಿ ಮಂಜುಳಾ ಪುಟ್ಟರಾಮಯ್ಯ ಇವರ ಸರಳ ಸುಂದರ ಲೇಖನ 'ವಿದೇಹ ಜನಕ' ಬಹು ಉಪಯುಕ್ತ.

ಡಾ ಶ್ರೀನಿವಾಸ ಹಾವನೂರರ "ಗರ್ವ ನಿನಗ್ಯಾಕೋ ತೆರ್ವಾಯ ಮನ.ಜಾ" ಲೇಖನ ಓದುವಾಗ ಅವರ್ಣನೀಯ ಆನಂದವಾಯ್ತು. ಇ. ಪಿ. ರೈಸ್, ಕಾಲ್ಡ್‌ವೆಲ್, ಕಿಟ್ಟೆಲ್, ಫ್ಲೀಟ್ ಹೀಗೆ ಎಷ್ಟು ಜನ ಆಂಗ್ಲ ಪಂಡಿತರಿಗೆ ಕರ್ನಾಟಕ ಚಿರಋಣಿಯೋ ಕಾಣೆ!

ಬಿಳಿಗೆರೆ -ಕೆ. ಕಾಳಯ್ಯ

ಮಾರ್ಚ್ ತಿಂಗಳ ಕಸ್ತೂರಿ ಸಂಚಿಕೆಯ ಪುಸ್ತಕ ವಿಭಾಗದಲ್ಲಿ ಪ್ರಕಟವಾದ "ರಾಜ ನರ್ತಕಿ" ಐತಿಹಾಸಿಕ ಕಥೆ ಬಹಳೇ ಸೊಗಸಾಗಿತ್ತು. ಶ್ರೀ ರಾಮಚಂದ್ರ ಠಾಕೂರರು ಬರೆದ ಗುಜರಾಥಿ ಕಾದಂಬರಿಯನ್ನು ಶ್ರೀ ಗೋರೂರು ರಾಮಸ್ವಾಮಿ ಅಯ್ಯಂಗಾರರು ಕನ್ನಡದಲ್ಲಿ ನೀಡಿ ಓದುಗರ ತನ್ಮನಗಳನ್ನು ಸೂರೆಗೊಂಡಿದ್ದಾರೆ. ಮಹಾರಾಣಿ ಆಗಬೇಕಾಗಿದ್ದ 'ಆಮ್ರಪಾಲಿ' ರಾಜನರ್ತಕಿಯಾಗಿ ಕೊನೆಗೆ ಆತ್ಮೋದ್ಧಾರಕ್ಕಾಗಿ ಬೌದ್ಧ ಸಂನ್ಯಾಸಿಣಿಯಾದುದನ್ನು ಅತ್ಯಂತ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಇಂಥ ಕಥೆಯನ್ನು ಓದುಗರಿಗಾಗಿ 'ಕಸ್ತೂರಿ' ಸಂಪಾದಕರು ನೀಡಿದ್ದಕ್ಕೆ ಅವರಿಗೆ ನನ್ನ ಧನ್ಯವಾದಗಳು.

ಕೊಣ್ಣೂರ -ವ್ಹಿ ಎಸ್. ಕೊಣ್ಣೂರ



ಕಸ್ತೂರಿ

ಸಂಚಿಕೆ : ೮ ಕಸ್ತೂರಿ, ಎಪ್ರಿಲ್ ೧೯೭೬ ವರ್ಷ : ೨೦

# ಸ್ಪರ್ಶಮಣಿ

ಆಚಾರ್ಯ ವಿನೋಬಾ ಭಾವೆ

ಬಾಪೂ ಸ್ಪರ್ಶಮಣಿಯಂತೆ ಇದ್ದರು. ಅವರ ಸ್ಪರ್ಶದಿಂದ ಕಬ್ಬಿಣ ಚಿನ್ನವಾಗುತ್ತಿತ್ತು. ಮಣ್ಣಿನಿಂದ ಮಹಾಪುರುಷರನ್ನು ಉತ್ಪನ್ನಮಾಡುವಷ್ಟು ಅವರ ಕೈಯಲ್ಲಿ ಚಮತ್ಕಾರವಿತ್ತು.. ಒರಟು ಜನರನ್ನು ಸಭ್ಯರನ್ನಾಗಿಸುತ್ತಿದ್ದರು. ಸಣ್ಣವರನ್ನು ದೊಡ್ಡವರನ್ನಾಗಿ ಮಾಡಬಲ್ಲವರಾಗಿದ್ದರು.

ಕೆಲವು ಕಾರಣಗಳಿಂದ ನಾನು ಅವರ ಬಳಿ ತಲುಪಿದೆ. ನನ್ನಂಥ ಅಸಭ್ಯ ಮನುಷ್ಯನನ್ನು ಸಭ್ಯನನ್ನಾಗಿ ಅಲ್ಲದಿದ್ದರೂ ಸೇವಕನನ್ನಾಗಿ ಖಂಡಿತ ಮಾಡಿದರು. ಬಾಪೂವಿನ ಚರಣಗಳಲ್ಲಿ ಉಳಿದು ನಾನು ಬಹಳಷ್ಟು ಕಲಿತಿದ್ದೇನೆ.

ಬಾಪುವಿನ ಹತ್ತಿರ ಮೊಟ್ಟ ಮೊದಲು ನಾನು ಆಶ್ರಮದಲ್ಲಿ ಹೋಗಿ ಸೇರಿದೆ. ಆಗ ನನಗೇನೂ ಬರುತ್ತಿರಲಿಲ್ಲ. ಈ ಹುಡುಗ ಸದ್ಭಾವನೆಯಿಂದ ಬಂದಿದ್ದಾನೆ ಎಂದು ಬಾಪೂ ಸಹ ತಿಳಿದಿದ್ದರು. ಮೊದಲ ದಿನ ತರಕಾರಿ ಸರಿ ಮಾಡುತ್ತ ನಮಗೆ ಕಲಿಸಿದರು. ನಾವು ತುಂಬ ಮಾತಾಡಿದೆವು. ಅಷ್ಟೇ. ಮತ್ತೆ ಯಾವ ದಿನವೂ ಕೆಲಸವಿಲ್ಲದೆ ಮಾತಾಡುವಂತೆಯೇ ಇಲ್ಲ. ಬಾಪೂ ಹೇಳುತ್ತಿದ್ದ ಮಾತನ್ನು ಕೇಳಿದೆ. ಮತ್ತೊಂದು ದಿನ ಒಬ್ಬ ಸೋದರನೊಡನೆ ಮಾತಾಡುತ್ತ ಬಾಪೂ ಹೇಳಿದರು, "ಇದು ಗೌಣ ಭಾಷೆ." ಆಗ ನಾನು ಹೇಳಿದೆ. "ಇಲ್ಲ, ಇದು ಭಕ್ತಿಯ ಭಾಷೆ." ಬಾಪೂ ಹೇಳಿದರು, "ಹೌದು ಈ ಮಾತು ಸರಿ. ಜ್ಞಾನದ ಭಾಷೆ ಮತ್ತು ಭಕ್ತಿಯ ಭಾಷೆ." ಆಗ ಇದೇನೊ ಇದೆ ಎಂದು ಎಲ್ಲರಿಗೂ ಅನಿಸಿತು.

ಇದರಲ್ಲಿ ಜನರದೇನೂ ತಪ್ಪಿಲ್ಲ. ಆಗ ನಾನು ಬಹಳ ಋಕ್ಷ ಮನುಷ್ಯನಾಗಿದ್ದೆ. ನನ್ನ ಕೆಲಸದಲ್ಲಿ ನಾನು ಮಗ್ನನಾಗಿರುತ್ತಿದ್ದೆ, ಯಾರಾದರೂ ಬಂದು ಕೇಳಿದರೆ, "ಬಂದಿದ್ದು ಏನು ಕಾರಣ?"

ಎಷ್ಟೋ ಸಾರಿ ಉತ್ತರಸಿಗುತ್ತಿತ್ತು. "ನಿಮ್ಮ ದರ್ಶನಕ್ಕಾಗಿ" ಎಂದು.

ಸರಿ, ಅಲ್ಲಿಗೆ ಮುಗಿಯಿತು. ಮಾತು ಕತೆ ಮುಗಿದೇ ಹೋಗುತ್ತಿತ್ತು. ನಾನು ಮಾಡುತ್ತಿರುತ್ತಿದ್ದ ಕೆಲಸವನ್ನು ಮತ್ತೆ ಪ್ರಾರಂಭಿಸುತ್ತಿದ್ದೆ. ಸ್ವಲ್ಪ ಸಮಯದಲ್ಲೇ ಅವರು ಹೊರಟು ಹೋಗಬೇಕಾಗುತ್ತಿತು, ಯಾರಾದರೂ ಮಾತಾಡಲು ಬಂದರೆ, ಭೆಟ್ಟಿ ಯಾಗಲು ಬಂದರೆ, ಅವರೊಡನೆ ಸ್ವಲ್ಪ. ಮಾತಾಡಬೇಕಾದರೆ ನನ್ನ ಮನಸ್ಸಿನಲ್ಲಿ ಇಂಥ ಗುಂಗು. ಯಾರಾದರೂ ದರ್ಶನಕ್ಕೆ ಬಂದಿ-ದ್ದೇವೆ. ಎಂದು ಹೇಳಿದರೆ, ಮಾತು ಮುಗಿದೇ ಹೋಯಿತು. ದರ್ಶನ ಮಾಡಿಕೊಳ್ಳಿ, ಮತ್ತೇನು?

ಅತ್ತ ಕಡೆ ಬಾಪೂ ಎಲ್ಲೆಲ್ಲೂ ನನ್ನ ಪ್ರಚಾರ ಮಾಡುತ್ತಿದ್ದರು. ನನ್ನ ಭೆಟ್ಟಿಗೆ ಜನರನ್ನು ಕಳಿಸುತ್ತಿದ್ದರು. ಖಂಡಿತ ನನ್ನನ್ನು ಭೆಟ್ಟಿ ಯಾಗಬೇಕು ಎಂದು ಅವರಿಗೆ ಹೇಳುತ್ತಿದ್ದರು. ಒಂದಿನ ಬಾಪೂ ಒಬ್ಬ ಪ್ರಖ್ಯಾತ ಕ್ರಾಂತಿಕಾರಿ ಯನ್ನು ನನ್ನ ಕಡೆಗೆ ಕಳಿಸಿದ್ದರು. ಸೇವಾ-ಗ್ರಾಮದಿಂದ ನನ್ನ ಪವನಾರ ಆಶ್ರಮವು ಮೂರು ಮೈಲು ದೂರ. ಆತ ನಡೆದು ಕೊಂಡೇ ಬಂದಿದ್ದರಿಂದ ದಣಿದಿದ್ದ. ಆಗ ನಾನು ನೆಲ ಅಗೆಯುತ್ತಿದ್ದೆ. ಕತ್ತೆತ್ತಿ ನೋಡಿದೆ. ಆ ಸೋದರ ನಿಂತಿದ್ದು ಕಾಣಿ ಸಿತು.

"ಏನು ಬಂದಿರಿ?" ಎಂದೆ.

"ಹೀಗೆ, ದರ್ಶನಕ್ಕಾಗಿ ಬಂದಿದ್ದೇನೆ."

ಮತ್ತೇನು? ಇನ್ನೇನೂ ಮಾತುಕತೆ ನಡೆಯಲಿಲ್ಲ. ನನ್ನ ಕೈಗಳು ಪುನಃ ಕೆಲಸಕ್ಕೆ ತೊಡಗಿದವು. ಅವರು ನಿಂತೇ ಇದ್ದರು. ಏನೂ ಮಾತಾಡಲಿಲ್ಲ. ಹಿಂತಿರುಗಿ ಹೋಗಿ ಬಾಪೂ ಬಳಿ ದೂರಿದರು. "ನೀವು ಎಂಥ ಮನುಷ್ಯನ ಹತ್ತರ ನನ್ನನ್ನು ಕಳಿಸಿದಿರಿ? ಆತ ಒಂದು ಮಾತು ಕೂಡ ಆಡಲಿಲ್ಲ."

ಬಾಪು ತಿಳಿದುಕೊಂಡು ಬಿಟ್ಟರು.

"ನೀವು ಹೋದಾಗ ಆತ ಏನು ಮಾಡು ತ್ತಿದ್ದ?" ಎಂದು ಬಾಪೂ ವಿಚಾರಿಸಿದರು.

"ಜಮೀನು ಅಗೆಯುತ್ತಿದ್ದರು."

"ಸಿಟ್ಟು ಮಾಡಿಕೊಳ್ಳುವದೇನಿದೆ ಇದ ರಲ್ಲಿ? ವಿನೋಬಾ ತನ್ನ ಕೆಲಸ ಮಾಡುತ್ತಿದ್ದ. ಆಗ ನಿಮ್ಮೊಡನೆ ಹೇಗೆ ಮಾತನಾಡಿಯಾನು? ತಮ್ಮಾ, ಯಾರನ್ನಾದರೂ ಕಾಣಬೇಕಿದ್ದರೆ ಅವರಿಂದ ಸಮಯ ಪಡೆದು, ನೀವು ಹೋಗಿ ಭೆಟ್ಟಿಯಾಗಬೇಕು ಎಂಬದು ನಿಮಗೆ ಗೊತ್ತಿಲ್ಲ ವಲ್ಲ."

ಈ ರೀತಿ ಬಾಪೂ ಅವರಿಗಂತೂ ತಿಳಿಸಿ ಹೇಳಿದರು. ಆ ಮೇಲೆ ನನ್ನನ್ನು ಸಂಧಿಸಿ ದಾಗ, ಆ ಕ್ರಾಂತಿಕಾರಿ ಸಹೋದರನ ನೆನಪು ಮಾಡಿಕೊಂಡು ನನ್ನೊಡನೆ ಜಗಳವಾಡಿದರು.

"ಒಳ್ಳೇ ಮನುಷ್ಯ! ಯಾರಾದರೂ ಬಂದರೆ ಅವರೊಡನೆ ಕಲೆತು ಮಾತನಾಡುವದೂ ಒಂದು ಬಗೆಯ ಕೆಲಸ. ಅದೂ ಕೆಲಸದ ಒಂದು ಪ್ರಕಾರ."

ಬಾಪೂದು ಅಂಥದೇ ರೀತಿ ಪ್ರೇಮದಿಂದ, ಸವಿಯಾದ ತಿಳಿಹೇಳುವಿಕೆಯಿಂದ ನಮ್ಮ ತಪ್ಪನ್ನು ತಿಳಿಸಿಕೊಡುತ್ತಿದ್ದರು. ಅವರ ಕೈಯಲ್ಲೇ ನಾನು ಮೆಲ್ಲಮೆಲ್ಲನೆ ಪಳಗಿದ್ದೇನೆ. ಅವರ ಚರಣಗಳಲ್ಲಿ ಕುಳಿತು ಅಸಭ್ಯ ಮನುಷ್ಯ ನಾದ ನಾನು ಸೇವಕನಾಗಿದ್ದೇನೆ. ✡

(ಶ್ರೀ ಖಾದ್ರಿ ಶಾಮಣ್ಣ ಅನುವಾದಿಸಿದ ಆಚಾರ್ಯ ವಿನೋಬಾರ 'ನಾನು ಕಂಡ ಗಾಂಧೀಜಿ'ಯಿಂದ)



ಗೂಢಚಾರರು ಹೇಳಿದ್ದನ್ನೆಲ್ಲ ನಂಬಬೇಕಂತಿಲ್ಲ. ಎಷ್ಟಾದರೂ ಇವರು ಹಣದಾಸೆ ಗಾಗಿ ಯಾವ ಅಳಿಗಜ್ಜಕ್ಕೂ ಹೇಸದವರು ಆದ್ದರಿಂದ 'ಪ್ರಮಾಣಂ ಏಕವಾಕ್ಯೇ ಸಂಪ್ರತ್ಯಯಃ' ಎಂದರೆ ಮೂವರು ಗೂಢಚಾರರು ಒಂದೇ ಬಗೆಯ ಸುದ್ದಿ ಹೇಳಿದರೆ ಮಾತ್ರ ನಂಬತಕ್ಕದ್ದು.

—ಆರ್ಯ ಚಾಣಕ್ಯ

# ಜಿ. ಎಸ್. ಶಿವರುದ್ರಪ್ಪ ಮತ್ತು ಅವರ ವಿಚಾರಗಳು



ನಮ್ಮ ವೈಚಾರಿಕ ಆವರಣದಲ್ಲಿ ಈಗ ಎರಡು ರೀತಿಯ ವ್ಯಕ್ತಿಗಳನ್ನು ಪ್ರಮುಖವಾಗಿ ಗುರುತಿಸಬಹುದು; ಹಳೆಯದೆಲ್ಲವೂ ಪವಿತ್ರ, ತೀರ್ಥವೆನ್ನುವ ಸಂಪ್ರದಾಯವಾದಿಗಳು ಮತ್ತು ಹಳೆಯದೆಲ್ಲವೂ ಗೊಡ್ಡು, ಕೊಳಕು ಎನ್ನುವಂಥ ಉಗ್ರಗಾಮಿಗಳು, ಈ ನಡುವೆ ನಮ್ಮ ಚಿಂತನೆಯ ಕ್ಷೇತ್ರದಲ್ಲಿ ಉದಾರ ಮನೋಧರ್ಮದ ವ್ಯಕ್ತಿಗಳು ಕಡಿಮೆ. ಈ ಉದಾರವಾದಿ ಚಿಂತಕರ ವಿಚಾರದ ಸ್ಪಷ್ಟ ಸ್ವರೂಪವನ್ನು ಸೆಳೆದುಕೊಳ್ಳುವ ಆಸಕ್ತಿ ನನ್ನದು. ನಮ್ಮ ನಾಡಿನ ಆಧುನಿಕ ವೈಚಾರಿಕತೆ ಬೆಳೆದು ಬಂದ ಬಗೆಯನ್ನು ಅರ್ಥಮಾಡಿಕೊಳ್ಳಲು ಕೂಡ ಈ ವಿಧಾನ ಒಳ್ಳೆಯದೆಂದು ನಾನು ನಂಬಿದ್ದೇನೆ. ಈ ಬಗೆಯ ಲಿಬರಲ್ ಧೋರಣೆಯ ವ್ಯಕ್ತಿಗಳಲ್ಲಿ ಡಾ. ಜಿ. ಎಸ್. ಶಿವರುದ್ರಪ್ಪನವರೂ ಒಬ್ಬರಾಗಿದ್ದಾರೆ.

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಡಾ. ಜಿ. ಎಸ್. ಎಸ್. ಸಾಹಿತ್ಯ ಮತ್ತು ಶಿಕ್ಷಣ ಕ್ಷೇತ್ರಗಳೆರಡರಲ್ಲೂ ಬೆರಳೆಣಿಕೆಯ ನಮ್ಮ ಸಮಕಾಲೀನ ಗಣ್ಯರ ಸಾಲಿನಲ್ಲಿದ್ದಾರೆ. ಕಳೆದ ಎರಡೂವರೆ ದಶಕದ ಇವರ ಕಾವ್ಯ ಹಾಗೂ ಜೀವನ ಕುತೂಹಲಕಾರಿಯಾದ ಬದಲಾವಣೆಯ ಘಟ್ಟಗಳನ್ನು ಕಂಡಿವೆ. ಯಾವುದೇ ಹೊಸ ವಿಚಾರ ಇವರ ಮನಸ್ಸಿಗೆ ಖಚಿತವಾಗಿ ಹಿಡಿಸಿತೆಂದರೆ ಅದು ಅವರ ಈ ತನಕದ ಧೋರಣೆಗಳಿಗಿಂತ ಎಷ್ಟೇ ಭಿನ್ನವಾಗಿದ್ದರೂ ಕೂಡ ಆಕಡೆಗೆ ಮುನ್ನುಗ್ಗುವ ಎಚ್ಚರ ಇವರ ರಕ್ತದಲ್ಲಿದೆ, ಎಂತಲೇ ಕರ್ನಾಟಕದ ಸಾಹಿತ್ಯ ಮತ್ತು ವೈಚಾರಿಕ ಆವರಣದ ಶಕ್ತ, ಪ್ರತಿಭಾನ್ವಿತ ತರುಣರನೇಕರು ಪ್ರೊ. ಶಿವರುದ್ರಪ್ಪನವರ ಆರೋಗ್ಯಕರ ಮನಸ್ಸಿನ ಪಕ್ಷಪಾತಿಗಳಾಗಿದ್ದಾರೆ,

"ಹೊಗಳಿಕೆ ತೆಗಳಿಕೆಗಳೆರಡರ ಜೊತೆಜೊತೆಗೆ ಬೆಳೆದುಬಂದ ನನಗೆ, ನನ್ನ ಗುಣದೋಷಗಳ ಅರಿವು ಚೆನ್ನಾಗಿದೆ; ಇದೇ ನನ್ನ ಶಕ್ತಿ ಕೂಡಾ," ಎಂದು ಜಿ. ಎಸ್. ಎಸ್. ಆಗಾಗ ಹೇಳುವ ಮಾತುಗಳನ್ನು ಅವರ ಆತ್ಮೀಯರು ಬಲ್ಲರು. ಸುಲಭವಾಗಿ ಮೋಸಗೊಳಿಸಬಹುದಾದ ಸರಳ ಮೃದು ಮನಸ್ಸುಳ್ಳ ಇವರು ತಾವು ಮೋಸಕ್ಕೊಳಗಾದ ಸೂಚನೆಯ ಸಣ್ಣ ಎಳೆ ಕಾಣಿಸಿಕೊಳ್ಳುತ್ತಿದ್ದಂತೆಯೇ ಕೆರಳಿ ಪ್ರತಿಭಟಿಸುವ ಕೆಚ್ಚನ್ನೂ ಪಡೆದಿದ್ದಾರೆ. ಸಾಕಷ್ಟು ಪೂರ್ವ

---

ಕಾಳೇಗೌಡ ನಾಗವಾರ

---

ಸಿದ್ಧತೆಯ ಖಚಿತ ನಿರ್ಧಾರದ ಅಧ್ಯಾಪಕರಾದ ಜಿ ಎಸ್. ಎಸ್. ತಮ್ಮ ಬಹುಪಾಲು ಶಿಷ್ಯರ ಮೆಚ್ಚಿನ ಗುರುಗಳು. ಬಡತನದ ಅನುಭವ ವನ್ನು, ಬಾಲ್ಯದಲ್ಲಿ, ಸಾಕಷ್ಟು ಪಡೆದಿರುವ ಇವರು ಮಲೆನಾಡಿನ ಶಿಕಾರಿಪುರದ ಕಡೆಯ ಶಾಲಾಮಾಸ್ತರ ಶಾಂತವೀರಪ್ಪನವರ ಮಗ. ಓದು ಮುಗಿದು ತರುಣ ಕವಿ ಮತ್ತು ಅಧ್ಯಾ ಪಕರಾಗಿ ಮುನ್ನಡೆಯುವ ಕಾಲಕ್ಕೆ ಕುವೆಂಪು ರವರಂಥ ಸ್ವಾಭಿಮಾನದ ಹಿರಿಯ ಚೇತನಗಳ ಪ್ರಭಾವಕ್ಕೆ ಒಳಗಾದರು. ಮುಂದೆ ಕೂಡ ಓದು, ಬರಹ, ಬದುಕಿನಲ್ಲಿ ಉತ್ತಮ ಬೆಳ ವಣಿಗೆಯನ್ನು ಕಂಡುಕೊಂಡ ಶಿವರುದ್ರಪ್ಪ ನವರು ಏಳೆಂಟು ಕವನ ಸಂಕಲನಗಳು, ನಾಲ್ಕಾರು ವಿಮರ್ಶೆಯ ಪುಸ್ತಕಗಳು, ಒಂದೊಂದು ಕಾದಂಬರಿ ಹಾಗೂ ಪ್ರವಾಸ ಕಥನಗಳ ಕರ್ತೃ ಮತ್ತು ಹಲವಾರು ಗ್ರಂಥ ಗಳ ಸಂಪಾದಕರಾಗಿ ಗಣನೀಯವಾದ ಯಶಸ್ಸು ಗಳಿಸಿದ್ದಾರೆ.

ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕ ರಾದ ಇವರ ಹಿರಿತನದಲ್ಲಿ ಪ್ರತಿ ವರ್ಷವೂ ನಡೆಯುವ ವಿಚಾರ ಸಂಕಿರಣಗಳಲ್ಲಿ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂದರ್ಭದ ಮೌಲ್ಯ ವಿವೇಚನೆಯು ನಮ್ಮ ಸಮಕಾಲೀನ ತುರ್ತಿನ ಒತ್ತನ್ನು ಒಳಗೊಂಡಿರುವಿಕೆಯು ಪ್ರಮುಖ ಸಂಗತಿಯಾಗಿದೆ. ಹೊಗಳಿಕೆ ತೆಗಳಿಕೆ ಗಳ ಆಯುಧಗಳ ಜೊತೆಗಿನ ಈ ಸೂಕ್ಷ್ಮ ಸರಸಕ್ಕೆ ಯಾರು ಹಿಂಜರಿದರೂ ಜಿ. ಎಸ್. ಎಸ್. ಮಾತ್ರ ಮುಕ್ತ ಮನಸ್ಸಿನಿಂದ ಮುನ್ನುಗ್ಗುವವರೇ ಆಗಿದ್ದಾರೆ. ಸಾಹಿತ್ಯ ಚರಿತ್ರೆ ಸಾಹಿತ್ಯ ವಾರ್ಷಿಕ, ಹಸ್ತಪ್ರತಿಯೇ ಮುಂತಾದ ಹಲವು ಹತ್ತು ಯೋಜನೆಗಳ ಸಫ ಲತೆಗಾಗಿ ನಗುಮುಖ ಮತ್ತು ಅರಳಿದ ಮನಸ್ಸಿನಿಂದ ತಮ್ಮ ಸಹೋದ್ಯೋಗಿಗಳ ಜೊತೆಗೆ ದುಡಿಯುವ ಇವರಿಗೆ ಬಿಡುವು ಸಿಗು ವುದೇ ಅಪರೂಪ.

ಇದೀಗ ತಮ್ಮ ಜೀವನದಲ್ಲಿ ಐವತ್ತನೆಯ ವಸಂತವನ್ನು ಕಾಣುತ್ತಿರುವ ನನ್ನ ಪ್ರಿಯ ಗುರುಗಳಾದ ಪ್ರೊ. ಶಿವರುದ್ರಪ್ಪನವರು

---

ಕನ್ನಡ ಓದುಗರಿಗೆ ಕವಿ, ವಿಮರ್ಶಕ ಎಂದೇ ಹೆಚ್ಚಾಗಿ ಪರಿಚಿತರಾಗಿರುವ ಶ್ರೀ ಜಿ. ಎಸ್. ಶಿವರುದ್ರಪ್ಪನವರು ಹೆಸರಾಂತ ಕನ್ನಡ ಪ್ರಾಧ್ಯಾಪಕರು ಕೂಡ. ಶಿವಮೊಗ್ಗಾ ಜಿಲ್ಲೆಯ ಶಿಕಾರಿಪುರದಲ್ಲಿ ೧೯೨೬ ರ ಫೆಬ್ರುವರಿ ೭ ರಂದು ಜನಿಸಿದ ಅವರು ಪ್ರತಿಭಾನ್ವಿತ ವಿದ್ಯಾರ್ಥಿ, ಬಿ. ಎ., ಎಂ. ಎ. ಎರಡರಲ್ಲೂ ಪ್ರಥಮ ಶ್ರೇಣಿಯಲ್ಲಿ ಪ್ರಥಮರಾಗಿ ಉತ್ತೀರ್ಣರಾದರು. ೧೯೬೦ ರಲ್ಲಿ ಮೈಸೂರು ವಿಶ್ವ ವಿದ್ಯಾನಿಲಯದ ಡಾಕ್ಟರೇಟನ್ನೂ ಸಂಪಾದಿಸಿದರು. ೧೯೪೯ ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಲೆಕ್ಚರರ್ ಆಗಿ ವೃತ್ತಿ ಜೀವನವನ್ನಾರಂಭಿಸಿದ ಅವರು ಮುಂದೆ ಎರಡು ವರ್ಷ ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥ ರಾಗಿದ್ದರು. ಸದ್ಯ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರೂ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರೂ ಆಗಿದ್ದಾರೆ. ಈ ಸಂಸ್ಥೆಯ ನಿರ್ದೇಶಕರಾಗಿ ಅವರು ಕನ್ನಡವು ಸಮರ್ಥ ಶಿಕ್ಷಣ ಮಾಧ್ಯಮವಾಗಿ ರೂಪುಗೊಳ್ಳುವಂತೆ ಹಲವಾರು ಯೋಜನೆಗಳನ್ನು ಹಾಕಿಕೊಂಡು ಕಾರ್ಯರೂಪಕ್ಕಿಳಿಸತೊಡಗಿದ್ದಾರೆ. ನವೋದಯ, ನವ್ಯ ಎರಡೂ ಬಗೆಯ ಕಾವ್ಯ ಮಾಧ್ಯಮಗಳನ್ನು ಅವರು ಸಮರ್ಥವಾಗಿ ಬಳಸಿ ಕೊಂಡಿದ್ದಾರೆ. ಸಾಹಿತ್ಯ ವಿಮರ್ಶೆಯಲ್ಲಿ ಅವರ ವಿಚಾರಗಳು ಸಮತೂಕದವೆಂದು ಮನ್ನಣೆ ಪಡೆದಿವೆ. ಅವರು ಸಂಪಾದಿಸಿದ ಗ್ರಂಥಗಳು ಅವರ ಪಾಂಡಿತ್ಯಕ್ಕೆ ನಿದರ್ಶನ, ೧೯೭೨ ರಲ್ಲಿ ಸಾಂಸ್ಕೃತಿಕ ವಿನಿಮಯದ ಯೋಜನೆಯೊಂದರ ಪ್ರಕಾರ ಸೋವಿಯೆಟ್ ರಶಿಯಾವನ್ನು ಸಂದರ್ಶಿಸಿ ಬಂದರು. ಅವರ ಫಲವಾಗಿ ಬಂದ 'ಮಾಸ್ಕೋದಲ್ಲಿ ೨೨ ದಿನ' ಎಂಬ ಅವರ ಕೃತಿಗೆ ನಂತರ 'ಸೋವಿಯೆಟ್ ಲ್ಯಾಂಡ್' ಬಹುಮಾನ ಬಂತು.

ಅಬ್ಬರ ಆಡುಂಬರಗಳಿಂದ ದೂರವಾಗಿ ತಮ್ಮ ಎಂದಿನ ಪೂರ್ಣ ಲವಲವಿಕೆಯ ಬದುಕು, ಬರಹ, ದುಡಿಮೆಗಳಲ್ಲಿ ಲೀನವಾಗಿರುವಾಗ 'ಕಸ್ತೂರಿ' ಮಾಸಪತ್ರಿಕೆಯ ಪರವಾಗಿ ಕೆಲವು ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆದಿದ್ದೇನೆ.

**ಪ್ರ: ಸದ್ಯದ ಸಾಹಿತ್ಯಕ ವಾತಾವರಣ ಇಷ್ಟು ಜಡವಾಗಿರಲು ಕಾರಣವೇನು?**

ಉ: ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಆವಿಷ್ಕಾರಗಳ ಸಾಧ್ಯತೆ ಒಂದು ನಿಲುಗಡೆಗೆ ಬಂದಿರುವುದೇ ಈ ಜಡತೆಗೆ ಕಾರಣವಾಗಿದೆ. ಹೊಸಗನ್ನಡ ಸಾಹಿತ್ಯದ ಈ ಅರ್ಧ ಶತಮಾನದಲ್ಲಿ ಆಗಲೇ ನವೋದಯ, ಪ್ರಗತಿಶೀಲ ಮತ್ತು ನವ್ಯ ಎಂಬ ಮೂರು ಸಾಹಿತ್ಯ ಚಳುವಳಿಗಳು ಬಂದು ಹೋಗಿವೆ. ಇವುಗಳು ಅಭಿವ್ಯಕ್ತಿಯ ಸಾಧ್ಯತೆಗಳನ್ನು ಸಾಕಷ್ಟು ಸೂರೆ ಮಾಡಿ ಹೊಸ ಅನ್ವೇಷಣೆಗೆ ಅಗತ್ಯವಾದ ಒಂದು ಜಡಸ್ಥಿತಿಯನ್ನು ಉಂಟುಮಾಡಿವೆ. ಆದರೆ ಈ ಜಡಸ್ಥಿತಿಯಿಂದಲೇ, ಈಗ ನಿಜವಾದ ಬೇರೊಂದು ಸೃಜನಶೀಲವಾದ ವ್ಯಕ್ತಿ ವಿಶಿಷ್ಟಾಭಿವ್ಯಕ್ತಿಗಳು– ಪೂರ್ಣಚಂದ್ರತೇಜಸ್ವಿ ಶ್ರೀಕೃಷ್ಣ ಆಲನಹಳ್ಳಿ, ದೇವನೂರ ಮಹದೇವ, ಸಿದ್ಧಲಿಂಗಯ್ಯಾ ಇಂಥವರಿಂದ ರೂಪುಗೊಳ್ಳುತ್ತಿವೆ. ಈ ಕೆಲವರ ಬರವಣಿಗೆಗಳು ಇದುವರೆಗಿನ ಬರವಣಿಗೆಯಿಂದ ಭಿನ್ನವಾದ ಅನುಭವದ ವಲಯಗಳನ್ನು, ಸತ್ವವನ್ನು ಪ್ರಕಟಿಸುವಂತೆ ತೋರುವುದರಿಂದ ಈಗಿರುವ ಜಡಸ್ಥಿತಿ ತಾತ್ಕಾಲಿಕವೆಂದು ತೋರುತ್ತದೆ.

**ಪ್ರ: ಸಾಹಿತ್ಯ ಸೃಷ್ಟಿಯಲ್ಲಿ ಅಂತರ್ಮುಖತೆ ಮತ್ತು ಸಾಮಾಜಿಕ ಪ್ರಜ್ಞೆ ಎರಡೂ ಪರಸ್ಪರ ವಿರುದ್ಧವಾದುವುಗಳೆ?**

ಉ: ಇವೆರಡೂ ಪರಸ್ಪರ ವಿರುದ್ಧವಾದುವುಗಳಲ್ಲ. ತಾನು ವ್ಯಕ್ತಿಯಾಗಿ ಪಡೆದ ಸಮಸ್ತಾನುಭವಗಳನ್ನು ತನ್ನಲ್ಲಿ ಅರಗಿಸಿ, ಕರಗಿಸಿ ಪರಿಭಾವನೆಗೆ ನಿಲ್ಲಿಸಿಕೊಳ್ಳುವ ಕ್ರಿಯೆ ಎಂದು ಅಂತರ್ಮುಖತೆಯನ್ನು ಅರ್ಥೈಸುವುದಾದರೆ ಹೊರಗಿನ ಯಾವುದೇ ಅನುಭವ ಸಾಹಿತಿಯ ಒಳಗಿನ ಅನುಭವವಾಗಿ ರೂಪುಗೊಳ್ಳಬೇಕಾದರೆ ಅಂತರ್ಮುಖತೆ ಎನ್ನುವಂಥ ಒಂದು ಮನಸ್ಥಿತಿ ಅತ್ಯಂತ ಅಗತ್ಯ. ಆದರೆ ಹೊರಗಿನ ಪರಿಸರಕ್ಕೆ ಕಣ್ಣುಮುಚ್ಚಿಕೊಂಡು ತನ್ನದೇ ಆದ ವಿಲಕ್ಷಣ ಭಾವ-ಭಾವನೆಗಳಿಗೆ ಒತ್ತುಕೊಡುವ ಪ್ರವೃತ್ತಿ ಎಂಬ ಅರ್ಥದಲ್ಲಿ ಅಂತರ್ಮುಖತೆ ಎಂಬ ಮಾತನ್ನು ಬಳಸುವುದಾದರೆ ಆಗ ಅದು ಒಂದು ದೋಷವೇ ಆಗುತ್ತದೆ. ಸಾಹಿತಿ ಆದವನಿಗೆ ತಾನು ನಿಂತ ನೆಲ ಮತ್ತು ತನ್ನ ಪರಿಸರದ ಅನುಭವ ಬಹು ಮುಖ್ಯವಾದದ್ದು; ಅದನ್ನು ನಿರ್ಲಕ್ಷಿಸಿ ಅವನು ಸಾಧಿಸುವ ಅಂತರ್ಮುಖತೆ ಅರ್ಥವಿಲ್ಲದ್ದು.

**ಪ್ರ: ಹೆಚ್ಚು ಜನ ಅಧ್ಯಾಪಕ ಸಾಹಿತಿಗಳಿಂದಲೇ ಸೃಷ್ಟಿಯಾಗುತ್ತಿರುವ ನಮ್ಮ ಸಾಹಿತ್ಯ ವೈವಿಧ್ಯವಿಲ್ಲದೆ ಏಕತಾನತೆಯ ಜಾಡು ಹಿಡಿಯುತ್ತಿದೆ ಎಂಬ ಸಂಗತಿ ನಿಜವೆ?**

ಉ: ಕನ್ನಡ ಸಾಹಿತ್ಯಕ್ಕೆ ಹೊಸತನವನ್ನು, ವೈವಿಧ್ಯತೆಯನ್ನು ತಂದ ಪ್ರಮುಖ ಸಾಹಿತಿಗಳಾದ ಶ್ರೀ ಕುವೆಂಪು, ಬೇಂದ್ರೆ, ಗೋಕಾಕ, ರಾಜರತ್ನಂ, ಅಡಿಗ ಮತ್ತಿತರರು ಅಧ್ಯಾಪಕರಾಗಿದ್ದವರೇ. ಅಧ್ಯಾಪಕರಾದವರು ನಿರ್ಮಿಸಿದ ಸಾಹಿತ್ಯಕ್ಕೂ ಅಧ್ಯಾಪಕರಲ್ಲದವರು– ಅನಕೃ, ರಾವಬಹಾದ್ದೂರ, ಕೆ. ಎಸ್. ನ. ಕಟ್ಟೀಮನಿ, ಪುತಿನ, ಕಣವಿ ಇಂಥವರು— ನಿರ್ಮಿಸಿದ ಸಾಹಿತ್ಯಕ್ಕೂ ಮೂಲಭೂತವಾದ ವ್ಯತ್ಯಾಸಗಳು ಇವೆ ಎಂಬುದನ್ನು ಗುರುತಿಸುವುದು ಒಳ್ಳೆಯದು. ಸಾಹಿತ್ಯದ ಅಧ್ಯಾಪಕರಾದವರಿಗೆ ಅಧ್ಯಯನ ಮಾಡಲೂ ಬೇರೆ ಬೇರೆ ಸಾಹಿತ್ಯದ ಪರಿಚಯವನ್ನು ರೂಢಿಸಿಕೊಳ್ಳಲು ಇರುವ ಅವಕಾಶ ಮತ್ತು ಅನುಕೂಲವಾದ ಪರಿಸರ ಇತರರಿಗೆ ಇರುವುದಿಲ್ಲ. ಇದರಿಂದ ಅಧ್ಯಾಪಕರಾದವರ ಸಾಹಿತ್ಯದಲ್ಲಿ ಹೆಚ್ಚು ಪರಿಷ್ಕಾರ, ವೈವಿಧ್ಯತೆ, ತಾಂತ್ರಿಕ ಸಫಲತೆಗಳು ಕಾಣಿಸಿಕೊಂಡಿವೆ. ಅನೇಕ ಇಂಗ್ಲೀಷ ಅಧ್ಯಾಪಕರಿಂದಾಗಿ, ಕನ್ನಡಕ್ಕೆ ಕೇವಲ ಹೊಸತನವನ್ನು ತರುವ ಆದೇಶ ಮತ್ತು ಅನ್ಯಸಾಹಿತ್ಯಗಳ ಮಿತಿಮೀರಿದ ಅನುಸರಣ ಹಾಗೂ ಪ್ರಭಾವಗಳು ನಮ್ಮ ಸಾಹಿತ್ಯ

ದಲ್ಲಿ ಕಾಣಿಸಿಕೊಂಡವು. ಇವರಲ್ಲಿ ಅನೇಕರಿಗೆ ತಮ್ಮ ಪರಂಪರೆಯ ಸತ್ವದಿಂದ ತಾವು ಬೆಳೆಯ ಬೇಕೆಂದಾಗ, ತಮ್ಮ ಪರಿಸರದ ಪ್ರಜ್ಞೆ ಅವಶ್ಯಕವೆಂದಾಗಲಿ ಅನ್ನಿಸದೆ ಕೇವಲ 'ನವ್ಯ'ವಾಗುವ ಹಂಬಲವೊಂದೇ ಮುಖ್ಯವಾಗಿ ಸ್ವಪ್ರತಿಷ್ಠೆಗಾಗಿ ಗುಂಪುಗಾರಿಕೆಗಳೂ, ಇತರ ಬೇರೆ ಬಗೆಯ ಬರವಣಿಗೆಗಳ ಬಗೆಗೆ ಅಸಹನೆಯೂ ಬೆಳೆದು, ನಿಜವಾದ ಸಾಹಿತ್ಯ ನಿರ್ಮಿತಿ ನಿಲುಗಡೆಗೆ ಬಂದು ಏಕತಾನತೆಗೆ ದಾರಿಯಾಯಿತು.

**ಪ್ರ: ವೈದಿಕ ಮತ್ತು ಶೂದ್ರ ಎನ್ನುವ ಪರಿಕಲ್ಪನೆಗಳು ನಮ್ಮ ಸಂಸ್ಕೃತಿ, ಸಾಹಿತ್ಯವನ್ನು ಅರ್ಥೈಸುವಲ್ಲಿ ಎಷ್ಟರ ಮಟ್ಟಿಗೆ ನೆರವಾಗುತ್ತವೆ?**

ಉ: ಸಾಹಿತ್ಯವನ್ನು ಅರ್ಥೈಸುವ ಹಲವು ಮೌಲಿಕ ವಿಧಾನಗಳಲ್ಲಿ ವೈದಿಕ ಮತ್ತು ಶೂದ್ರ ಪರಿಕಲ್ಪನೆಗಳೂ ಕೂಡ ಮುಖ್ಯವಾದುವುಗಳು. ಏಕೆಂದರೆ ಈ ದೇಶದ ಸಾಂಸ್ಕೃತಿಕ ಇತಿಹಾಸದಲ್ಲಿ, ವೈದಿಕ ಹಾಗೂ ವೈದಿಕೇತರ ಪ್ರಜ್ಞೆಗಳು ಪರಸ್ಪರ ಹತ್ತಿರವಾಗುತ್ತಾ, ದೂರವಾಗುತ್ತಾ, ಮತ್ತು ಸಂಘರ್ಷಿಸುತ್ತಾ ಬಂದಿರುವುದು ಸ್ಪಷ್ಟವಾಗಿವೆ. ಇಲ್ಲಿ ಪ್ರಜ್ಞೆ ಎಂಬ ಮಾತನ್ನು ನಾನು ಬದುಕಿನ ತೀವ್ರವಾದ ಸಂವೇದನೆ ಎಂಬ ಅರ್ಥದಲ್ಲಿ ಬಳಸುತ್ತಿದ್ದೇನೆ. ಬದುಕು ಅಖಂಡದಂತೆ ಕಂಡರೂ ಅದನ್ನು ತೀವ್ರವಾಗಿ ಅನುಭವಿಸಲು, ಅರ್ಥಮಾಡಿಕೊಳ್ಳಲು ಮತ್ತು ಅಭಿವ್ಯಕ್ತಿಸಲು ಒಂದು ವರ್ಗಕ್ಕೂ ಮತ್ತೊಂದು ವರ್ಗಕ್ಕೂ ಪರಂಪರಾಗತವಾಗಿ ಬಂದ ಕಲಿಕೆ, ಸವಲತ್ತು, ಸ್ಥಾನಮಾನ ಇತ್ಯಾದಿಗಳ ತರತಮಗಳು ಎಷ್ಟರಮಟ್ಟಿಗೆ ನೆರವಾಗಿವೆ ಇಲ್ಲವೆ ಉಪಾಧಿಗಳಾಗಿವೆ ಎಂಬುದನ್ನು ಮರೆತು ಸಾಹಿತ್ಯದ ಬಗ್ಗೆ ಮಾತನಾಡುವುದು ತಪ್ಪಾಗುತ್ತದೆ.

**ಪ್ರ: ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡ ವೈದಿಕವಲ್ಲದ ಆಂದೋಲನಗಳು ಯಾವುವು? ಅವುಗಳು ಸತ್ವಪೂರ್ಣವಾ**

ಉ: ಕನ್ನಡ ಸಾಹಿತ್ಯದ ಆರಂಭವೇ ವೈದಿಕ ಧರ್ಮಕ್ಕೆ ಪ್ರತಿಭಟನೆಯಾಗಿ ನಿಂತ ಜೈನ ಹಾಗೂ ವೀರಶೈವ ಧರ್ಮಗಳಿಂದ. ಈ ಬಗೆಯ ಆರಂಭ ನನಗೆ ತಿಳಿದ ಮಟ್ಟಿಗೆ, ದಕ್ಷಿಣ ಭಾರತದ ಇನ್ನಾವ ಭಾಷೆಯ ಸಾಹಿತ್ಯಕ್ಕೂ ಇರುವಂತೆ ತೋರುವುದಿಲ್ಲ. ಅಷ್ಟೇ ಅಲ್ಲ, ಕನ್ನಡ ಸಾಹಿತ್ಯ ಪರಂಪರೆಯನ್ನು ಕಣ್ಣಿಟ್ಟು ಗಮನಿಸಿದರೆ ವೈದಿಕ ವಿರೋಧಿ ಪ್ರವೃತ್ತಿಯೊಂದು ಉದ್ದಕ್ಕೂ ಕ್ರಿಯಾತ್ಮಕವಾಗಿರುವುದು ಕಂಡುಬರುತ್ತದೆ. ಈ ಪ್ರವೃತ್ತಿಯಿಂದ ಕನ್ನಡ ಸಾಹಿತ್ಯದಲ್ಲಿ ಒಂದು ಬಗೆಯ ಪ್ರತಿಕ್ರಿಯಾತ್ಮಕವಾದ ಕೆಚ್ಚು ಮತ್ತು ವೈವಿಧ್ಯತೆ ಬಂದಿದೆ. ಹನ್ನೆರಡನೇ ಶತಮಾನದ ವಚನ ಸಾಹಿತ್ಯಕ್ಕೆ ಇರುವ ರೊಚ್ಚು, ಪ್ರತಿಭಟನೆಯ ಮನೋಧರ್ಮ, ಜನಸಾಮಾನ್ಯರ ಬಗ್ಗೆ ಕಳಕಳಿ, ಸಾಹಿತ್ಯಾಭಿವ್ಯಕ್ತಿಯಲ್ಲಿ ಸಂಭವಿಸಿದ ಹೊಸತನ–ಇವೆಲ್ಲಾ ವೈದಿಕವಲ್ಲದ ಆಂದೋಲನದ ಪರಿಣಾಮಗಳು. ಆದರೆ ವೈದಿಕ ಧರ್ಮದಿಂದಲೇ ಬಂದ ವ್ಯಕ್ತಿಗಳು ತಂದ 'ವೈದಿಕವಲ್ಲದ ಆಂದೋಲನ'ಗಳಿಗಿಂತ ವೈದಿಕವಲ್ಲದ ಪರಿಸರದ ವ್ಯಕ್ತಿಗಳಿಂದಲೇ ಬಂದ ನಿಜವಾದ ಆಂದೋಲನ ಪ್ರಾರಂಭವಾದದ್ದು ಆಧುನಿಕ ಕಾಲದಲ್ಲೇ– ಕುವೆಂಪು ಅವರ ಧೋರಣೆಗಳಲ್ಲಿ ಮತ್ತು ಇತ್ತೀಚೆಗೆ ಬರೆಯುವ ಕೆಲವು ತರುಣರ ಬರವಣಿಗೆಗಳಲ್ಲಿ.

**ಪ್ರ: ಬರಹಗಾರರು ಮತ್ತು ಕಲಾವಿದರ ಒಕ್ಕೂಟದ ಅಧ್ಯಕ್ಷರಾಗಿದ್ದ ನೀವು ಆ ಸಂಘಟನೆಯ ನಿಲುವನ್ನು ವಿವರಿಸುತ್ತೀರಾ?**

ಉ: ಬರಹಗಾರರು ಮತ್ತು ಕಲಾವಿದರ ಒಕ್ಕೂಟವು ಮೂಲತಃ ಸಾಂಸ್ಕೃತಿಕ ಸಂಘಟನೆಯ ರೂಪವಾದದ್ದು. ಅದರ ಉದ್ದೇಶ ಒಂದು ವಿಶಿಷ್ಟ ವರ್ಗದ–ಅಂದರೆ ಈ ರಾಷ್ಟ್ರದ ನೂರಕ್ಕೆ ತೊಂಬತ್ತಾರರಷ್ಟು ಜನ ಯಾವ ವರ್ಗದವರಾಗಿದ್ದಾರೋ ಆ ವರ್ಗದ–ಬರಹಗಾರರು ಹಾಗೂ ಕಲಾವಿದರು ತಮ್ಮ ಆತ್ಮಪ್ರತ್ಯಯವನ್ನು ಬೆಳೆಯಿಸಿಕೊಳ್ಳುವುದಕ್ಕೆ

ವೇದಿಕೆಯನ್ನು ನಿರ್ಮಾಣ ಮಾಡಿಕೊಳ್ಳುವುದು. ಈ ಸಂಘಟನೆಯನ್ನು ದುರದೃಷ್ಟವಶಾತ್, "ಜಾತ್ಯಂಧರ ಗುಂಪುಗಾರಿಕೆ" ಎಂದು ಘೋಷಿಸುವ ಕೊಳಕು ಮಂಡಲಗಳ ಪ್ರಯತ್ನಗಳೂ ನಡೆದವು. ಆದರೆ ಇದರಲ್ಲಿ ಸಮಾವೇಶವಾದ ಈಗಾಗಲೇ ಪರಿಚಿತವಾದ ಲೇಖಕ ಹಾಗೂ ಕಲಾವಿದರು ಮೊದಲಿನಿಂದಲೂ ಜಾತೀಯವಾದಿಗಳಾಗಿದ್ದರೆ ಅಥವಾ ಇಲ್ಲವೇ? ಈ ದೇಶದಲ್ಲಿ ನಿಜವಾಗಿಯೂ ಸಾಹಿತ್ಯ ಕ್ಷೇತ್ರಗಳಲ್ಲಿ ಮತ್ತು ಸಂಪರ್ಕ ಮಾಧ್ಯಮ ವಲಯಗಳಲ್ಲಿ ಈ ರೋಗಗಳಿಂದ ನರಳುತ್ತಿರುವವರು ಯಾರು ಎಂಬುದರ ಸತ್ಯಾಸತ್ಯತೆಗಳನ್ನು ಬಲ್ಲವರೇ ಬಲ್ಲರು. ಈ ಒಕ್ಕೂಟದಿಂದ ಆದ ನಿಜವಾದ ಪ್ರಯೋಜನವೆಂದರೆ ಎಲ್ಲ ಕ್ಷೇತ್ರಗಳಲ್ಲೂ ಶೋಷಣೆ ಮಾಡುವ ಪರಿಮಿತ ವರ್ಗದವರು, ತಮ್ಮನ್ನು ತಾವು ಆತ್ಮ ವಿಮರ್ಶೆ ಮಾಡಿಕೊಳ್ಳುವಂತಹ ಒಂದು ಪರಿಸ್ಥಿತಿಯನ್ನು ನಿರ್ಮಾಣ ಮಾಡಿದ್ದು; ಶೋಷಿತ ವರ್ಗದ ಲೇಖಕ-ಕಲಾವಿದರು. ತಮಗೆ ತಾವೇ ಸ್ವತಂತ್ರವಾದ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವ ಪರಿಸರವನ್ನು ಕಲ್ಪಿಸಿದ್ದು ಮತ್ತು ಇವಕ್ಕಿಂತ ಮಿಗಿಲಾಗಿ, ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಬೇರೆ ಬೇರೆಯ ಆಯಾಮಗಳೂ ಉಂಟೆಂಬುದನ್ನು ಕಂಡು ಕೊಂಡದ್ದು.

**ಪ್ರ: ಸಾಹಿತ್ಯವನ್ನು ಈಗ ಕಲಿಸುತ್ತಿರುವ ರೀತಿಯ ಬಗ್ಗೆ ನಿಮಗೆ ತೃಪ್ತಿ ಇದೆಯೇ?**

ಉ: ಇಲ್ಲ. ಅದಕ್ಕೆ ಕಾರಣ ಹಲವು–(i) ಕಲಿಸುವ ಅಧ್ಯಾಪಕರಲ್ಲಿ ಬಹು ಮಂದಿ ಸಾಹಿತ್ಯದ ಬೋಧನೆಗೆ ವಿಶೇಷವಾದ ಒಂದು ಪೂರ್ವ ಸಿದ್ಧತೆ ಬೇಕು ಎಂಬ ಬಗೆಗೆ ಆಸಕ್ತಿ ವಹಿಸುತ್ತಿಲ್ಲ. (ii) ಕಲಿಯುವ ವಿದ್ಯಾರ್ಥಿಗಳನ್ನು ತೀವ್ರವಾಗಿ ಸಾಹಿತ್ಯದ ಅಧ್ಯಯನದಲ್ಲಿ ತೊಡಗಿಸಿಕೊಳ್ಳುವ ಕ್ರಮಗಳೂ ನಮ್ಮ ಶಿಕ್ಷಣ ವಿಧಾನಗಳಲ್ಲಿ ಇಲ್ಲ. ಮತ್ತು ಸಾಹಿತ್ಯ ರ್ಥಿಯು ಅದನ್ನು ಅರ್ಥ ಮಾಡಿಕೊಂಡನೇ ಇಲ್ಲವೆ ಎಂಬುದನ್ನು ಆಗಾಗ ಪರೀಕ್ಷಿಸಿ ನೋಡಲು—ವಾರ್ಷಿಕ ಪರೀಕ್ಷೆಗಳಲ್ಲದೆ—ಬೇರೆ ವಿಧಾನಗಳಿಲ್ಲ. ಸಾಹಿತ್ಯದ ಬೋಧನೆಯಲ್ಲಿ ಪ್ರಶ್ನೋತ್ತರಗಳು, ಚಿಕ್ಕ ಚಿಕ್ಕ ವಿಚಾರಗೋಷ್ಠಿಗಳು ಮತ್ತು ಪ್ರಾಯೋಗಿಕ ವಿಮರ್ಶೆಯ ತರಬೇತಿ ಶಿಬಿರಗಳೂ, ಕಾಲೇಜು ಶಿಕ್ಷಣದ ಪಾಠಕ್ರಮದ ಅಂಗವಾಗುವ ತನಕ ಸಾಹಿತ್ಯ ಬೋಧನೆ ಈಗಿರುವಂತೆಯೇ ತೆವಳಿಕೊಂಡು ಹೋಗಬೇಕಾಗುತ್ತದೆ.

**ಪ್ರ: ಕನ್ನಡ ಸಾಹಿತ್ಯದ ಸ್ನಾತಕೋತ್ತರ ಅಧ್ಯಯನಕ್ಕೆ ಬರುತ್ತಿರುವ ವಿದ್ಯಾರ್ಥಿಗಳ ಗುಣಮಟ್ಟದ ಬಗ್ಗೆ ನಿಮ್ಮ ಅನಿಸಿಕೆ ಏನು?**

ಉ: ಹೆಚ್ಚು ಸಂಖ್ಯೆಯ ವಿದ್ಯಾರ್ಥಿಗಳು ಬರುತ್ತಿರುವುದರಿಂದ ಅವರ ಗುಣಮಟ್ಟವನ್ನು ಸುಲಭವಾಗಿ ತಿಳಿಯಲು ಈಗ ಸಾಧ್ಯವಾಗುತ್ತಿಲ್ಲ. ಆದರೂ ನಿಜವಾದ ಮೊದಲ ದರ್ಜೆಯ ವಿದ್ಯಾರ್ಥಿಗಳು ಹಿಂದಿನಂತೆ ಈಗಲೂ ಇದ್ದಾರೆ. ಪರಿಮಿತ ಸಂಖ್ಯೆಯ ವಿದ್ಯಾರ್ಥಿಗಳಿದ್ದಾಗ ಅಧ್ಯಾಪಕರು ಕೊಡಬಹುದಾಗಿದ್ದ ವೈಯಕ್ತಿಕ ಗಮನವನ್ನು ಈ ಕಾಲದಲ್ಲಿ ಅಷ್ಟಾಗಿ ಕೊಡಲು ಸಾಧ್ಯವಾಗುತ್ತಿಲ್ಲ.

**ಪ್ರ: ಕನ್ನಡ ಎಂ. ಎ. ಪದವೀಧರರು ಈಚೆಗೆ ಹೆಚ್ಚು ಸಂಖ್ಯೆಯಲ್ಲಿ ನಿರುದ್ಯೋಗಿಗಳಾಗುತ್ತಿರುವುದಕ್ಕೆ ಏನು ಪರಿಹಾರ ಸೂಚಿಸುತ್ತೀರಿ?**

ಉ. ಎಲ್ಲಾ ಎಂ. ಎ. ವಿದ್ಯಾರ್ಥಿಗಳೂ ಕೂಡ ಈಚೆಗೆ ನಿರುದ್ಯೋಗಿಗಳಾಗುತ್ತಿದ್ದಾರೆ. ಆದರೆ ಕನ್ನಡ ವಿದ್ಯಾರ್ಥಿಗಳು ತಾವು ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕರಾಗುವುದಕ್ಕೆ ಮಾತ್ರ ಯೋಗ್ಯರೆಂಬ ಭ್ರಮೆಯಿಂದ ನರಳುತ್ತಿರುವುದರಿಂದ ಇವರಲ್ಲಿ ನಿರುದ್ಯೋಗಿಗಳು ಹೆಚ್ಚಾಗಿದ್ದಾರೆ. ಸರ್ಕಾರದ ಬೇರೆ ಬೇರೆ ಕ್ಷೇತ್ರಗಳಿಗೆ ಕೂಡ ಇವರು ಅರ್ಜಿ ದಾಕಿ ಅಲ್ಲಿನ ಹುದ್ದೆಗಳಿಗೆ ಪ್ರಯತ್ನ ಪಡಬೇಕು. ನನಗೆ ಬಂದ ವರದಿಗಳನ್ನು ನಂಬುವುದಾದರೆ, ಬೇರೆ

ಬೇರೆ ಕ್ಷೇತ್ರಗಳಲ್ಲಿ, ಕನ್ನಡ ಎಂ. ಎ. ಓದಿದವರು ಅರ್ಜಿ ಹಾಕಿದಾಗ ಅಲ್ಲಿನ ಸಂದರ್ಶನ ಸಮಿತಿಯವರು ಇಂಗ್ಲಿಷ್ ಮಾಧ್ಯಮದ ಮೂಲಕ ಎಂ. ಎ. ಮಾಡಿಕೊಂಡವರಿಗೆ ಹೆಚ್ಚಿನ ಆದ್ಯತೆಯನ್ನು ನೀಡುತ್ತಾರೆಂದು ಹೇಳಲಾಗಿದೆ. ಹೀಗಾದರೆ ಅದು ದುರದೃಷ್ಟದ ಸಂಗತಿ. ಈ ವ್ಯವಸ್ಥೆಯನ್ನು ಉಳಿಸಿಕೊಂಡು ಬಂದರೆ ಕನ್ನಡ ನಾಡಿನಲ್ಲಿ ಕನ್ನಡಕ್ಕಾಗಲಿ, ಕನ್ನಡದಲ್ಲಿ ಓದಿದವರಿಗಾಗಲಿ ದುರ್ದೈವದ ಕಾಲ ಮುಗಿದಿಲ್ಲವೆಂದು ತಿಳಿಯಬೇಕಾಗುತ್ತದೆ.

**ಪ್ರ : ಕನ್ನಡ ಪಠ್ಯಪುಸ್ತಕಗಳನ್ನು ಆಯ್ಕೆ ಮಾಡುವ ಕ್ರಮದ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?**

ಉ: ಅಧ್ಯಯನ ಯೋಜನಾ ಮಂಡಲಿಗಳಲ್ಲಿ ಆಯಾ ತರಗತಿಗಳಿಗೆ ಪಾಠ ಹೇಳುವ ಅಧ್ಯಾಪಕರೇ ಹೆಚ್ಚು ಸಂಖ್ಯೆಯಲ್ಲಿ ಸಲಹೆಗಾರರಾಗಿರುವಂತೆ ನೋಡಿಕೊಳ್ಳಬೇಕು. ಪಾಠ ಹೇಳುವವರಿಗೂ ಪಠ್ಯ ಪುಸ್ತಕಗಳನ್ನು ನಿಯಮಿಸುವವರಿಗೂ ಸಂಬಂಧವೇ ಇಲ್ಲದಂಥ ವ್ಯವಸ್ಥೆಯಲ್ಲಿ ಏರುಪೇರುಗಳಾಗುವುದು ಸಹಜ ಮತ್ತು ಅನ್ಯಾಯ.

**ಪ್ರ: "ಪಠ್ಯ ಪುಸ್ತಕವೆಂದರೆ ಹಣ, ಹಣವೆಂದರೆ ಭ್ರಷ್ಟಾಚಾರ" ಎನ್ನುವ ಬಗ್ಗೆ ನೀವು ಏನು ಹೇಳುತ್ತೀರಿ?**

ಉ: ಈ ಮಾತನ್ನು ಸಮಾರಂಭವೊಂದರಲ್ಲಿ ನಾನೇ ಹೇಳಿದ್ದು. ವಿಶ್ವವಿದ್ಯಾಲಯವೇ ಆಯ್ಕೆಯಾದ ಕೃತಿಯ ಪ್ರಕಟಣೆಯ ಜವಾಬ್ದಾರಿಯನ್ನು ತೆಗೆದುಕೊಂಡು ಲೇಖಕರಿಗೆ ನಿಗದಿಯಾದ ಸಂಭಾವನೆ ಕೊಡುವುದು ಸರಿಯಾದ ಕ್ರಮ.

**ಪ್ರ. ಕನ್ನಡ ವಿಭಾಗಗಳು ಕೈಗೊಳ್ಳುತ್ತಿರುವ ಸಂಶೋಧನಾತ್ಮಕ ಯೋಜನೆಗಳಲ್ಲಿ ಪುನರಾವೃತ್ತಿಯಾಗದಂತೆ ನೋಡಿಕೊಳ್ಳುವುದು ಅಗತ್ಯವೆ?**

ಉ: ಈ ಕೆಲವು ಯೋಜನೆಗಳು ಮೇಲೆ ನೋಡಲು ಪುನರಾವರ್ತನೆಯಂತೆ ಕಂಡರೂ ವಾಸ್ತವವಾಗಿ ಅವು ಒಂದಕ್ಕೊಂದು ಪೂರಕವಾಗುವ ರೀತಿಯಲ್ಲಿವೆ. ನಿದರ್ಶನಕ್ಕಾಗಿ 'ಸಾಹಿತ್ಯ ಚರಿತ್ರೆಯ ಯೋಜನೆಗಳನ್ನು ನೋಡುವುದಾದರೆ ಮೈಸೂರಿನ ಸಾಹಿತ್ಯ ಚರಿತ್ರೆಯು ಅಲ್ಲಿನ ಅಧ್ಯಯನ ಸಂಸ್ಥೆಯ ಅಧ್ಯಾಪಕರ ಬರವಣಿಗೆಯಾದರೆ ಬೆಂಗಳೂರು ವಿಶ್ವವಿದ್ಯಾಲಯದ 'ಸಾಹಿತ್ಯ ಚರಿತ್ರೆಯು ಇಡೀ ಸಮಗ್ರ ಕರ್ನಾಟಕದ ಮತ್ತು ಅದರ ಆಚೆಗೂ ಇರುವ ಬೇರೆ ಬೇರೆಯ ಸಾಹಿತ್ಯ ಸಂಬಂಧಿಯಾದ ಕ್ಷೇತ್ರದ ವಿವಿಧ ವಿದ್ವಾಂಸರುಗಳ ಸಹಕಾರಗಳಿಂದ ರಚಿತವಾದದ್ದು. ಇವೆರಡನ್ನೂ ಹೋಲಿಸಿ ನೋಡುವವರಿಗೆ ಇವುಗಳು ಹೇಗೆ ಪರಸ್ಪರ ಪೂರಕವಾಗಿವೆ. ಎಂದು ತಿಳಿಯುತ್ತದೆ. ಅಲ್ಲದೆ ಸಾವಿರಾರು ವರ್ಷಗಳ ಸಾಹಿತ್ಯ ಪರಂಪರೆಯನ್ನು ಉಳ್ಳ ಕನ್ನಡ ಸಾಹಿತ್ಯಕ್ಕೆ ಒಂದಲ್ಲ ಹತ್ತು ಸಾಹಿತ್ಯ ಚರಿತ್ರೆಗಳ ಅಗತ್ಯವಿದೆ ಎಂಬ ಅಂಶವು ಪ್ರಕಟವಾಗುತ್ತದೆ.

**ಪ್ರ: ಸಂಸ್ಕೃತವನ್ನು ಪುನರುಜ್ಜೀವಿಸಬೇಕೆ? ಪುನರುಜ್ಜೀವಿಸುವುದಾದರೆ ತಕ್ಕ ವಿಧಾನಗಳು ಯಾವವು?**

ಉ: ಒಂದು ಕಾಲಕ್ಕೆ ಸಂಸ್ಕೃತವು ಭಾರತದ ಬುದ್ಧಿಯ ಭಾಷೆಯಾಗಿತ್ತೆಂಬುದು ನಿಜ. ಹಾಗೆಯೇ ಕೆಲವರ ಭಾಷೆ ಕೂಡ ಇದಾಗಿತ್ತು. ಮತ್ತು ಬಹು ಸಂಖ್ಯರು ಇದನ್ನು ಕಲಿಯಲು ಅನೇಕ ನಿಷೇಧಗಳಿದ್ದವು. ಎಂದೂ ಬಹುಶಃ ವ್ಯವಹಾರದಲ್ಲಿ ಇಲ್ಲದ, ಈಗಂತೂ ವ್ಯವಹಾರವಿಲ್ಲದ ಈ ಭಾಷೆಯನ್ನು ಸಾಹಿತ್ಯ ಮತ್ತು ಸಾಂಸ್ಕೃತಿಕ ಮಹತ್ವದಿಂದ ಕಲಿಯಲು, ಅಧ್ಯಯನ ಮಾಡಲು ಇಚ್ಛಿಸುವವರು ಹಾಗೆ ಮಾಡಲಿ. ಆದರೆ ನಮಗೆ ಇಂದು ಅಗತ್ಯವಾಗಿರುವುದು ಸಂಸ್ಕೃತದಲ್ಲಿರುವ ತಿಳಿವು ಭಾರತದ ವಿವಿಧ ಪ್ರಾದೇಶಿಕ ಭಾಷೆಗಳ ಮೂಲಕ, ಸಮರ್ಥ ಅನುವಾದಗಳ ಮೂಲಕ ಜನತೆಗೆ ದೊರಕಬೇಕೆಂಬುದು ಅಷ್ಟಾದರೆ ಸಾಕು.

**ಪ್ರ: ಇಂಗ್ಲೀಷ್ ಭಾಷೆ ಭಾರತದಲ್ಲಿ ಉಳಿಯಬೇಕೆ? ಉಳಿಯುವುದಾದರೆ**

**ಅವರ ಸ್ವರೂಪ ಮತ್ತು ವ್ಯಾಪ್ತಿ ಹೇಗಿರಬೇಕು?**

ಉ: ಖಂಡಿತವಾಗಿಯೂ ಉಳಿಯಬೇಕು. ಆದರೆ ಅದು ವಿವಿಧ ದೇಶ ಭಾಷೆಗಳ ಬೆಳವಣಿಗೆಗೆ ಮತ್ತು ಸ್ಥಾನಮಾನಗಳಿಗೆ ಮಾರಕವಾಗುವರೀತಿಯಲ್ಲಿ ಮಾತ್ರ ಉಳಿಯಕೂಡದು, ನಮಗೆ ಇಂಗ್ಲೀಷ್ ಭಾಷೆ, ಸಾಹಿತ್ಯ ಬೇಕು. ಆದರೆ ಆಡಳಿತ ಮತ್ತು ಶಿಕ್ಷಣದಲ್ಲಿ ಇದು ಮಾಧ್ಯಮವಾಗಿರುವುದು ತುಂಬಾ ಅಪಾಯಕಾರಿ. ಕರ್ನಾಟಕದಲ್ಲಿ ಕನ್ನಡ ಭಾಷೆಗೆ ನ್ಯಾಯವಾಗಿ ಸಲ್ಲಬೇಕಾದ ಎಲ್ಲ ಪ್ರಾಧಾನ್ಯವನ್ನು ಸಲ್ಲಿಸಿ ಅನಂತರ ಸಾಧ್ಯವಾದಷ್ಟು ಅನ್ಯಭಾಷೆಗಳನ್ನು ಕಲಿಯುವ ಪ್ರಯತ್ನಗಳನ್ನು ನಾವು ನಡೆಸಬೇಕು.

**ಪ್ರ: ಸಮಾಜದ ಕೆಳವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ಮತ್ತು ಶಾಲಾ ಕಾಲೇಜುಗಳ ಪ್ರವೇಶ ಹಾಗೂ ಉದ್ಯೋಗಾವಕಾಶಗಳನ್ನು ಮೀಸಲಿಡುವ ಕ್ರಮವು ಹೆಚ್ಚು ಪರಿಣಾಮಕಾರಿಯಾಗಲು ಯಾವ ಸಲಹೆಗಳನ್ನು ಸೂಚಿಸುತ್ತೀರಿ?**

ಉ: ವಿವಿಧ ಹುದ್ದೆಗಳಲ್ಲಿ ಇವರಿಗೆ ಆದ್ಯಅವಕಾಶಗಳನ್ನು ಕೊಡುವುದಗತ್ಯ. ಇನ್ನು ಎಷ್ಟು ಕಾಲ ಈ ಹಿಂದುಳಿದ ಅಥವಾ ದಲಿತ ವರ್ಗದವರು ಇದ್ದಲ್ಲೇ ಇರಬೇಕು? ಈ ಪರಿಸ್ಥಿತಿಯನ್ನು ಹೀಗೆಯೇ ಉಳಿಸುವುದು ನಿಜಕ್ಕೂ ಒಂದು ಅನೈತಿಕ ಕ್ರಿಯೆ. ಆದ್ದರಿಂದ ಈ ವರ್ಗದವರನ್ನು ಕೆಲಸಕ್ಕೆ ತೆಗೆದುಕೊಳ್ಳುವಾಗ ಕೇವಲ 'ಮೆರಿಟ್' ಅನ್ನು ಗಮನಿಸುವುದನ್ನು ಎಷ್ಟೋ ವೇಳೆ ಕೈ ಬಿಡಬೇಕು.

**ಪ್ರ: ಪ್ರತಿವರ್ಷವೂ ನೀವು ಏರ್ಪಡಿಸುವ ವಿಚಾರ ಸಂಕಿರಣಗಳ ಉದ್ದೇಶ ಮತ್ತು ಪ್ರಯೋಜನಗಳೇನು?**

ಉ: ಕನ್ನಡ ಅಧ್ಯಯನ ಕೇಂದ್ರ ಕಳೆದ ಆರೇಳು ವರ್ಷಗಳಿಂದಲೂ ವಿಚಾರ ಸಂಕಿರಣಗಳನ್ನು ನಡೆಸಿಕೊಂಡು ಬಂದಿದೆ. ಇದರ ಉದ್ದೇಶ (i) ಭಿನ್ನ ಭಿನ್ನ ನಿಲವುಗಳ, ಧೋರಣೆಗಳ ಮತ್ತು ದೃಷ್ಟಿಗಳ ಲೇಖಕರನ್ನು ಒಂದು ಸಮಾನ ವಿಚಾರ ವೇದಿಕೆಯ ಮೇಲೆ ತರುವುದು. (ii) ಕನ್ನಡ ಸಾಹಿತ್ಯದ ಬಗ್ಗೆ ಸರಿಯಾದ ವಿಚಾರ ಮಂಥನವಾಗಬೇಕು, ಒಳ್ಳೆಯ ವಿಮರ್ಶೆಯ ಸಂಪ್ರದಾಯ ಏರ್ಪಡಬೇಕು ಎನ್ನುವುದು (iii) ಈ ಸಂಕಿರಣಗಳ ವೇದಿಕೆಯ ಮೇಲೆ ಸಾಧ್ಯವಾದಷ್ಟು ಹೊಸಬರು ಮತ್ತು ಕಿರಿಯರಿಗೆ ಅವಕಾಶ ಕಲ್ಪಿಸಿ ಅವರ ವೈಚಾರಿಕ ಪ್ರಗತಿಗೆ ನೆರವಾಗುವುದು. ಈ ಉದ್ದೇಶಗಳು ಈ ತನಕ ತಕ್ಕಮಟ್ಟಿಗೆ ನೆರವೇರಿವೆ ಎಂದು ತಿಳಿದಿದ್ದೇನೆ. ಇದರ ಜೊತೆಗೆ ಪ್ರತಿಸಲವೂ ಮುಖ್ಯವಾಗಿ ನಿರ್ದೇಶಕರ ಮೇಲೆ ಮತ್ತು ಸಂಕಿರಣದಲ್ಲಿ ಭಾಗವಹಿಸಿ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದವರ ಮೇಲೆ ಅನಂತರ ಎರಗುವ ಪ್ರತಿಕ್ರಿಯೆಗಳೂ ಆಪಾದನೆಗಳೂ ಮಾಮೂಲಿ ಸಂಗತಿಗಳಾಗಿವೆ. ಇಂಥ ತಾತ್ಕಾಲಿಕ ಕಿರುಕುಳಗಳನ್ನು ಬಿಟ್ಟರೆ ಇದರಿಂದ ಎಂಥ ಮೌಲಿಕವಾದ ಕೆಲಸ ನಡೆದಿದೆ ಎಂಬುದನ್ನು ಅನಂತರ ನಾವು ಪ್ರಕಟಿಸುವ ಪುಸ್ತಕಗಳಿಂದ ಯಾರಿಗಾದರೂ ತಿಳಿಯುತ್ತದೆ.

**ಪ್ರ: ಕನ್ನಡದ ಮುನ್ನಡೆಯ ಬಗ್ಗೆ ಸರಕಾರ ಮತ್ತು ವಿಶ್ವವಿದ್ಯಾಲಯಗಳು ಒಳ್ಳೆಯ ಧೋರಣೆಯನ್ನು ತಳೆದಿವೆ ಎಂದು ನಿಮಗೆ ಅನ್ನಿಸುತ್ತದೆಯೇ?**

ಉ: ಕನ್ನಡದ ಕೆಲಸಕ್ಕೆ ಸರ್ಕಾರ ಹಾಗೂ ವಿಶ್ವವಿದ್ಯಾಲಯಗಳಿಂದ ಸಹಾಯವನ್ನು ದೊರಕಿಸಿಕೊಳ್ಳುವುದು ಎಷ್ಟು ಕಷ್ಟ ಎಂಬುದು ಇಂಥ ಕೆಲಸಗಳ ಜವಾಬ್ದಾರಿಯನ್ನು ಹೊತ್ತವರಿಗೆ ಮಾತ್ರ ಗೊತ್ತು. ಆದರೂ ತಕ್ಕಮಟ್ಟಿನ ನೆರವು ಮತ್ತು ಪ್ರೋತ್ಸಾಹ ದೊರೆತಿದೆ ಎಂದೇ ಹೇಳಬೇಕು! ವಾಸ್ತವವಾಗಿ ನಮ್ಮ ವಿಶ್ವವಿದ್ಯಾಲಯಗಳಲ್ಲಿ ನಿಜವಾದ ಮೌಲಿಕವಾದ ಕೆಲಸ ಏನಾದರೂ ನಡೆದಿದ್ದರೆ ಮೂರೂ ವಿಶ್ವವಿದ್ಯಾಲಯಗಳ ಕನ್ನಡ ವಿಭಾಗಗಳಿಂದಲೇ ಎನ್ನುವುದು ತಿಳಿಯದ ಸಂಗತಿಯೇನಲ್ಲ. ✡

ಪ್ರಾಚೀನ ಕಾವ್ಯ

# ದಾಸರೆಂದರೆ...

–ದೇ ಕೆ

[ ದಾಸರೆಂದರೆ ಪುರಂದರದಾಸರಯ್ಯಾ ಎಂಬ ಜಾಣ್ನುಡಿ ಕೇಳದ ಜನರಿಲ್ಲ ಎಂದರೆ ತಪ್ಪಾಗಲಾರದು. ಕರ್ನಾಟಕ ಸಂಗೀತಪಿತಾಮಹರೆಂದು ಖ್ಯಾತರಾದ ಇವರು ಹದಿನಾರನೆಯ ಶತಮಾನದಲ್ಲಿ ಬಾಳಿದರು. ವೀರನರಪತಿ ಕೃಷ್ಣರಾಯರ ಕಾಲದಲ್ಲಿದ್ದ ಇವರು ವಿಜಯನಗರ ಸಾಮ್ರಾಜ್ಯದ ಏಳು ಬೀಳುಗಳನ್ನು ಕಂಡರು. ನಾಲ್ಕು ಲಕ್ಷಕ್ಕೂ ಮಿಕ್ಕಿ ಕೃತಿ ರಚಿಸಿದ ಇವರು ತಮ್ಮ ಹಾಡುಗಳಿಗಾಗಿ ಆಯ್ದುಕೊಂಡ ವಿಷಯ, ವೈವಿಧ್ಯ ಬೆರಗುಗೊಳಿಸುವಂಥದು. ದಾಸೋಚ್ಛಿಷ್ಟಂ ಜಗತ್ಸರ್ವಂ ಎಂದೂ ಹೇಳಬಹುದೇನೊ. ಭಾಗವತ ತತ್ವಜ್ಞಾನ, ಶ್ರೀಕೃಷ್ಣಲೀಲೆ, ನವವಿಧಭಕ್ತಿ, ಸಾಮಾನ್ಯ ನೀತಿ ಎಲ್ಲವನ್ನೂ ಒಳಗೊಂಡಿವೆ ಇವರ ಪದ ಪದ್ಯ ಉಗಾಭೋಗ ಸುಳಾದಿಗಳು. ಭಾವಪೂರ್ಣವಾದ ಅವರ ಕೆಲ ಹಾಡುಗಳನ್ನು ಇಲ್ಲಿ ಕೊಡಲಾಗಿದೆ.]

**ತೋಳನಾಡೈ**

ತೋಳು ತೋಳು ತೋಳು ಕೃಷ್ಣ
ತೋಳನಾಡೈ
ನೀಲಮೇಘಶ್ಯಾಮ ಕೃಷ್ಣ
ತೋಳನಾಡೈ । ಪ ।

ಗಲಿಕೆಂಬಂದುಗೆ ಉಲಿಯುವಗೆಜ್ಜೆಯ ತೋ
ಅಲುಗುವ ಅರಳೆಲೆ ಮಾಗಾಯ
ಮಿನುಗಲು ತೋ
ನೆಲುವು ನಿಲುಕದೆಂದೊರಳ
ತಂದಿಡುವನೆ ತೋ
ಚೆಲುವ ಮಕ್ಕಳ ಮಾಣಿಕ್ಯವೆ ನೀ ತೋ ।೧॥

ದಟ್ಟಡಿಯಿಡುತಲಿ ಬೆಣ್ಣೆಯ ಮೆಲುವನೆ ತೋ
ಕಟ್ಟಿದ ಕರಡಿಗೆ ಕರುವೆಂದೆಳೆವನೆ ತೋ
ಬೊಟ್ಟನಲ್ಲಿ ತಾಯನ್ನ ಣುಕಿಸಿ ನಗುವನೆ ತೋ
ಬಟ್ಟಲ ಹಾಲನು ಕುಡಿದು
ಕುಣಿವನೆ ತೋ ॥ ೨॥

ಅಂಜೆಗಾಲಿಂದೊರಳನ್ನೆಳೆವನೆ ತೋ
ತುಂಬಿದ ಬಂಡಿಯ ಮುರಿಯ
ಲೊದ್ದವನೆ ತೋ
ಕಂಬದಿಂದಲವತರಿಸಿದವನೆ ನೀ ತೋ
ನಂಬಿದವರನು ಹೊರೆವ ಕೃಷ್ಣ ತೋ ॥ ೩ ॥

ಕಾಲಕೂಟದ ವಿಷವ ಕಲಕಿದ ತೋ
ಕಾಳಿಂಗನ ಹೆಡೆಯನ್ನು ತುಳಿದ ತೋ
ಕಾಳಗದಲಿ ದಶಕಂಠನ ಮುಡುಹಿದ ತೋ
ಬಾಲಕ ವ್ರತಿಯರ ಕರುಣೆಗರೆವ
ತೋ ॥ ೪ ॥

ನಖದಿಂದಲಿ ಹಿರಣ್ಯಕನನು ಸೀಳಿದ ತೋ
ಸುಖವನಿತ್ತು ಪ್ರಹ್ಲಾದನ ಕಾಯ್ದವ ತೋ
ವಿಕಳಗೊಳಿಸಿದೆ ಗೋಪಿಯರೆಲ್ಲರ ತೋ
ರುಕ್ಮಿಣೀಪತಿ ಸಿರಿ ಪುರಂದರ
ವಿಠ್ಠಲ ತೋ ॥ ೫ ॥

## ಸದ್ದು ಮಾಡಲಿ ಬೇಡವೊ

ಸದ್ದು ಮಾಡಲಿ ಬೇಡವೊ--ನಿನಕಾಲಿಗೆ
ಬಿದ್ದು ನಾ ಬೇಡಿಕೊಂಬೆ | ಪ |

ನಿದ್ದೆ ಗೆಯ್ಯುವರೆಲ್ಲ ಎದ್ದರೆ ನೀನು ಒಂ
ದಿದ್ದು ಕಂಡವರೆಂಬುವರೊ
ರಂಗ | ಅ. ಪ |

ಬಳೆ ಘಲ್ಲುಕೆನ್ನದೇನೊ—ಕೈಯ ಪಿಡಿದು
ಎಳೆಯದಿರೊ ಸುಮ್ಮನೆ
ಮೊಲೆಗಳ ಮೇಲಿನ ಸರಗನೆಳೆಯಲು ಕೊ
ರಳ ಪದಕಂಗಳು ಧ್ವನಿಗೈಯುವವೊ
ರಂಗ || ೧ ||

ನಿರುಗೆಯ ಪಿಡಿಯದಿರೊ---
ಕಾಂಚಿಯದಾಮ
ಕಿರುಗೆಂಟೆ ಧ್ವನಿಗೆಯ್ಯುದೆ |
ಕಿರುಗಂಟೆಗಳ ನೀನು ಸವಿದು ಅಪ್ಪರಿಸಲು
ಕರವಲ್ಲ ಗಂಡ ಮತ್ಸರವ
ತಾಳುವನಲ್ಲ || ೨ ||

ಆಡ ಮಾತುಗಳೇತಕೊ-ಸಂಗೀತವ
ಪಾಡುವ ಸಮಯವೇನೊ
ಗಾಡಿಕಾರ ಶ್ರೀ ಪುರಂದರವಿಠಲನೆ
ಪಾಡು ಪಂಥಗಳೆ ಒಡಗೂಡುವ
ಸಮಯದಿ || ೩ ||

## ಸುಖವಾದಡೆ

ಸುಖವಾದಡೆ ಎನ್ನಿಂದಾಯಿತೆಂಬರು
ದುಃಖವಾದರೆ ದೈವ ಮಾಡಿತೆಂಬರು
ಸುಖಕೆ ತಾವಾರೊ ದುಃಖಕೆ ತಾವಾರೊ
ವಿಕಳನಾಗಿ ಕೆಡಬೇಡ ಮನುಜಾ
ರುಕುಮಿಣಿಯರಸು ಪುರಂದರ ವಿಠಲ
ತಾನೇ
ಸುಖದುಃಖವ ಮಾಡಿಸುವನು ಕಾಣೆಲೊ

## ಹಂಜಿ ನೂಲವ್ವ

ಮಂದಿಯು ಗೂಡವೆ ಇನ್ನೇನು ಮಗಳೆ
ಮುಂದೆ ನೋಡಿ ಹಂಜಿ ನೂಲವ್ವ | ಪ |
ಕಣ್ಣ ಮುಂದಿನ ಕಸವನು ತೆಗೆದು
ಸಣ್ಣಗೆ ನೀ ನೂಲವ್ವ | ಅ ಪ |

ವಸುಧೆಯು ದೊಡ್ಡ ಮಣೆಯು ಮಾಡಿ
ಶಶಿರವಿ ಎರಡು ಕಂಬವ ಹೂಡಿ
ಆ ಸಿರಿರಂಗರ ಎರಡು ಚಕ್ರವ ಮಾಡಿ
ದರ್ಶನವೆಂಬುವ ನುಲಿಯನು ಬಿಗಿದು || ೧ ||

ಪರಬ್ರಹ್ಮನ ಅಳವು ಮಾಡಿ
ಕುರುಡು ನಾಶಿಕ ಬೆನಕದಿತಿಕ್ಕಿ
ಹರಿ ನೀನೆ ಎಂಬ ದಾರವಕಟ್ಟಿ
ವಿರತಿ ವಿಚಾರದ ಚಿಲ್ಲಗಳಿಕ್ಕಿ || ೨ ||

ಜ್ಞಾನವೆಂಬುವ ಕದರನ್ನಿಕ್ಕಿ
ಮಾನವುಡವೆಂಬ ಉಂಜಿಯಪಿಡಿದು
ಧ್ಯಾನವೆಂಬ ಎಳೆಯನು ತೆಗೆದು
ಮೌನದಿಂದಲಿ ನೀ ನೂಲವ್ವ || ೩ ||

ಕಕ್ಕುಲಾತಿ ಕಾಂಕ್ಷೆಗಳೆಂಬ
ಸಿಕ್ಕುದೊಡರುಗಳನೆ ಬಿಡಿಸು
ಒಕ್ಕುಡಿತೆಯ ಮಾಡಿದ ಮನದಿ
ಕುಕ್ಕಡಿನೂಲು ಕೂಡಿಹಾಕವ್ವ || ೪ ||

ಇಪ್ಪತ್ತೊಂದು ಸಾವಿರದ ಮೇ-
ಲಿಪ್ಪ ನೂರು ಎಳೆಯನು ಜೋಡೆದು
ತಪ್ಪದೆ ಹುಂಜವ ಕಟ್ಟು ನೀನು
ಒಪ್ಪದಿ ಸೀಳು ಇಳುವವ್ವ || ೫ ||

ಸಪ್ಪದಿ ನೀ ಜಾಡರಲ್ಲಿ
ಸಿದ್ಧ ಬದ್ಧ ಸೀಳುಗಳ ಹಾಕಿ
ವಿದ್ಯೆಯೆಂಬುವ ಹಚ್ಚಡವನ್ನು
ಬುದ್ಧಿಯಿಂದಲಿ ನೇಯಿಸವ್ವ || ೬ ||

ಒಪ್ಪುವಾತ್ಮ ಪರಮಾತ್ಮನೆಂಬ
ಬಪ್ಪ ಎರಡು ಹೋಳುಗಳ ಹೆಚ್ಚಿ
ತಪ್ಪದೆ ಪುರಂದರ ವಿಠಲನ ಪಾದಕೆ
ಒಪ್ಪಿಸಿ ಕಾಲವ ಕಳೆಯುವವ್ವ || ೭ ||

# ಪರಮಾಣು ವಿಜ್ಞಾನದಲ್ಲೊಂದು ಮೈಲುಗಲ್ಲು

ಶ್ರೀಕಾಂತ ಮುಳಗಿ

ಪರಮಾಣು ರಿಯಾಕ್ಟರುಗಳಿಗೆ ಯುರೇನಿಯಮ್- ೨೩೫ ಎಂಬ ಸಮಸ್ಥಾನಿಕವೇ ಆಹಾರ. ರಿಯಾಕ್ಟರುಗಳಲ್ಲಿ ಅದರ ಬೀಜ ವಿದಳನ ನಡೆದು ಸರಪಣಿ ಕ್ರಿಯೆ ಏರ್ಪಟ್ಟಾಗ ಯುರೇನಿಯಂ ಮ್-೨೩೫ ಶಕ್ತಿಯನ್ನು ಹೊರ ಸೂಸುತ್ತದೆ. ಆದರೆ ಇದು ಸಾಧ್ಯವಾಗ ಬೇಕಾದರೆ ಯುರೇನಿಯುಮ್ಮಿನಲ್ಲಿ ಕನಿಷ್ಠ ಪಕ್ಷ ಶೇಕಡಾ ಮೂರರಷ್ಟಾದರೂ ಯುರೇನಿಯಮ್-೨೩೫ ಇರಲೇಬೇಕು. ಆದರೆ ಪ್ರಾಕೃತಿಕವಾಗಿ ದೊರೆಯುವ ಯುರೇನಿಯಮ್ಮಿನಲ್ಲಿ ಸಮಸ್ಥಾನಿಕದ ಪ್ರಮಾಣ ಶೇಕಡಾ ೦.೭ ಅನ್ನು ಮೀರುವುದಿಲ್ಲ.

ಅದಕ್ಕಾಗಿ ವಿಜ್ಞಾನಿಗಳು ವಾಯು-ಪ್ರಸರಣ (Gas diffusion) ವೆಂಬ ಸಂಕೀರ್ಣವಾದ ವಿಧಾನವನ್ನು ಅನುಸರಿಸು-ತ್ತಾರೆ. ಇದು ತುಂಬಾ ಶ್ರಮದಾಯಕವಾದ ವಿಧಾನ. ಸಾವಿರಾರು ಸಲ ಈ ವಿಧಾನವನ್ನು ಬಳಸಿದರೆ ಮಾತ್ರ ಸೇಕಡಾ ಮೂರರಷ್ಟು ಯುರೇನಿಯಮ್-೨೩೫ ಅನ್ನು ಒಳಗೊಂಡ ಯುರೇನಿಯಮ್ ದೊರಕುತ್ತದೆ.

ಯುರೇನಿಯುಮ್ ಅದಿರಿನಲ್ಲಿ ಮೇಲೆ ಹೇಳಿದ ಸಮಸ್ಥಾನಿಕದ ಪ್ರಮಾಣವನ್ನು ಸುಲಭವಾಗಿ ಹೆಚ್ಚಿಸಲು ಸಾಧ್ಯವಾದರೆ ಈಗ ಅದಕ್ಕೆ ಅಗತ್ಯವಾದ ಅಪಾರ ಶ್ರಮವನ್ನು ತಗ್ಗಿಸಲು ಸಾಧ್ಯವಾಗುತ್ತದೆ. ಅಲ್ಲದೆ ವಿಧಾನ ಸುಲಭವಾದುದರಿಂದ ವಿದ್ಯುಚ್ಛಕ್ತಿಯ ಉತ್ಪಾದನಾ ವೆಚ್ಚವೂ ತಗ್ಗುತ್ತದೆ. ಆದ್ದರಿಂದಲೆ ಪ್ರಾಕೃತಿಕವಾಗಿ ದೊರೆಯುವ ಯುರೇನಿಯಮ್ಮಿನಲ್ಲಿ ಯುರೇನಿಯುಮ್-೨೩೫ ಅನ್ನು ಸಂವರ್ಧಿತಗೊಳಿಸುವ ಸುಲಭ ವಿಧಾನವನ್ನು ಕಂಡುಹಿಡಿಯಲು ಪ್ರಪಂಚದಾದ್ಯಂತ ವಿಜ್ಞಾನಿಗಳು ಪ್ರಯತ್ನಿಸುತ್ತಿದ್ದಾರೆ.

ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದ ಕೆಲವು ಭೌತಶಾಸ್ತ್ರಜ್ಞರು ಇತ್ತೀಚೆ ಕೈಕೊಂಡ ಪ್ರಯೋಗಗಳ ಫಲಿತಾಂಶವನ್ನು ಅನುಲಕ್ಷಿಸಿದಾಗ ಆ ದಿನ ಇನ್ನು ದೂರವಿಲ್ಲೆಂದು ಹೇಳಬೇಕಾಗುವುದು. ಅವರು ಯುರೇನಿ-ಯುಮ್ಮನ್ನು ಆವಿಗೊಳಿಸಿ ಅದರಲ್ಲಿ ಎರಡು ಗಂಟೆಗಳ ವರೆಗೆ ಲೇಸರ್ ಕಿರಣಗಳನ್ನು ಬಿಟ್ಟಾಗ ಯುರೇನಿಯುಮ್-೨೩೫ ರ ಪ್ರಮಾಣ ಸೇಕಡಾ ಮೂರರಷ್ಟಾಯಿತು. ಹೀಗೆ ದೊರೆತ ಯುರೇನಿಯುಮ್ ಮಾದರಿಯನ್ನು ತೂಗಿದಾಗ ಅದರ ತೂಕ ಗ್ರಾಮುಗಳಷ್ಟಿತ್ತು. ಈ ಪ್ರಮಾಣ ಅಲ್ಪವಾದುದೇನೋ ನಿಜ; ಆದರೆ ಲೇಸರ್ ಕಿರಣಗಳನ್ನುಪಯೋಗಿಸಿ ಮಾನವನ ಕಣ್ಣಿಗೆಟುಕುವಷ್ಟು ಪ್ರಮಾಣದಲ್ಲಿ ಇಂತಹ ಮಾದರಿಯನ್ನು ತಯಾರಿಸಿದ್ದು ಇದೇ ಮೊದಲ ಸಲ.

ಈ ಪ್ರಯೋಗದಿಂದಾಗಿ ಅಮೇರಿಕದ ಪರಮಾಣು ವಿಜ್ಞಾನಿಗಳಲ್ಲಿ ಉತ್ಸಾಹದ ಚಿಲುಮೆ ಪುಟಿದೆದ್ದಿದೆ. ಲೇಸರ್ ಕಿರಣಗಳನ್ನು ಬಳಸಿಕೊಂಡು ಯುರೇನಿಯುಮ್ಮನ್ನು ಯುರೇನಿಯುಮ್-೨೩೫ ರಿಂದ ಸಮೃದ್ಧಗೊಳಿಸಲು ತಾತ್ವಿಕವಾಗಿ ಇನ್ನೂ ಅನೇಕ ಮಾರ್ಗಗಳಿವೆ. ಆದರೆ ಅವಿನ್ನೂ ಪ್ರಾತ್ಯಕ್ಷಿಕವಾಗಿ ಸಾಧ್ಯವಾಗಬೇಕಷ್ಟೆ. ಈಗ ಒಂದು ವಿಧಾನ ಸಾಧ್ಯವಾಗಿರುವುದರಿಂದ ಮುಂದೆ ಉಳಿದ ವಿಧಾನಗಳೂ ಸಾಧ್ಯವಾಗಬಹುದು. ತತ್ಫಲವಾಗಿ ಅತ್ಯಲ್ಪ ವೆಚ್ಚದಲ್ಲಿ ಅತ್ಯಪಾರ ಶಕ್ತಿ ಲಭ್ಯವಾಗಿ ಮಾನವ ಕಲ್ಯಾಣಕ್ಕೆ ಬಳಸುವಂತಾಗಬಹುದು.

ಅದೇನೆ ಇರಲಿ, ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದ ಸಂಶೋಧಕರ ಈ ಪ್ರಯೋಗಗಳು ಪರಮಾಣು ವಿಜ್ಞಾನದಲ್ಲಿ ಒಂದು ಮೈಲುಗಲ್ಲಾಗುವುದು ಖಂಡಿತ. ✡



# ಶುಭ ಶುಕ್ರವಾರ

ಈ ಏಪ್ರಿಲ್ ೧೬ ರಂದು ಶುಭ-ಶುಕ್ರವಾರ. ಮಾನವ ಕುಲಕೋಟಿಯ ಉದ್ಧಾರಕ್ಕಾಗಿ ಯೇಸು ಕ್ರಿಸ್ತ ಶಿಲುಬೆಯನ್ನೇರಿ ತನ್ನ ಪ್ರಾಣಾರ್ಪಣಗೈದ ಮಂಗಳ ದಿನ. ಕ್ರಿಸ್ತನ ಅನುಯಾಯಿಗಳಿಗೆ ಈ ದಿನವು ಪಾಪ ವಿಮೋಚನಕರವಾಗಿರುವಂತೆ ಆಶೀರ್ವಾದಪರ ದಿನವೂ ಆಗಿದೆ. ಜಗತ್ತಿನಲ್ಲಿಯ ಕ್ರಿಶ್ಚಿಯನ್ನರೆಲ್ಲ ಶುಭ ಶುಕ್ರವಾರವನ್ನು ಭಕ್ತಿಪೂರ್ವಕ ಆಚರಿಸುತ್ತಾರೆ. ಅಲ್ಲದೆ ಇದೇ ಆಚರಿಸಲಾಗುತ್ತದೆ.

ಜಗತ್ತಿನಲ್ಲಿಯ ಜನ ಸ್ವರ್ಗದಲ್ಲಿರುವ ಆ ತಂದೆಯನ್ನು ಮರೆತು ಪಾಪಾಚರಣೆಯಲ್ಲಿ ಮುಳುಗಿದ್ದಾಗ ಈ ದೇವಪುತ್ರನಾದ ಯೇಸುವಿನ ಜನ್ಮವಾಯಿತು. ದೀನ ಬಂಧು ಆಪದ್ರಕ್ಷಕನಾದ ಯೇಸುವು ಜನರನ್ನು ಸನ್ಮಾರ್ಗದಲ್ಲಿ ನಡೆಸಲು ತನ್ನ ಜೀವನವನ್ನೇ ಮುಡಿಪಾಗಿಟ್ಟನು. ತನ್ನ ಉಪದೇಶಗಳಿಂದ ಅಂತಃಕರಣಪೂರ್ಣ ಕೃತಿಗಳಿಂದ ಜನಕೋಟಿಯನ್ನು ಆಕರ್ಷಿಸಿ ಅವರನ್ನು ದೇವಮಾರ್ಗದತ್ತ ತಿರುಗಿಸುತ್ತಿದ್ದ ಯೇಸುವು ತನ್ನ ಜೀವನದಲ್ಲಿ ಅನೇಕ ಪವಾಡಗಳನ್ನೂ ಮಾಡಿ ತೋರಿಸಿದನು. ಈತನ ಈ ಜನಪ್ರಿಯತೆಯನ್ನು ಕಂಡ ಪುರೋಹಿತ ವರ್ಗವೂ ಆಡಳಿತ ವರ್ಗವೂ ಈತನನ್ನು ದ್ವೇಷಿಸುತ್ತ ಇದ್ದಿತು. ಯೇಸುವನ್ನು ಯಾವದಾದರೊಂದು ತಪ್ಪಿನಲ್ಲಿ ಸಿಲುಕಿಸಿ ಆತನ ಮುಳ್ಳನ್ನು ಕಿತ್ತಿ ಹಾಕಬೇಕು ಎಂದೂ ಇವರು ಹೊಂಚು ಹಾಕುತ್ತಿದ್ದರು, ಸಂಚು ನಡೆಸಿದ್ದರು.

ಯೇಸು ಶಿಲುಬೆಗೇರಿದ ದಿನದ ಮುಂಚಿನ ಒಂದು ವಾರದ ಘಟನೆಗಳು ಆತನ ಪ್ರಾಣಾರ್ಪಣೆಯ ಹಿನ್ನೆಲೆಯಲ್ಲಿ ಪರಿಶೀಲನಾರ್ಹವಾಗಿವೆ. ಜೇರುಸಲೇಮುದಿಂದ ಐದು ಮೈಲು ದೂರದ ಬೇಥಾನ್ಯದಲ್ಲಿ ಯೇಸುವಿನ ಭಕ್ತ ಲಾಜರ ಮರಣ ಹೊಂದುತ್ತಾನೆ. ಲಾಜರನ ಸೋದರಿ ಈ ವಾರ್ತೆಯನ್ನು ಯೇಸುವಿಗೆ ಹೇಳಿ ಕಳಿಸಲಾಗಿ ಆ ಸ್ವಾಮಿ ಬೇಥಾನ್ಯಕ್ಕೆ ಧಾವಿಸಿ, ಲಾಜರ ಸತ್ತು ನಾಲ್ಕು ದಿನಗಳಾಗಿದ್ದರೂ, ಆತನನ್ನು ಗೋರಿಯಿಂದ ಎಬ್ಬಿಸುತ್ತಾನೆ. ಮೃತನನ್ನು ಬದುಕಿಸಿದ ಈ ಪವಾಡದ ಸುದ್ದಿ ಸುತ್ತಲೂ ಹರಡಿ ಜನ ಬಂದು ಬೇಥಾನ್ಯದಲ್ಲಿ ನೆರೆಯುತ್ತಾರೆ: ಯೇಸುವಿನ ಗುಣಗಾನ ನಡೆಯುತ್ತದೆ. ಪುರೋಹಿತ ವರ್ಗದವರ ಹೊಟ್ಟೆಯಲ್ಲಿ ಖಾರ ಕಲಿಸಿದಂತಾಗುತ್ತದೆ.

ಟಿ. ಎಸ್. ಸಾವನಗೌಡರ

ಅದು ಪಸ್ಕ ಹಬ್ಬದ ಸಮಯ. ಯೇಸುವು ತನ್ನ ಅನುಯಾಯಿಗಳೊಂದಿಗೆ ಪ್ರಚಂಡ ಮೆರವಣಿಗೆಯಲ್ಲಿ, ಪಸ್ಕ ಹಬ್ಬಕ್ಕಾಗಿ ಜೇರೂಸಲೇಮಿನತ್ತ ಸಾಗುತ್ತಾನೆ. ಇದುವರೆಗೆ ಪಾದಚಾರಿಯಾಗಿಯೆ ಸಂಚರಿಸುತ್ತಿದ್ದ ಯೇಸು ಈಗ ತನ್ನ ಶಿಷ್ಯರಿಗೆ ಹೇಳಿ ಕತ್ತೆಯೊಂದನ್ನು ತರಿಸಿ ಅದರ ಮೇಲೆ ಕುಳಿತುಕೊಂಡು ಪ್ರಯಾಣ ಮುಂದುವರಿಸುತ್ತಾನೆ. ಮೆರವಣಿಗೆಯಲ್ಲಿದ್ದವರೆಲ್ಲ 'ದಾವೀದನ ಕುಮಾರನಿಗೆ ಜಯ, ಕರ್ತನ ಹೆಸರಿನಲ್ಲಿ ಬರುವವನಿಗೆ ಆಶೀರ್ವಾದ. ಮೇಲಣ ಲೋಕದಲ್ಲಿ ಜಯ' ಎಂದು ಉಗ್ಗಡಿಸುತ್ತಿರುತ್ತಾರೆ. "ತನ್ನ ರಾಜ್ಯ ಈ ಲೋಕದ್ದಲ್ಲ" ಎಂದು ಹೇಳುವ ಯೇಸುವು ಇಲ್ಲಿಯ ರಾಜರಂತೆ ಗಾರ್ದಭಾರೂಢನಾಗಿ ಬರುತ್ತಿದ್ದಾನಲ್ಲ. ಜಗತ್ತೇ ಕ್ರಿಸ್ತನಿಗಾಗಿ ಹುಚ್ಚಾಗಿ ಹೋಗಿದೆ ಎಂದು ಜನ ಆಡಿಕೊಂಡರು. ಯೇಸುವು ನಿಜವಾಗಿಯೂ ಅರಸನಾಗಿ ನಾಮಕರಣ ಹೊಂದುವನೆಂದು ಫರಿಸಾಯರು ಹೆದರಿದರು. ಕಾನೂನುಬಾಹಿರವಾದ ಈ ಮೆರವಣಿಗೆ ನಿಲ್ಲಿಸು ಎಂದು ಅವರು ಯೇಸುವಿಗೆ ಹೇಳಿದಾಗ, 'ಒಂದು ವೇಳೆ ಈ ಜನ ಸುಮ್ಮನಾದರೆ ಕಲ್ಲುಗಳು ಕೂಗುವವು' ಎಂದು ಯೇಸು ಮಾರುತ್ತರಿಸುತ್ತಾನೆ.

ಜೇರುಸಲೇಮದ ದೇವಾಲಯದಲ್ಲಿ ಯೇಸುವು ವಾರದ ಎರಡನೇ ಮೂರನೇ ದಿನಗಳಲ್ಲಿ ಜನರಿಗೆ ಬೋಧಿಸುತ್ತಿರುತ್ತಾನೆ. ಆಗ ಕ್ರಿಸ್ತನ ವೈರಿಗಳಾದ ಫರಿಸಾಯರೂ ಪುರೋಹಿತರೂ ಶಾಸ್ತ್ರಿಗಳೂ ಕ್ರಿಸ್ತನನ್ನು ಕೆಣಕಲು ಕೆಲವರನ್ನು ನೀತಿವಂತರ ವೇಷದಲ್ಲಿ ಕಳಿಸಿದರು. ಇವರು ಬಂದು, "ನೀನು ಸತ್ಯ ಬೋಧಕ ಎಂಬುದನ್ನು ಬಲ್ಲೆವು. ಕೈಸರನಿಗೆ ಕಂದಾಯ ಕೊಡುವದು ಸರಿಯೊ? ಅಲ್ಲವೋ? ಹೇಳು" ಎಂದು ಪ್ರಶ್ನಿಸಿದರು.

"ನನಗೆ ಒಂದು ನಾಣ್ಯ ಕೊಡಿ. ಇದರ ಮೇಲೆ ಯಾರ ಮುದ್ರೆ ಇದೆ?" ಎಂದ ಕ್ರಿಸ್ತ

"ಕೈಸರನದು"

"ಹಾಗಾದರೆ, ಕೈಸರನದನ್ನು ಕೈಸರನಿಗೆ ಕೊಡಿರಿ. ದೇವರದನ್ನು ದೇವರಿಗೆ ಕೊಡಿರಿ" ಕ್ರಿಸ್ತ ಚಾಣಾಕ್ಷತನದಿಂದ ಉತ್ತರಿಸಿದ.

ಆ ಜನ ಮತ್ತೆ ಕೆಲ ಉಪದ್ವ್ಯಾಪಿ ಪ್ರಶ್ನೆ ಕೇಳುತ್ತಾರೆ. ಯೇಸುವು ಶಾಂತ ಚಿತ್ತದಿಂದ ಅವನ್ನೆಲ್ಲ ಉತ್ತರಿಸುತ್ತಾನೆ. ಕೊನೆಗೆ ಅವರು,

"ನಿಮ್ಮ ಉತ್ತರಗಳೆಲ್ಲ ಸರಿಯಾಗಿವೆ. ಆದರೆ ಕೊನೆಯ ಪ್ರಶ್ನೆ. ಎಲ್ಲ ಆಜ್ಞೆಗಳಲ್ಲಿ ಶ್ರೇಷ್ಠವಾದ ಆಜ್ಞೆ ಯಾರದು?" ಎನ್ನು-ತ್ತಾರೆ.

ಆಗ ಯೇಸುವು,

"ನಮ್ಮ ದೇವರಾದ ಕರ್ತನು ಒಬ್ಬನೇ ದೇವರು. ನೀವು ಆತನನ್ನು ತ್ರಿಕರಣಪೂರ್ವಕ ಪ್ರೀತಿಸಬೇಕು. ಇದು ಮೊದಲನೆ ಆಜ್ಞೆ. ನಿನ್ನ ನೆರೆಯವನನ್ನು ನಿನ್ನಂತೆಯೆ ಪ್ರೀತಿಸಬೇಕು. ಇದು ಎರಡನೇ ಆಜ್ಞೆ. ಇವುಗಳಿಗಿಂತ ಹೆಚ್ಚಿನ ಆಜ್ಞೆ ಮತ್ತೇನಿಲ್ಲ" ಎಂದನು.

"ಎಲೈ ಶಾಸ್ತ್ರಿಗಳೇ, ಫರಿಸಾಯರೇ, ಕಪಟಿಗಳೇ, ನೀವೂ ಪರಲೋಕ (ಸ್ವರ್ಗ)ಕ್ಕೆ ಪ್ರವೇಶಿಸುವದಿಲ್ಲ. ಅಲ್ಲಿಗೆ ಹೋಗಲು ಬಾಧ್ಯಸ್ಥರನ್ನೂ ಹೋಗಗೊಡುವದಿಲ್ಲ. ನೀವು ಸ್ವರ್ಗದ ಬಾಗಿಲನ್ನೇ ಮುಚ್ಚುವ ಜನ. ನೀವು ಕುರುಡು ನಾಯಕರು. ಕಪಟಿಗಳು, ಪಾಪಿಗಳು' ಎಂದು ಆವೇಶದಿಂದ ನುಡಿದ ಯೇಸು ಆ ದೇವಾಲಯವನ್ನೇ ತ್ಯಜಿಸಿದ.

ಗುರುವಾರ ಸಾಯಂಕಾಲ. ಪಸ್ಕ ಹಬ್ಬದ ಊಟದ ಸಮಯ. ಯೇಸುವಿನ ಸಲಹೆಯಂತೆ ಸುವಾರ್ತಿಕನಾದ ಮಾರ್ಕನ ತಂದೆಯ ಮನೆಯಲ್ಲಿ ಯೇಸು, ಆತನ ಹನ್ನೆರಡು ಜನ ಶಿಷ್ಯರಿಗೆ ಊಟದ ಏರ್ಪಾಡಾಯಿತು. ಆ ರಾತ್ರಿ ಯೇಸುವಿನ ಹೃದಯದಲ್ಲಿ ಏನೋ ಕಳವಳ. ಯೇಸುವಿನ ಪಕ್ಕದಲ್ಲಿ ತಮಗೆ ಸ್ಥಾನ ದೊರೆಯಬೇಕು ಎಂದು ಶಿಷ್ಯರು ಗಡಿಬಿಡಿ-ಯಲ್ಲಿದ್ದಾರೆ. ಯೇಸುವು ಒಂದು ಪಾತ್ರೆಯಲ್ಲಿ ನೀರನ್ನು ತಂದು ತನ್ನ ಶಿಷ್ಯರ ಕಾಲುಗಳನ್ನು ತೊಳೆಯಲು ಮುಂದಾಗುತ್ತಾನೆ. ಶಿಷ್ಯರು ಚಕಿತರಾಗುತ್ತಾರೆ. ಪೇತ್ರ ಎಂಬುವನು ತೂ ಕಾಲು ತೊಳೆಸಿಕೊಳ್ಳಲು ಒಪ್ಪಲಿಲ್ಲ. 'ಹಾಗಾದರೆ ನನ್ನೊಡನೆ ನಿನಗೆ ಪಾಲಿಲ್ಲ', ಎಂದು

ಯೇಸು ಹೆದರಿಸುತ್ತಾನೆ.

ಶಿಷ್ಯರ ಪಾದಪ್ರಕ್ಷಾಲನದ ನಂತರ, "ನೀವು ಈಗ ಶುದ್ಧರಾಗಿದ್ದೀರಿ. ಆದರೆ ಎಲ್ಲರೂ ಅಲ್ಲ. ನಿಮ್ಮಲ್ಲಿ ಒಬ್ಬನು ನನ್ನನ್ನು ವಂಚಿಸುತ್ತಾನೆ" ಎಂದು ಕ್ರಿಸ್ತ ನುಡಿಯುತ್ತಾನೆ.

'ಯಾರು? ಯಾರು?' ಎಂದು ಶಿಷ್ಯರ ಗೊಂದಲ ಎಬ್ಬಿಸುತ್ತಾರೆ,

''ನಾನು ಯಾರಿಗೆ ಈ ದ್ರಾಕ್ಷಾರಸದ ಪಾತ್ರೆ ಕುಡಿಯಲು ಕೊಡುತ್ತೇನೋ ಆತನೇ" ಎಂದು ಯೇಸು ಉತ್ತರಿಸಿ, ತನ್ನ ಪಕ್ಕದಲ್ಲಿಯೆ ಇದ್ದ ಯೂದನಿಗೆ ಪಾತ್ರೆ ನೀಡುತ್ತಾನೆ. ನಂತರ ಆ ಪಾತ್ರೆ ರೂಢಿಯಂತೆ ಒಬ್ಬರಿಂದೊಬ್ಬರಿಗೆ ಕೈ ಬದಲಾಯಿಸುತ್ತ ನಡೆಯಿತು. ಯೇಸು ಸೂಚನೆ ಇತ್ತರೂ ಶಿಷ್ಯರಿಗೆ ಸ್ಪಷ್ಟವಾಗಿ ಅರ್ಥವಾಗಲಿಲ್ಲ. ಸ್ವಾಮಿಯು ವಂಚಕನಿಗೆ "ಮಾಡಬೇಕಾದುದನ್ನು ಬೇಗ ಮಾಡಿಬಿಡು" ಎಂದು ಹೇಳಿದನು. ಯೇಸುವು ಪ್ರೀತಿಯಿಂದಲೇ ತನ್ನ ಶಿಷ್ಯರಿಗೆ ಉಣಬಡಿಸಿದನು.

ಕೊನೆಗೆ ಯೇಸುವು, "ದೇವರೇ, ನನ್ನ ಕಾಲ ಸಮೀಪಿಸಿತು. ನೀನು ನನ್ನನ್ನು ಇಲ್ಲಿಗೆ ಕಳಿಸಿದಂತೆ, ನಾನು ಇವರನ್ನು ಲೋಕದಲ್ಲಿ ಎಲ್ಲೆಡೆಗೆ ಕಳಿಸಲಿದ್ದೇನೆ. ನೀನು ನನ್ನನ್ನು ಪ್ರೀತಿಸಿದಂತೆ ಅವರನ್ನು ಪ್ರೀತಿಸು" ಎಂದು ಪ್ರಾರ್ಥಿಸಿದನು.

ಎಲ್ಲರೂ ವಾಡಿಕೆಯಂತೆ ಪಸ್ಕ ಹಬ್ಬದ ಸ್ತೋತ್ರ ಹಾಡಿದರು.

ಯೇಸುವು ನಂತರ ಶಿಷ್ಯರೊಡನೆ ಶಾಸ್ತ್ರಾರ್ಥದಲ್ಲಿ ತೊಡಗಿದ್ದಾಗ, "ತಂದೆಯಾದ ದೇವರು ನನ್ನನ್ನು ನಿಮ್ಮಿಂದ ಕಿತ್ತುಕೊಳ್ಳಲಿರುವನು," ಎಂದು ಸೂಚನೆ ಇತ್ತ. ಶಿಷ್ಯನಾದ ಪೇತ್ರನು 'ಸ್ವಾಮಿ ನಾವು ನಿನ್ನನ್ನೆಂದಿಗೂ ಬಿಡೆವು' ಎಂದ. "ಈ ರಾತ್ರಿಯೆ, ಕೋಳಿ ಕೂಗುವ ಮುನ್ನ, ನೀನು ಮೂರು ಸಲ ನನ್ನನ್ನು ನಿರಾಕರಿಸುವಿ" ಎಂದು ಯೇಸು ಮುನ್ನುಡಿದಾಗ ಶಿಷ್ಯರೆಲ್ಲ ಬಹಳಷ್ಟು ನೊಂದುಕೊಂಡರು.

ರಾತ್ರಿ ಇನ್ನೂ ಹೆಚ್ಚಿತು. ಶಿಷ್ಯರೆಲ್ಲ ನಿದ್ರಾಸಕ್ತರಾಗಿದ್ದಾರೆ. ಯೇಸುವಿಗೆ ಮಾತ್ರ ಎಲ್ಲಿಲ್ಲದ ಕಳವಳ, ಸಂಕಟ, ಶಿಷ್ಯರು ಎಚ್ಚತ್ತಿರಬಾರದೇ ಎಂದುಕೊಳ್ಳುತ್ತಾನೆ. ಅಷ್ಟರಲ್ಲಿ ಹಿರಿಯ ಸಭೆಯ ಪೋಲೀಸರು ಆಯುಧಪಾಣಿಗಳಾಗಿ ಬರುತ್ತಾರೆ. ಯೇಸುವನ್ನು ಮೂವತ್ತು ನಾಣ್ಯಗಳಿಗೆ ಹಿಡಿದು ಕೊಡಲು ಒಪ್ಪಿದ್ದ ಯೂದನೂ ಅವರೊಂದಿಗಿದ್ದಾನೆ. ಆತನು ಬಂದವನೇ ಕ್ರಿಸ್ತನಿಗೆ ನಮಸ್ಕರಿಸಿ ಮುದ್ದಿಟ್ಟನು. ಅದೇ ಸಂಕೇತ ಕ್ರಿಸ್ತನನ್ನು ಪೋಲೀಸರಿಗೆ ತೋರಿಸಿ ಕೊಡಲು. ಅವನತ್ತ ಪೋಲೀಸರು ಬರುತ್ತಿದ್ದಂತೆ, "ನೀವು ಯಾರನ್ನು ಹುಡುಕುತ್ತಿದ್ದೀರಿ?. ನಜರೆತ್ತಿನ ಯೇಸುವನ್ನಾದರೆ ಆತನೇ ನಾನು," ಎಂದು ತನ್ನನ್ನು ಅರ್ಪಿಸಿಕೊಳ್ಳುತ್ತಾನೆ. ಈ ಗದ್ದಲಕ್ಕೆ ಶಿಷ್ಯರು ಎಚ್ಚತ್ತರು. ಪೇತ್ರನಂತೂ ಒಬ್ಬ ಪೋಲೀಸನ ಕಿವಿಯನ್ನೇ ಕತ್ತರಿಸಿ ಬಿಟ್ಟನು.

"ಪೇತ್ರ, ಕತ್ತಿ ಹಿರಿದರೆ ಕತ್ತಿಯಿಂದಲೇ ಸಾಯುವರು. ಅದನ್ನು ಒರೆಗೆ ಸೇರಿಸು" ಎಂದು ಯೇಸು ಬೋಧಿಸುತ್ತಾನೆ.

ಇನ್ನು ನಡೆಯಬೇಕು ಯೇಸುವಿನ ವಿಚಾರಣೆ. ಯಹೂದಿಗಳ ಮುಖ್ಯ ಪುರೋಹಿತ ಕಾಯಫ. ಆದರೆ ಕಾರುಭಾರವೆಲ್ಲ ಆತನ ಮಾವ ಅನ್ನನದು. ಪೋಲೀಸರು ಯೇಸುವನ್ನು ಆತನೆದುರು ಒಯ್ಯುತ್ತಾರೆ. ಆಗ ನಸುಕಿನ ೩-೩॥ ಗಂಟೆ. ಪೇತ್ರನೂ ಯೋಹಾನನೂ ತಲೆ ಮರೆಸಿಕೊಂಡು ಅಲ್ಲಿರುತ್ತಾರೆ. ಅನ್ನನು ಯೇಸುವನ್ನು ಕಾಯಫನ ಕಡೆಗೆ ಕಳಿಸುತ್ತಾನೆ. ಹಿರಿಯ ಸಭೆಯಲ್ಲಿ ಯೇಸುವಿನ ವಿಚಾರಣೆ ಆಗಬೇಕು. ಜಂಗುಳಿ ಹಿರಿಯ ಸಭೆಗೂ ಧಾವಿಸುತ್ತದೆ. ಗುಂಪಿನಲ್ಲಿದ್ದ ಓರ್ವಳು ಪೇತ್ರನನ್ನು 'ನೀನು ಕ್ರಿಸ್ತನ ಶಿಷ್ಯನಲ್ಲವೇ?" ಎಂದು ಕೇಳುತ್ತಾಳೆ. ಆತ ನಿರಾಕರಿಸುತ್ತಾನೆ. ಮತ್ತೆ ಇಬ್ಬರು ಗುರುತಿಸಿದಾಗಲೂ ನಿರಾಕರಿಸುತ್ತಾನೆ. ಆತನಿಗೆ ಯೇಸು ಹೇಳಿದ ಮಾತು ನೆನಪಾಗುತ್ತದೆ.

ಹಿರಿಯ ಸಭೆ ಪಸ್ಕ ಹಬ್ಬದ ಸಮಯದಲ್ಲಿ ಯಾವ ವಿಚಾರಣೆಯನ್ನೂ ಇಟ್ಟುಕೊಳ್ಳುವ

ಪರಿಪಾಠ ಇಲ್ಲ. ಯಾರನ್ನಾದರೂ ಬಿಡುಗಡೆ ಮಾಡುವದಿದ್ದರೆ ಮಾತ್ರ ಆ ಸಭೆ ವಿಚಾರಣೆ ನಡೆಸುತ್ತದೆ. ಆದರೂ ಈಗ ಕಾಯಫನ ಅಧ್ಯಕ್ಷತೆಯಲ್ಲಿ ಹಿರಿಯ ಸಭೆ ಸೇರಿತು. ಆ ಸಭೆಯ ಸದಸ್ಯರು ಎಷ್ಟೋ ಪ್ರಶ್ನೆ ಕೇಳಿದರೂ ಯೇಸು ಉತ್ತರಿಸುವದಿಲ್ಲ. ಕೊನೆಗೆ ಕಾಯಫನು, "ನೀನು ದೇವಪುತ್ರನೋ? ಬರಬೇಕಾದ ಮೆಸ್ಸಿಯಾನೋ? ಹೇಳಲೇಬೇಕು" ಎಂದು ಗರ್ಜಿಸುತ್ತಾನೆ.

"ನೀನೇ ಹೇಳಿದಿಯಲ್ಲ. ಇದಲ್ಲದೆ ಇನ್ನು ಮೇಲೆ ಮನುಷ್ಯ ಕುಮಾರನು. ಸರ್ವ ಶಕ್ತನ ಬಲಗಡೆಯಲ್ಲಿ ಆಸೀನನಾಗಿರುವದನ್ನು, ತಿರುಗಿ ಮೇಘಾರೂಢನಾಗಿ ಬರುವದನ್ನು ನೋಡುವಿರಿ" ಎಂದು ಯೇಸು ಉತ್ತರಿಸಿದನು.

"ಕೇಳಿದಿರಲ್ಲ ಈತನ ದೇವ ದೂಷಣೆ. ಬೇರೆ ಪುರಾವೆ ಇನ್ನೇಕೆ? ನೀವು ಏನನ್ನುವಿರಿ?" ಎಂದು ಕಾಯಫನು ಹಿರಿ ಸಭೆಯ ಸದಸ್ಯರಿಗೆ ವಿಚಾರಿಸಲು, "ಈತ ಮರಣದಂಡನೆಗೆ ಅರ್ಹನು" ಎಂದು ಅವರು ತಮ್ಮ ನಿರ್ಣಯ ತಿಳಿಸಿದರು. ಮರಣ ದಂಡನೆ ನೀಡುವ ಅಧಿಕಾರ ಈ ಸಭೆಗೆ ಇಲ್ಲದ್ದರಿಂದ ಯೇಸುವನ್ನು ರೋಮನ್ ನ್ಯಾಯಾಧೀಶ ಪಿಲಾತನೆಡೆಗೆ ಕಳಿಸುತ್ತಾರೆ. ದಾರಿಯುದ್ದಕ್ಕೂ ಜನ ಆತನನ್ನು ಹಿಂಸಿಸುತ್ತಿರುತ್ತಾರೆ. ಇದನ್ನು ಕಂಡ ಯೂದನಿಗೆ ಪಶ್ಚಾತ್ತಾಪವಾಗಿ ಕಾಯಫನಿಂದ ತಾನು ಪಡೆದ ನಾಣ್ಯಗಳನ್ನು ತೂರಿಬಿಡುತ್ತಾನೆ.

ಯೇಸುವನ್ನು ಪಿಲಾತನ ಎದುರು ತಂದಾಗ ಶುಕ್ರವಾರ ಬೆಳಗಿನ ಏಳು ಗಂಟೆಯ ಸಮಯ. ಪಿಲಾತ ತನ್ನ ಅರಮನೆಯ ಆವಾರದ ಬಯಲಲ್ಲಿಯೇ ನ್ಯಾಯಾಲಯ ನೆರೆಸಿದ. ಹಿರಿ ಸಭೆಯ ಸದಸ್ಯರೂ, ಪುರೋಹಿತರೂ, ಶಾಸ್ತ್ರಿಗಳೂ ಯೇಸುವಿನ ಸುತ್ತ ನಿಂತಿದ್ದಾರೆ. ಪಿಲಾತನು ಹಿರಿಯ ಸಭೆಯ ಸದಸ್ಯರ ಹೇಳಿಕೆಗಳನ್ನೆಲ್ಲ ಕೇಳಿಕೊಂಡು, ಯೇಸುವಿನ ಅಭಿಪ್ರಾಯವನ್ನು ತಿಳಿದುಕೊಂಡು ತನ್ನ ಅಭಿಪ್ರಾಯದಲ್ಲಿ ಯೇಸು ನಿರ್ದೋಷಿ ಎಂದು ಸಾರಿದ. ಆದರೆ ಈತನಿಗೆ ಮರಣ ದಂಡನೆ ವಿಧಿಸಬೇಕು ಎಂಬುದು ನೆರದ ಜಂಗುಳಿಯ ಅಭಿಮತವಾಗಿದ್ದಿತು. ಜನತೆ ಆಕ್ರೋಶ ಮಾಡಿ ಯೇಸುವಿಗೆ ಮರಣ ದಂಡನೆ ವಿಧಿಸಬೇಕೆಂದು ಆಗ್ರಹಪಡಿಸಲಾಗಿ ಪಿಲಾತನು 'ಈ ಪಸ್ಕ ಹಬ್ಬದಲ್ಲಿ ಒಬ್ಬರನ್ನು ಬಿಡುಗಡೆ ಮಾಡಬೇಕು ಎಂದಿದೆ. ಯೇಸುವನ್ನು ಬಿಟ್ಟು ಬಿಡಲೋ?' ಎಂದು ಕೇಳಿದಾಗ ಕ್ರುದ್ಧ ಜನತೆ, "ಬೇಡ, ರಾಜದ್ರೋಹಿ ಬರಬ್ಬನನ್ನು ಬಿಡು. ಯೇಸುವನ್ನು ಶಿಲುಬೆಗೇರಿಸು" ಎಂದು ಅರಚಿತು.

ಪಿಲಾತನು ಅನಿವಾರ್ಯವಾಗಿ ಜನಾಭಿಪ್ರಾಯಕ್ಕೆ ತಲೆ ಬಾಗಬೇಕಾಯಿತು.

ರಾಜಕೀಯ ಕೈದಿ ಬರಬ್ಬನಿಗೆಂದು ಸಿದ್ಧಪಡಿಸಿದ್ದ ಶಿಲುಬೆಯನ್ನು ಯೇಸುವು ಹೊತ್ತುಕೊಂಡು ಹೊರ ಬಂದನು. ಜೊತೆಗೆ ಮತ್ತಿಬ್ಬರು ತಂತಮ್ಮ ಶಿಲುಬೆಗಳನ್ನು ಹೊತ್ತು ಸಾಗಿದ್ದಾರೆ. ಅವರವರ ಕೊರಳಲ್ಲಿ ಅವರಿಗೇಕೆ ಮರಣದಂಡನೆ ಆಗಿದೆ ಎಂಬುದನ್ನು ತಿಳಿಸುವ ಚಿಕ್ಕ ಚಿಕ್ಕ ಹಲಗೆಗಳಿವೆ. 'ನಜರೇತಿನ ಯೇಸು ಯಹೂದ್ಯರ ಅರಸ' ಎಂದು ಯೇಸುವಿನ ಕೊರಳಹಲಗೆ ಮೇಲೆ ಬರೆಯಲಾಗಿತ್ತು.

ಬೆಳಿಗ್ಗೆ ಹತ್ತು ಗಂಟೆಗೆ ಶಿಲುಬೆ ಹೊತ್ತ ಯೇಸುವಿನ ಮೆರವಣಿಗೆ ಹೊರಟಿತು. ಯೇಸುವಿನ ಭಕ್ತರೂ ಸ್ತ್ರೀಪುರುಷರೆನ್ನದೆ ಆ ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದಾರೆ. ಇತರರು ಯೇಸುವಿಗೆ ಕುಚೋದ್ಯ ಮಾಡುತ್ತ ನಡೆದಿದ್ದರೆ ಈ ಭಕ್ತ ಗಣ ಪ್ರೇತಯಾತ್ರೆ ಎಂಬಂತೆ ಆಕ್ರೋಶಿಸುತ್ತ ಸಾಗಿದೆ. ಅಸಾಧ್ಯವೇದನೆಯಿಂದ ಯೇಸು ಶಿಲುಬೆ ಹೊತ್ತು ಸಾಗುವಾಗ ಮುಗ್ಗರಿಸುತ್ತಾನೆ. ಸಿಪಾಯಿಗಳು ಶಿಲುಬೆಯನ್ನು ಬೇರೊಬ್ಬನ ಮೇಲೆ ಹೊರಿಸುತ್ತಾರೆ.

ಈ ಮೆರವಣಿಗೆ ಹೀಗೇ ಸಾಗಿದ್ದಾಗ ಯೇಸು ಜೇರುಸಲೇಮಿನ ನಾಶದ ಬಗ್ಗೆ ಜನಕ್ಕೆ ಮುನ್ನೆಚ್ಚರಿಕೆ ನೀಡುತ್ತಾನೆ.

"ನನಗಾಗಿ ಅಳಬೇಡಿರಿ. ನಿಮಗಾಗಿ

ಸಿರಿ. ನಿಮ್ಮ ಮಕ್ಕಳಿಗಾಗಿ ದುಃಖಿಸಿರಿ. ಬಂಜೆಯರೂ ಬಸುರಾಗದವರೂ ಮೊಲೆ ಕುಡಿಸದವರೂ ಧನ್ಯರು ಎಂದು ಹೇಳುವ ದಿನ ಬರಲಿವೆ" ಎಂದು ಕಣಿ ನುಡಿಯುತ್ತಾನೆ ಯೇಸು ಸ್ವಾಮಿ.

ಮರವಣಿಗೆ ಕಾಲ್ವರಿಗುಡ್ಡ ತಲುಪುವ ಹೊತ್ತಿಗೆ ಅಪರಾಹ್ನ ೩ ಗಂಟೆಯಾಗಿರುತ್ತದೆ. ಅಲ್ಲಿ ಸಿಪಾಯರು ಯೇಸುವನ್ನು ಶಿಲುಬೆಯ ಮೇಲೆ ಮಲಗಿಸಿ ಆತನ ಎರಡೂ ಅಂಗೈಗಳಿಗೆ ಒಂದೊಂದು ಮೊಳೆ ಜಡ್ಡಿದು ಶಿಲುಬೆಯನ್ನು ಎತ್ತಿ ನಿಲ್ಲಿಸಿ ಪಾದಗಳಿಗೆ ಮೊಳೆ ಜಡಿಯುತ್ತಾರೆ. ತಲೆಗೆ ಮುಳ್ಳಿನ ಕಿರೀಟ ತೊಡಿಸುತ್ತಾರೆ. ಇತರ ಇಬ್ಬರು ಕಳ್ಳರನ್ನು ಶಿಲುಬೆ-ಗೇರಿಸುತ್ತಾರೆ.

ನೆರೆದ ಜಂಗುಳಿಯ ಆರ್ತಧ್ವನಿ ಮುಗಿಲು ಮುಟ್ಟುತ್ತದೆ.

'ನೀನು ಕ್ರಿಸ್ತನಾಗಿದ್ದರೆ ನಿನ್ನನ್ನೂ ರಕ್ಷಿಸಿಕೊ, ನಮ್ಮನ್ನೂ ರಕ್ಷಿಸು' ಎಂದು ಶಿಲುಬೆಗೆ ನೇತಾಡುತ್ತಿದ್ದ ಕಳ್ಳನೊಬ್ಬ ನುಡಿಯುತ್ತಾನೆ.

"ಇವರು ತಾವು ಏನು ಮಾಡುತ್ತಿದ್ದೇವೆಂಬುದನ್ನು ಅರಿಯರು" ಎಂದು ಯೇಸು ಉದ್ಗರಿಸುತ್ತಾನೆ.

"ಏನು ನಿನಗೆ ದೇವರ ಭಯವಿಲ್ಲವೇ? ನಾವು ನಿಜಕ್ಕೂ ದುಷ್ಕರ್ಮಿಗಳು. ಇಂಥ ಶಿಕ್ಷೆಗೆ ಅರ್ಹರು. ನಿಷ್ಪಾಪಿಯಾದ ಯೇಸುವಿಗೆ ಹೀಗಾದದ್ದು ಯೋಗ್ಯವಲ್ಲ. ಯೇಸುವೇ ನೀನು ನಿನ್ನ ರಾಜ್ಯ ಪಡೆದವನಾಗಿ ಬರುವಾಗ ನನ್ನನ್ನೂ ನೆನೆಸಿಕೊ" ಎಂದು ಇನ್ನೊಬ್ಬ ಕಳ್ಳ ದೈನ್ಯದಿಂದ ಕೇಳಿಕೊಂಡನು.

'ನೀನೀಗಲೇ ನನ್ನೊಂದಿಗೆ ಸ್ವರ್ಗದಲ್ಲಿರುವಿ' ಯೆಂದು ಯೇಸು ಆತನಿಗೆ ಆಶ್ವಾಸನ ನೀಡಿದನು. ನಂತರ ಯೇಸು ತನ್ನ ತಾಯಿಯ ಯೋಗಕ್ಷೇಮವನ್ನು ಶಿಷ್ಯ ಯೋಹಾನನಿಗೆ ಒಪ್ಪಿಸಿ, "ಇನ್ನು ಎಲ್ಲ ತೀರಿತು. ತಂದೆಯೆ, ನನ್ನ ಆತ್ಮವನ್ನು ನಿನ್ನ ಕೈಗಳಲ್ಲಿ ಅರ್ಪಿಸುವೆ" ಎಂದು ತಲೆ ಬಾಗಿಸಿ ಪ್ರಾಣತ್ಯಾಗ ಮಾಡಿದನು,

"ಈತ ನಿಜವಾಗಿಯೂ ದೇವಪುತ್ರನು!" ಎಂದು ಅಲ್ಲಿದ್ದ ರೋಮನ್ ಅಧಿಕಾರಿಯೂ ಉದ್ಗಾರ ಹೊರಡಿಸಿದ.

ಕ್ರಿಸ್ತನ ಈ ಶಿಲುಬೆಯ ಮರಣದಿಂದ ಪ್ರಪಂಚಕ್ಕೆ ಪ್ರೇಮದ ಹೊಸ ಸಂದೇಶ ದೊರೆಕಿತು. ಕ್ರಿಸ್ತನ ಬಲಿದಾನವು ಜಗತ್ತಿನ ಜನತೆಯ ಕಲ್ಯಾಣಕ್ಕಾಗಿ ನಡೆಯಿತು. ಹಿರಿ ಸಭೆಯ ಸದಸ್ಯರಾದ ನಿಕೊದೇಮ ಮತ್ತು ಅರಿಮಥಾಯದ ಯೋಸೆಫ್‌ರ ಪ್ರಭಾವದಿಂದಾಗಿ ಯೇಸುವಿಗೆ ಯಹೂದ್ಯರಿಗುಚಿತವಾದ ರೀತಿಯಲ್ಲಿ ಗೋರಿ ಮಾಡಲಾಯಿತು.

ಕ್ರಿಸ್ತನು ಸತ್ತ ಮೂರನೇ ದಿನ ತಿರುಗಿ ಏಳುತ್ತಾನೆ ಎಂದು ಹೇಳಲಾದ್ದರಿಂದ ಅನ್ನ ಕಾಯಫರಿಗೆ ಚಿಂತೆ. ಗೋರಿಗೆ ರೋಮನ್ ಸೈನಿಕರ ಕಾವಲು ಇರಿಸುತ್ತಾರೆ. ಆದರೂ ನಿರ್ದಿಷ್ಟ ದಿನವಾದ ಎಪ್ರಿಲ್ ೧೮ ರಂದು ಯೇಸುವಿನ ಗೋರಿಯ ಮೇಲಿನ ಕಲ್ಲು ಭಾರಿ ಸದ್ದಿನಿಂದ ಸಿಡಿದು ದೇವದೂತನು ಶುಭ್ರ ವಸ್ತ್ರ ಪರಿಧಾನಮಾಡಿದವನಾಗಿ ಕಂಗೊಳಿಸುತ್ತಾನೆ. ಈ ಪುನರುತ್ಥಾನದ ದರ್ಶನದಿಂದ ಆತನ ಶಿಷ್ಯರೂ ಭಕ್ತಾದಿಗಳೂ ಆನಂದ ತುಂದಿಲರಾಗುತ್ತಾರೆ. ಬರಿದಾದ ಕ್ರಿಸ್ತ ಗೋರಿಯೆ ಕ್ರೈಸ್ತ ತತ್ವದ ವಿಜಯ ಸಂಕೇತವೆಂದು ಭಾವಿಸಲಾಗಿದೆ. ಶುಭಶುಕ್ರವಾರದ ರಹಸ್ಯ ಇಂತಿದೆ.

ಕೊನೆಯದಾಗಿ, ನಮ್ಮ ಪೂಜ್ಯ ಗಾಂಧೀಜಿಯವರು ಈ ವಿಚಾರದಲ್ಲಿ ನುಡಿದ ಅವರ ಮಾತುಗಳನ್ನು ನೆನವರಿಕೆ ಮಾಡಿಕೊಳ್ಳೋಣ. "Though I cannot claim to be a christian in the Sectarian sense, the example of Jesus' suffering is a factor in the composition of my undying faith in non-violence which rules all my actions, worldly and temporel"

—Harijan 7-1-1939

# ಪ್ರಾರ್ಥನೆಗೂ ವೈಜ್ಞಾನಿಕ ನಿಕಷ

ಮಹಾಬಲೇಶ್ವರ ಕಾಟ್ರಹಳ್ಳಿ

ವಿಜ್ಞಾನ ಮನುಷ್ಯನ ಮೆದುಳಿನ ಕಸರತ್ತಾದರೆ–ಧರ್ಮ ಅಥವಾ ಧಾರ್ಮಿಕ ಆಚಾರ ವಿಚಾರ ಮೆದುಳಿಗೆ ಮಾದಕತೆ ತರಿಸಿ ಸಂಪೂರ್ಣ ಶರಣಾಗತಿ ಹೊಂದುವಂತೆ ಮಾಡುವಂಥದು. ಕಟ್ಟೆಚ್ಚರದಲ್ಲಿ ನಿಲುಕುವ ಸತ್ಯಗಳಿಗೆ ಒಂದು ಹಾತೊರೆಯುವುದಾದರೆ ಇನ್ನೊಂದು ಒಂದು ಬಗೆಯ ಭಾವೋನ್ಮಾದದಲ್ಲಿ ಸತ್ಯದ ಪ್ರಭೆಗೆ ಚಾಚುವಂಥಾದ್ದು. ಇಂಥ ಇಬ್ಬಗೆಯ ಸತ್ಯಾನ್ವೇಷಣೆ (?) ನಿರಂತರ ಶೋಧನೆ ಯೊಂದನ್ನೇ ಗುರಿಯಾಗಿರಿಸಿಕೊಂಡಿವೆ ಎಂದು ಕೊಂಡರೂ ಧಾರ್ಮಿಕ ವಿಧಿಗಳು ಶೋಷಣೆಯ ಗುರಿಯಿರಿಸಿಕೊಂಡೇ ಬೆಳೆದುಬಂದಿವೆ ಎಂಬ ಅಭಿಪ್ರಾಯವಿರುವಾಗ ಅಂಥವನ್ನು ಅವು ಎಷ್ಟು ವೈಜ್ಞಾನಿಕ ಎಂದು ಪರೀಕ್ಷೆ ಗೊಳಪಡಿಸುವುದು ಯೋಗ್ಯವಾದುದಾಗಿದೆ.

೧೮೭೦ರ ದಶಕ ಮಹತ್ವದ ವೈಜ್ಞಾನಿಕ ಕಾಣಿಕೆಗಳನ್ನು ಕೊಟ್ಟಿದೆ. ಆವಾಗಲೇ ವಸ್ತುವಿನ ಅಣು-ಚಲನೆ ತತ್ವವನ್ನು ಕ್ಲಾಸಿ-ಯಸ್ ಮತ್ತು ಮಾಕ್ಸ್‌ವೆಲ್ ಎಂಬವರು ನಿರೂಪಿಸಿ ಗಣನೀಯ ವೈಜ್ಞಾನಿಕ ಶೋಧಗಳನ್ನು ಮಾಡಿದರು. ಭೌತ–ರಸಾಯನ ಶಾಸ್ತ್ರಗಳಲ್ಲಿ ಕಂಡ ಈ ಶೋಧನೆಗಳಿಗೆ ಪೂರಕವಾಗಿಯೇ ಡಾರ್ವಿನ್‌ನ 'ಡಿಸೆಂಟ್ ಆಫ್ ಮ್ಯಾನ್' ಗ್ರಂಥ ಮನುಷ್ಯನ ದೇಹ ಮತ್ತು ಮನಸ್ಸು ಹೇಗೆ ಬೆಳೆದುಬಂದವು ಎಂಬ ಕ್ಲಿಷ್ಟ ಸಮಸ್ಯೆಗೆ ತನ್ನ ವಿಕಾಸ ತತ್ವದಿಂದ ಸಾಕಷ್ಟು ಪರಿಹಾರ ದೊರಕಿಸಿ ಕೊಟ್ಟಾಗ ಜೈವಿಕಶಾಸ್ತ್ರಗಳೂ ಅನೇಕ ಜೀವಿಗಳ ಸಮಸ್ಯೆಗಳಿಗೆ ವಿವರಣೆ ಕೊಡಲು ಶಕ್ತವಾದವು. ದೇಹ ಮತ್ತು ಮನಸ್ಸು ಹೇಗೆ ತಮ್ಮ ಕ್ರಿಯೆ ಮುಂದುವರಿಸಿಕೊಂಡು ಹೋಗುತ್ತವೆ, ಅವುಗಳು ಎಂಥ ಸಂಬಂಧ ಹೊಂದಿವೆ, ಮನಸ್ಸು ಅಥವಾ ಆತ್ಮ ಅಮರವೇ ಎಂಬಿತ್ಯಾದಿ ಪ್ರಶ್ನೆಗಳಿಗೆ ದಾರ್ಶನಿಕರು, ಧರ್ಮತತ್ವೋಪಾಸಕರು ಹಿಂದಿನಿಂದಲೂ ಉತ್ತರ ಕೊಡುತ್ತ ಬಂದಿದ್ದರೂ ಅವಾವೂ ಸಮರ್ಪಕವಾಗಿರಲಿಲ್ಲ. ಕೊನೆಗೆ ವಿಜ್ಞಾನ ತನ್ನ ತೆಕ್ಕೆಗೆ ಈ ಸಮಸ್ಯೆಯನ್ನು ಬಾಚಿಕೊಂಡು ಸಾಧ್ಯವಾದ ಪ್ರಯತ್ನಗಳನ್ನು ಮಾಡಿದೆ.

೧೯ನೇ ಶತಮಾನ ಕಂಡ ವಿಶಿಷ್ಟ ವೈಜ್ಞಾನಿಕ ಅನ್ವೇಷಣೆಗಳು ಕೆಲವು ವಿಕ್ಟೋರಿಯನ್ ವಿಜ್ಞಾನಿಗಳು ಭಾರೀ ಆಹ್ವಾನ ಒಡ್ಡಲು ಸಾಕಷ್ಟು ಧೈರ್ಯ ವಿಶ್ವಾಸ ಒದಗಿಸಿ ಕೊಟ್ಟವು.

ಯಾವುದೇ ಒಂದು ಕಾರ್ಯ ಸಿದ್ಧಿಸಿಕೊಳ್ಳು ವುದಕ್ಕೆ ಪ್ರಾರ್ಥನೆಯ ಪರಿಣಾಮದ ಬಗ್ಗೆ ಅತೀವ ನಂಬಿಕೆ ಇಟ್ಟುಕೊಂಡಿದ್ದ ಧಾರ್ಮಿಕ ವ್ಯಕ್ತಿಗಳು ಒಂದು ಸಂಕ್ಲಿಷ್ಟ ಪರೀಕ್ಷೆಗೆ ಇದನ್ನು ಒಳಪಡಿಸಲು ಮುಂದೆ ಬಂದದ್ದೂ

ಆಗಲೇ. ಇಡೀ ದೇಶದ ಪ್ರಾರ್ಥನೆಯ ಒಟ್ಟು ಪರಿಣಾಮ ಇಚ್ಛಿತ ಗುರಿ ಸಾಧಿಸುವಲ್ಲಿ ವೈಜ್ಞಾನಿಕ ಅಳತೆಗೋಲಿಗೆ ಎಷ್ಟು ನಿಲುಕಬಹುದು ಎಂಬುದೇ ಆ ಪರೀಕ್ಷೆ ಆಗಿತ್ತು. 'ಪ್ರಾರ್ಥನಾ ಪರೀಕ್ಷೆ' ಸುಮಾರು ೧೮೭೨-೭೩ರಲ್ಲಿ ಆರಂಭವಾದದ್ದು ಹೀಗೆ. ಸಾಕಷ್ಟು ಮರೆತೇ ಹೋದ ಧರ್ಮ ಮತ್ತು ವಿಜ್ಞಾನಗಳ ನಡುವಣ ಜಿಜ್ಞಾಸು ಯುದ್ಧ ಮರುಕಳಿಸುವಂತಾಯಿತು.

ವೈಜ್ಞಾನಿಕ ಪದಾರ್ಥವಾದದ ಅಧ್ವರ್ಯು ಜಾನ್ ಟಿಂಡಾಲ್ ಅವರು ಪ್ರಥಮವಾಗಿ ಆಖಾಡಕ್ಕಿಳಿದರು. ಅನಾಮಧೇಯನದೆಂದು ಹೇಳಲಾದ ಒಂದು ಲೇಖನ (ರೋಗಿಗಳಿಗಾಗಿ ಪ್ರಾರ್ಥನೆ) ದಲ್ಲಿ ಉದ್ದೇಶ "ಪ್ರಕೃತಿಯ ಮೇಲೆ ಪ್ರಕೃತಿಗೆ ಅತೀತವಾದ ಶಕ್ತಿಗಳ ಕ್ರಿಯೆ"ಯನ್ನು ಗುಣಾತ್ಮಕವಾಗಿ ಕಂಡು ಹಿಡಿಯಬಹುದೇ ಎಂಬುದನ್ನು ಮನಗಾಣುವದಾಗಿತ್ತು ಎಂದು ಟಿಂಡಾಲ್ ಹೇಳಿದ್ದರು. ಮಾನವರ ಕಷ್ಟಕಾರ್ಪಣ್ಯಗಳನ್ನು ಕಂಡು ಕೇಳಿ ಆ ಒಂದು ಅತೀತ ಶಕ್ತಿ ಪರಿಹಾರ ಸೂಚಿಸುತ್ತದೆ. ಹಾಗೂ ಅದು ಅಭ್ಯಾಸಪೂರ್ವಕವಾಗಿಯೇ ಆಗುತ್ತದೆ ಎಂದು ಹೇಳುವವರನ್ನೇ ತರಾಟೆಗೆ ತೆಗೆದುಕೊಳ್ಳಲೆಂಬುದೇ ಅವರ ಉದ್ದೇಶವಾಗಿತ್ತು.

ನಾವು ಅನೇಕ ಕಾರಣಗಳಿಗಾಗಿ ಅದರಲ್ಲೂ ಮುಖ್ಯವಾಗಿ ಯಾವುದೇ ರೋಗ, ಸಂಕಷ್ಟ ನಿವಾರಿಸಲೆಂದು ಪ್ರಾರ್ಥನೆ ಮಾಡತೊಡಗುತ್ತೇವೆ. ರೋಗಿಗಳು ಪ್ರಾರ್ಥನೆಗೆ ಮೊರೆ ಹೋಗುವುದೇ ಹೆಚ್ಚು. ಖಾಯಿಲೆ ವಾಸಿಯಾದರೆ ಹರಕೆ ಹೊತ್ತಿದ್ದನ್ನು ಪೂರೈಸುವ ನಂಬಿಕೆಗಳು ಎಲ್ಲೆಲ್ಲೂ ಉಂಟು. ಇಂಥ ಪ್ರಾರ್ಥನೆ ಸಲ್ಲಿಸಿದರೆ ಇಂಥ ರೋಗಿಗಳು ಗುಣಮುಖರಾಗುವರೆಂದರೆ ಅದನ್ನು ವಸ್ತುನಿಷ್ಠವಾಗಿ ಮೌಲ್ಯನಿರ್ಣಯ ಮಾಡಬಹುದು. ನಿರ್ದಿಷ್ಟಪಡಿಸಿದ ಆಸ್ಪತ್ರೆಯೊಂದರಲ್ಲಿ ಹಳೆಯ ಅನುಭವದಿಂದ ದೃಢವಾದ ಸಾವಿನದರ ಗೊತ್ತುಪಡಿಸಿಕೊಂಡ ರೋಗಿಗಳನ್ನು ತೆಗೆದುಕೊಂಡು ೩ ರಿಂದ ೫ ವರ್ಷಗಳ ವರೆಗೆ ಸತತವಾಗಿ ಸಮಸ್ತ ಆಸ್ತಿಕರನ್ನು ನೆರೆಸಿ ಈ ರೋಗಿಗಳ ಗುಣಮುಖತೆಯನ್ನೇ ಗುರಿಯಾಗಿಟ್ಟುಕೊಂಡು ವಿಶೇಷ ಪ್ರಾರ್ಥನೆ ಮಾಡುವಂತೆ ನಿರ್ದೇಶಿಸಬೇಕು. ಈ ಅವಧಿಯ ಮುಕ್ತಾಯದ ನಂತರ ಅಂಥದೇ ರೋಗಗಳಿಂದ ಬಳಲುತ್ತಿರುವ ಆದರೆ ಅದೇ ತರಹದ ಸೇವಾ ವ್ಯವಸ್ಥೆ ಹೊಂದಿರುವ ಬೇರೆ ಆಸ್ಪತ್ರೆಗಳಲ್ಲಿನ ರೋಗಿಗಳ ಸಾವಿನ ದರವನ್ನು ತಾಳೆ ಮಾಡಿ ನೋಡಬಹುದು. ಈ ಪರೀಕ್ಷೆಗೆ ಯಾವುದೇ ರೀತಿಯ ಪ್ರತಿಕ್ರಿಯೆ ಧಾರ್ಮಿಕರಿಂದ ಬಾರದೇ ಹೋದರೂ ಕೆಲವೊಂದು ಪತ್ರಿಕೆಗಳ ಸಂಪಾದಕರು, ದೇವರು ಇಂಥ ಪ್ರಯೋಗಗಳಲ್ಲಿ ಸಹಕಾರ ತೋರಿಸುವುದೂ ಇಲ್ಲ ಯಾಕೆಂದರೆ ಗುಣಾತ್ಮಕವಾಗಿ ಅವನ ಶಕ್ತಿಯನ್ನು ಅಳೆಯಲು ಶಕ್ಯವಿಲ್ಲ ಎಂದೂ, ಇದು ಪ್ರಾರ್ಥನೆಯ ವಿರುದ್ಧವೇ ವಿದ್ರೋಹ ಬಗೆವಂಥ ಯತ್ನವೆಂದೂ ತಮ್ಮ ಸಂಪಾದಕೀಯಗಳಲ್ಲಿ ಬರೆದರು.

ರೆವರೆಂಡ್ ಲಿಟಲ್ ಡೇಲ್ ಎಂಬುವರು ಟಿಂಡಾಲ್‌ರ ಸವಾಲಿಗೆ ಉತ್ತರ ಕೊಡಲು ಯತ್ನಿಸಿದರೂ ಎಲ್ಲ ಭೌತಶಾಸ್ತ್ರಜ್ಞರು ಸೀಮಿತವಾದ ಪದಾರ್ಥವಾದದ ಕಲ್ಪನೆಗಳಿಂದ ವಿಶಾಲವಾದ ನೈತಿಕ ಮತ್ತು ಆಧ್ಯಾತ್ಮಿಕ ದೃಷ್ಟಿಗೆ ಬರಲು ಅಶಕ್ತರಾಗಿದ್ದಾರೆಂದು ಟೀಕಿಸಿದರು. ಆದರೂ ಕೊನೆಗೆ ಅವರು 'ವೈಜ್ಞಾನಿಕ ಪರೀಕ್ಷೆ'ಯಿಂದ ಪ್ರಾರ್ಥನೆಯ ಮೌಲ್ಯ ನಿರ್ಣಯ ಮಾಡುವ ವಿಚಾರಕ್ಕೂ ಒಪ್ಪಿದರು.

ಧರ್ಮದ ಕೆಲವು ತತ್ವಗಳು ವಿಜ್ಞಾನ ಬೆಳೆಯಲಿಕ್ಕೆ ದಾರಿಮಾಡಿಕೊಟ್ಟಿವೆ. ಟಿಂಡಾಲ್ ಪ್ರಾರ್ಥನೆಯ ಮೌಲ್ಯವನ್ನು ಸುಮ್ಮನೇ ನಿರಾಕರಿಸದೆ "ಮಾನವರ ಪ್ರಾರ್ಥನೆಯ ಮೇರೆಗೆ ಅತೀತವಾದೊಂದು ಶಕ್ತಿ ಪ್ರಕೃತಿಯನ್ನು ನಿಯಂತ್ರಣಗೊಳಿಸಿದ್ದು, ಬದಲಾವಣೆ ಮಾಡುತ್ತದೆ" ಎಂಬ ತತ್ವವನ್ನು ವಿಜ್ಞಾನದಲ್ಲಿಯಂತೆ ಪ್ರಾಯೋಗಿಕ ಪರೀಕ್ಷೆಗೊಳಪಡಿಸಿ ಸಾಬೀತಾದರೆ ಒಪ್ಪಲಿಕ್ಕೇನು ಎಂದು ಪದೇಪದೇ ಕೇಳುತ್ತಿದ್ದರು.

ನ್ಯೂಟನ್‌ನ ಪ್ರಕಾಶ ತತ್ವದಂತೆ ಗಾಳಿಯಲ್ಲಿ ಗಿಂತ ನೀರಿನಲ್ಲಿ ಬೆಳಕು ಹೆಚ್ಚು ವೇಗದಲ್ಲಿ ಚಲಿಸುತ್ತದೆ ಎಂಬ ನಿಯಮ ತಪ್ಪೆಂದು ನಂತರದ ಪರೀಕ್ಷೆಗಳಿಂದ ಕಂಡುಬಂದಾಗ ಅದನ್ನು ನಿರಾಕರಿಸಿದ್ದುಂಟು. ಅದರಂತೆಯೇ ದೈವವಾದಿಗಳು ಈ ಪ್ರಾರ್ಥನೆಯ ಮೌಲ್ಯ ನಿರ್ಣಯ ಕಂಡು ಹಿಡಿಯಲು ಈ ಪರೀಕ್ಷೆಗೆ ಒಡ್ಡಿ ಫಲಿತಾಂಶ ಬೇರೆಯದಾದರೆ ತಮ್ಮ ಸಿದ್ಧಾಂತವನ್ನು ಬಿಡಲು ತಯಾರಾಗಿರಬೇಕು. ದೇವರು ಪ್ರಾರ್ಥನೆಗಳಿಗೆ ಉತ್ತರಿಸುವ ಮಾದರಿಯು ನೈತಿಕ ಮತ್ತು ಧಾರ್ಮಿಕ ವಲಯಗಳಿಗೇ ಸೀಮಿತವಾಗಿರುವುದನ್ನು ಗಮನಿಸದೆ ಟಿಂಡಾಲ್ ಅವರು ಸುಮ್ಮನೇ ಭೌತ, ಅಭೌತಗಳನ್ನು ಕಲಬೆರಕೆ ಮಾಡಿ ಗೊಂದಲಗೊಳಿಸುತ್ತಿದ್ದಾರೆಂದು ಜೇಮ್ಸ್ ಮಾಕೋಷ್ ಎಂಬ ಸ್ಕಾಟಿಶ್ ದೈವವಾದಿ ಆಖಾಡಕ್ಕಿಳಿದು ಟೀಕೆ ಮಾಡಿದರು. ಪ್ರಾರ್ಥನೆಯ ಸಾಮರ್ಥ್ಯದ ಬಗ್ಗೆ ಹೇಳುತ್ತಾ ಅವರು ಯಾವ ಗುರಿಗಾಗಿ ಆದರೂ ಸಲ್ಲಿಸುವ ಪ್ರಾರ್ಥನೆಯನ್ನು ಬಿಟ್ಟು ಮಾನವರಿಗೆ ಒಳ್ಳೆಯದಾಗುವ ಪಥದೆಡೆ ಸಾಗಿಸುವಂತೆ ದೇವರು ಸಾಕಷ್ಟು ವಿವೇಕ ಹೊಂದಿರುವುದರಿಂದ ಬೇರೆ ರೀತಿಯಲ್ಲಿ ಅವನು ಉತ್ತರಿಸಬಹುದು. ಯಾವ ಪ್ರಾರ್ಥನೆಗೆ ಎಂಥ ಉತ್ತರ ನೀಡಿದ ಅಥವಾ ನೀಡಲಿಲ್ಲ ಎಂದು ಪಟ್ಟಿ ಮಾಡುವುದಾಗದು" ಎಂದು ಹೇಳಿದರು. ನಮಗೆ ಗೊತ್ತಿರದ ಕಾರಣಗಳಿಗಾಗಿ ದೇವರು ನಮ್ಮ ಪ್ರಾರ್ಥನೆಗಳನ್ನು ನಿರಾಕರಿಸಬಹುದು. ಪ್ರಾರ್ಥನೆಯ ಪ್ರಥಮ ಉದ್ದೇಶ ಭೌತಿಕ ಕ್ರಿಯೆಗಳನ್ನು ಸಿದ್ಧಿಸಿಕೊಳ್ಳಲಿಕ್ಕೆ ಅಲ್ಲ, ಬದಲಾಗಿ ಆಧ್ಯಾತ್ಮಿಕ ಶಕ್ತಿಗಳಿಸಿಕೊಳ್ಳಲಿಕ್ಕೆ ಬಳಸಿಕೊಳ್ಳಬಹುದು. ಈ ದೃಷ್ಟಿಕೋನ ಗಾಲ್ಟನ್‌ನ ಪ್ರಾರ್ಥನೆಯ ಸಾಮರ್ಥ್ಯ ನಿರ್ಣಯದ ಬಗೆಗಿನ ಅಂಕಿಸಂಖ್ಯೆಗಳು ಪ್ರಸ್ತುತವಾಗಿಸುತ್ತವೆ. ಯಾವುದೇ ರೀತಿಯ ವೈಜ್ಞಾನಿಕ ಪ್ರಯೋಗಕ್ಕೆ ಒಳಪಡಿಸುವುದೂ ನಿಷ್ಪ್ರಯೋಜಕವಾಗುತ್ತದೆ.

ವೈಜ್ಞಾನಿಕರು ತಮ್ಮ ನಂಬಿಕೆಯಲ್ಲಿ ಸ್ವಲ್ಪವೂ ಅಚಲರಾಗದೆ ವಾದದಿಂದ ಹೊರಬಂದರೂ ಪ್ರಾರ್ಥನೆಯಲ್ಲಿ ನಂಬಿಕೆಯಿಟ್ಟವರಲ್ಲೂ ಉಬದಲಾವಣೆಯಾಗಲಿಲ್ಲ.

ದೈವವಾದಿಗಳು ಧಾರ್ಮಿಕ ನಂಬಿಕೆಗಳನ್ನು ವೈಜ್ಞಾನಿಕ ಪ್ರಯೋಗಗಳಿಗೆ ಒಳಪಡಿಸುವುದು ಅಸಾಧ್ಯವೆಂಬ ವಾದವನ್ನೇ ಒತ್ತಿ ಹೇಳುತ್ತ ಬಂದರು. ವೈಜ್ಞಾನಿಕ ವಿಶ್ವದೃಷ್ಟಿ ಹೆಚ್ಚುತ್ತ ಬಂದರೂ ತಮ್ಮ ಪ್ರತಿಷ್ಠೆಗೆ ಗಟ್ಟಿ ಅಂಟಿಕೊಂಡೇ ಇರಲು ಬಯಸಿದರು.

ಧಾರ್ಮಿಕ ಮತ್ತು ವೈಜ್ಞಾನಿಕ ದೃಷ್ಟಿಕೋನಗಳ ಮಧ್ಯೆ ಇರುವ ಬಿರುಕನ್ನು ಈ ವಾದ ಹೆಚ್ಚಿಸಿತಲ್ಲದೆ ಯಾವ ಪರಿಣಾಮವನ್ನೂ ನೀಡಲಿಲ್ಲ. 'ನಿರ್ಣಾಯಕ ಪರೀಕ್ಷೆ' ಧಾರ್ಮಿಕ ರಂಗದಲ್ಲಿಯಂತೆ ವಿಜ್ಞಾನದಲ್ಲೂ 'ಕ್ವಚಿತ್' ಎಂಬುದನ್ನೂ ಯಾರೂ ಹೇಳಲಿಲ್ಲ. ವಿಜ್ಞಾನದಲ್ಲೂ ಇವತ್ತಿನ ಸಿದ್ಧಾಂತ ಹೊಸ ಶೋಧನೆಗಳಿಂದ ಹೊಸ ಮೈ ಪಡೆದು ಹೊರ ಬರುತ್ತಿರುವುದು ನಾವು ಕಾಣುತ್ತಿದ್ದೇವೆ. ವಿಜ್ಞಾನಿ ಯಾವಾಗಲೂ ಒಂದು ಸಿದ್ಧಾಂತದ ನಮೂನೆಯೊಳಗೆ ಬರುವ ಸಂಗತಿಗಳನ್ನಷ್ಟೇ ಪ್ರಾಯೋಗಿಕವಾಗಿ ಪರೀಕ್ಷೆಗೆ ಒಳಪಡಿಸುತ್ತಾನೆ. ಒಂದೆರಡು ಅಪವಾದಗಳನ್ನು ಬಿಟ್ಟು ಆ ನಮೂನೆ ಬಿಟ್ಟು ಬಿಡಲು ನಿರಾಕರಿಸುತ್ತಾನೆ. ಅಪರೀಕ್ಷಿತ ಪೂರ್ವ ಕಲ್ಪನೆಯ ಆಧಾರದ ಮೇಲೆ ವಿಜ್ಞಾನ ಬೆಳೆಯುತ್ತದೆ. ಪರೀಕ್ಷೆಯ ನಿಕಷದಲ್ಲಿ ಪ್ರಜ್ವಲಿಸುತ್ತದೆ ಬೆಳಕು ನೀಡುತ್ತವೆ.

ಟಿಂಡಾಲ್ ಮತ್ತು ಗಾಲ್ಟನ್‌ನರು ತಮ್ಮ ಪರೀಕ್ಷೆಗಳನ್ನು ನಡೆಸಿ ಧನಾತ್ಮಕ ಫಲಿತಾಂಶ ಪಡೆದಿದ್ದರೆ ಏನು ಮಾಡುತ್ತಿದ್ದರು ಎನ್ನುವುದನ್ನು ಊಹಿಸುವುದು ತುಂಬ ಮೋಜಿನ ವಿಷಯ. ✿



# ಒಳಂತರದ ಅಭೀಪ್ಸೆ

ರಂಗನಾಥ ದಿವಾಕರ

ಆತ್ಮ ಎಂಬ ಒಂದು ನಿತ್ಯ–ಸತ್ಯ ವಸ್ತು ಇದೆ ಎಂಬು ನಂಬುವವರೆಲ್ಲರೂ ಅಧ್ಯಾತ್ಮ ವಾದಿಗಳು. ಸಹಜಾನಂದ, ನಿತ್ಯಾನಂದ, ನಿರಾಲಂಬ ಆನಂದ, ಎಂಬ ಚಿದಾವಸ್ಥೆಯೇ ಅವರೆಲ್ಲರ ಸಾಮಾನ್ಯ ಅಭೀಪ್ಸೆ. ಅದೇ ಮೋಕ್ಷ, ಮುಕ್ತಿ. ಇದರಲ್ಲಿ ಹಲವು ಸೂಕ್ಷ್ಮ ಪರ್ಯಾಯಗಳಿರಬಲ್ಲವು. ಆದರೆ "ನಿತ್ಯಾನಂದಾ ಗತಿಃ ಸಾ ಪರಾಯಾ" ಎಂಬುದೇ ಅವರ ಅಭೀಪ್ಸೆ ಎಂಬ ಪ್ರಮೇಯಕ್ಕೆ ಆಯಾ ಪರ್ಯಾಯಗಳಿಂದ ಬಾಧೆ ಬರಲಾರದು.

ಆದರೆ ಎಲ್ಲರೂ ಅಧ್ಯಾತ್ಮವಾದಿಗಳಿಲ್ಲ. ಅಧ್ಯಾತ್ಮವಾದಿಗಳಲ್ಲದವರ ಒಳಂತರದ ಕಟ್ಟ ಕಡೆಯ, ಕೊನೆಯ ಆತ್ಯಂತಿಕ ಅಭೀಪ್ಸೆ ಯಾವುದು, ಜ್ಞಾತಾಜ್ಞಾತವಾಗಿ ಅವರು ಯಾವ ಅಭೀಪ್ಸೆಯಿಂದ, ಅಭಿಲಾಷೆಯಿಂದ ಪ್ರೇರಿತರಾಗಿ ವರ್ತಿಸುವರು ಎಂಬುದು ಒಂದು ಕುತೂಹಲದ ವಿಷಯವೂ ಸೈ ಹಾಗೂ ತುಲನಾತ್ಮಕ ದೃಷ್ಟಿಯಿಂದ ಆಯಾ ಅಭೀ-ಪ್ಸೆಯ ಮೌಲ್ಯವೇನು, ಅದರ ಸ್ಥಾನಮಾನ ಗಳಾವು ಎಂಬದೂ ಮಹತ್ವದ್ದು.

ವೇದಾಂತ ಎಂಬುದು ಒಂದು ತತ್ವಜ್ಞಾನ, ಶಾಸ್ತ್ರ ಎನಿಸಿದೆ. ಅದು ಅಧ್ಯಾತ್ಮವನ್ನೇ ಅವಲಂಬಿಸಿದೆ. ಆದರೆ ಇತರ ತತ್ವಜ್ಞಾನ ಗಳೂ ದೇಶವಿದೇಶಗಳಲ್ಲಿ ಪ್ರಚಲಿತ ಇರುವವು. ಈಚೆಗೆ ಪಾಶ್ಚಾತ್ಯ ಮನೋವಿಜ್ಞಾನವೂ ಈ ವಿಷಯದತ್ತ ಆಕರ್ಷಿತವಾಗಿದೆ. ಇಲ್ಲಿ ಆಯಾ ತತ್ವಜ್ಞಾನಗಳ ವಿಚಾರ ಮಾಡುವದು ಪ್ರಸ್ತುತವಿಲ್ಲ. ಆದರೆ ಬೇರೆ ಬೇರೆ ಅಭೀಪ್ಸೆಗಳ ಸ್ವರೂಪವೇನು ಎಂಬುದನ್ನಷ್ಟೇ ನೋಡಬೇಕಾಗಿದೆ. ಅವುಗಳಿಗೆ ವಿಶಿಷ್ಟವಾದ ತತ್ವಜ್ಞಾನಗಳ ಆಧಾರ ಇರಬಹುದು, ಇರ-ಲಿಕ್ಕಿಲ್ಲ. ಮಾನವನ ಮನೋರಂಗದಲ್ಲಿ ಆಯಾ ಅಭೀಪ್ಸೆಗಳ ಪ್ರೇರಣೆ ಕ್ರಿಯಾಶೀಲವಿದೆ ಮತ್ತು ಆ ಮಟ್ಟಿಗೆ ಮಾನವನ ಜೀವನದಲ್ಲಿ ಅವುಗಳ ಪ್ರತಿಬಿಂಬ ಬೀಳುತಿದೆ, ಎಂಬುದಿಷ್ಟೇ ಇಲ್ಲಿ ಅಭಿಪ್ರೇತವಿರುವದು.

ಪ್ರಾಣಿವರ್ಗವನ್ನು, ಜೀವಕೋಟಿಯನ್ನು ನಾವು ಲೆಕ್ಕಕ್ಕೆ ಹಿಡಿಯದಿದ್ದರೆ ಈ ಪೃಥ್ವಿ, ಸೂರ್ಯಮಂಡಲ, ಅನಂತ, ವಿಶ್ವಗಳು ಇವೆಲ್ಲವೂ ಚೈತನ್ಯರಹಿತವಾದ ಜಡಪದಾರ್ಥ ಗಳಿಂದ ಕೂಡಿ; ಈ ಮೂಲ ಜಡದಿಂದಲೆ ಚೈತನ್ಯ ಎಂಬುದು ಅಭಿವ್ಯಕ್ತವಾಯಿತು. ಅದೇ ಈಗ ಜೀವಕೋಟಿ, ಪ್ರಾಣಿವರ್ಗ ಎನಿಸು ವದು ಎಂದು ನಂಬುವ ಒಂದು ವರ್ಗ ಇದೆ. ಆ ವರ್ಗದ ಆಂತರಿಕ ಅಭೀಪ್ಸೆಯನ್ನು ಗುರುತಿ ಸುವಾಗ ಹಲವರು, ಈ ಚೈತನ್ಯ ಎಂಬುದು ಪುನಃ ಆ ತನ್ನ ಮೂಲ ಜಡಸ್ವರೂಪವನ್ನೆ ತಾಳಿ, ಅದೇ ಮುಕ್ತಿ ಎಂದು ತಿಳಿದು ವಿರಮಿ ಸುವದು. ಅದೇ ಹಾಗೆ ನಂಬುವವರ ಉತ್ಕ್ರಮಣ (ಇವ್ಹೊಲ್ಯೂಶನ್).

ಚೈತನ್ಯವು ಪುನಃ ಜಡವಾಗುವದು ಸಾಧ್ಯ ವಿಲ್ಲ ಎಂದು ನಂಬುವವರದೊಂದು ವರ್ಗವಿದೆ. ಈ ವರ್ಗದ ಆತ್ಯಂತಿಕ ಅಭೀಪ್ಸೆಯನ್ನು ಕಲ್ಪಿ ಸುವಾಗ, ತಾಯಿಯ ಗರ್ಭದಲ್ಲಿ ಇಲ್ಲವೆ ತಶ್ತಿಯ ಅಂತರ್ಯದಲ್ಲಿ ಸುಖವಾಗಿದ್ದ ಸ್ಥಿತಿ ಯನ್ನೆ ಈ ವರ್ಗದವರು ಪುನಃ ಹಂಬಲಿಸು ವರು ಎಂದು ಊಹಿಸಲಾಗುವದು.

ಇನ್ನೊಂದು ಊಹಿಸಬಹುದಾದ ಆತ್ಯಂತಿಕ ಚಿದವಸ್ಥೆ ಎಂದರೆ, ಇಂದ್ರಿಯ ಜನ್ಯವಾದ ವಿಷಯೋಪಭೋಗಗಳ ಪರಮಾವಧಿ ಹಾಗೂ ಅದರ ನೈರಂತರ್ಯ. ಇದೇ ಅಭೀಪ್ಸೆಯು ಪ್ರೇರಣೆ ಇರಲಿಕ್ಕೆ ಸಾಕು.

ಸದ್ಯ ಸ್ಥಿತಿಯಲ್ಲಿ ಮಾನವನ ಶಕ್ತಿಗಳು ಅತ್ಯಂತ ಪರಿಮಿತವಾಗಿರುವವು; 'ಅವನೆ[illegible] ಯತ್ನ

ಅಭೀಪ್ಸೆಯನ್ನು ಇಟ್ಟುಕೊಂಡಿದ್ದರೂ ಅದನ್ನು ಪೂರೈಸಲು ಸಾಧ್ಯವಿಲ್ಲ. ಆದುದರಿಂದ ಮಾನವನ ಶಕ್ತಿ ವಿಶೇಷಗಳು ಅಪಾರವಾಗಿ ಬೆಳೆಯಬೇಕು ಮತ್ತು ಅವನು ಸ್ವೈರ-ಸ್ವಚ್ಛಂದ ವೃತ್ತಿಯಿಂದ ಜೀವನವನ್ನು ಸಾಗಿಸಲು ಸಾಧ್ಯವಾಗಬೇಕು ಎಂಬ ಅಭೀಪ್ಸೆ ಉಂಟಾಗಲು ಆಸ್ಪದವಿದೆ. ಇಂಥ ಪರಿಸ್ಥಿತಿ ನಿರ್ಮಾಣವಾದರೆ ಇದೇ ಸ್ವರ್ಗಲೋಕವೊ, ಗಂಧರ್ವಲೋಕವೊ, ದೇವಲೋಕವೋ ಎನಿಸಬಲ್ಲದು.

ಈಗಿದ್ದ ಪರಿಸ್ಥಿತಿಯಲ್ಲಿ ಮಕ್ಕಳ ನಿರ್ಮಲ ಸ್ವಚ್ಛಂದ ಆನಂದವನ್ನು ದೊರತುಪಡಿಸಿದರೆ ಇಬ್ಬರು ಪ್ರೇಯಸಿಗಳು ಪ್ರೇಮಾಲಿಂಗನದಲ್ಲಿ ತಮ್ಮ ಭಿನ್ನತ್ವವನ್ನು ಮರೆತು ಏಕತ್ವದ ಅದ್ವೈತಾನಂದವನ್ನು ಅನುಭವಿಸುತಿರುವದು ಎಲ್ಲಕ್ಕೂ ಹೆಚ್ಚಿನ ಆನಂದ ಎನಿಸಿಕೊಳ್ಳುತ್ತಿರುವದು. ಹಲವು ತಪ್ಪು ತಿಳಿವಳಿಕೆಯ ಮೂಲಕ ಇಲ್ಲವೆ ಎರಡನೆ ಉದಾಹರಣೆ ಹೊಳೆಯದ ಪರಿಣಾಮವಾಗಿ ಆ ಭೋಗಾನಂದವು ಆತ್ಮಾ-ನಂದಕ್ಕೆ ಒಮ್ಮೊಮ್ಮೆ ಹೋಲಿಸಲಾಗುವದು. ಅಂಥ ಭೋಗಾನಂದವೇ ಕೊನೆಯ ಅಭೀಪ್ಸೆಯ ರೂಪವನ್ನು ತಾಳಬಲ್ಲದು.

ಈ ಬಗೆಯ ಅಭೀಪ್ಸೆಯ ವಿವಿಧ ಪರ್ಯಾಯಗಳನ್ನು ಸಾಧಿಸಲು ಮಾನವನು ಅನೇಕಾನೇಕ ಮಾರ್ಗಗಳನ್ನು ಅನುಸರಿಸುವನು. ಅವುಗಳಲ್ಲಿ ಮದ್ಯಮಾದಕಗಳ ಉಪಯೋಗವೂ ಒಂದು. ಆದರೆ ಇವೆಲ್ಲವುಗಳು ಒಂದು ಕಡೆ, ಆತ್ಮಾ-ನಂದ, ನಿರಾಲಂಬ ಸಹಜಾನಂದ ಇನ್ನೊಂದು ಕಡೆ, ಈ ದೃಷ್ಟಿಯಿಂದ ಈ ವಿಷಯವನ್ನು ಪರಿಶೀಲಿಸುವದು ಅವಶ್ಯ.

ಈ ಲೋಕದ ಪ್ರಾಣಿಮಾತ್ರಗಳಲ್ಲಿ ಮಾನವನು ಎಲ್ಲಕ್ಕೂ ಉಚ್ಚಸ್ಥಾನದಲ್ಲಿ ವಿರಾಜಮಾನನಾಗಿರುವನು ಎಂಬುದು ಒಂದು ರೀತಿ ಸ್ವತಃ ಸಿದ್ಧ. ನಿತ್ಯದ ಜೀವನಯಾತ್ರೆ, ಆಗುಹೋಗುಗಳು ಮುಂತಾದವುಗಳಲ್ಲಿ ಬೇಕಾದಷ್ಟು ವೈವಿಧ್ಯವಿದ್ದರೂ ಒಬ್ಬ ಉತ್ಕ್ರಮಣಶೀಲ ಪ್ರಾಣಿ (ಇವ್ಹಾಲ್ವಿಂಗ್) ಎಂಬ ದೃಷ್ಟಿಯಿಂದ ಮಾನವನ ಒಳಂತರದ ಅಭೀಪ್ಸೆ ಯಾವುದು? ಜ್ಞಾತಾಜ್ಞಾತನಾಗಿ, ತಿಳಿದು ತಿಳಿಯದೆ, ಯಾವುದಕ್ಕೆ ನಾವು ಆತ್ಯಂತಿಕ ಸುಖ ಎನ್ನಬಲ್ಲೆವೊ ಅದನ್ನು ಮಾನವನು ಅರಸುತಿರುವನು ಎನ್ನಲು ಅಡ್ಡಿಯಿಲ್ಲ. ಆ ಸುಖದ ಸ್ವರೂಪದ ಬಗ್ಗೆ ಹಾಗೂ ಅದರ ಪರ್ಯಾಯಗಳ ಬಗ್ಗೆ ವಿಚಾರಿಸಿದ್ದಾಗಿದೆ. ಆ ಎಲ್ಲ ಸುಖ ಪರ್ಯಾಯಗಳು ಒಂದು ಕಡೆ ಹಾಗೂ ಯಾವುದಕ್ಕೆ ಆತ್ಮಾನಂದ, ಸಹಜಾನಂದ, ನಿರಾಲಂಬ ಆನಂದ ಎನ್ನಬಹುದೋ ಆ ಆನಂದ ಇನ್ನೊಂದು ಕಡೆ, ಈ ದೃಷ್ಟಿಯಿಂದ ವಿಚಾರಮಾಡುವದು ಈ ಲೇಖದ ಉದ್ದೇಶವಿರುವದು.

ಈ ವಿಚಾರವನ್ನು ಕೈಕೊಳ್ಳುವಾಗ ಯಾವದೇ ಧರ್ಮ, ತತ್ವಜ್ಞಾನ, ಆಸ್ತಿಕ್ಯ-ನಾಸ್ತಿಕ್ಯಭಾವ, ಆತ್ಮ-ಅನಾತ್ಮ ಇವುಗಳ ಪಕ್ಷಪಾತವನ್ನು ಬಿಟ್ಟು ಕೇವಲ ಮಾನವನ ಅನುಭವದ ದೃಷ್ಟಿಯಿಂದ ವಿಚಾರಿಸಬಹುದೇ ಎಂಬ ವಿಚಾರ ಹೊಳೆಯಿತು. ಪ್ರಾರಂಭದಲ್ಲಿ ಸೂಚಿಸಿದ ಸುಖ ಪರ್ಯಾಯಗಳನ್ನು ಪರಿಶೀಲಿಸಿದರೆ, ಒಂದು ಮಾತು ಸ್ಪಷ್ಟವಾಗುವದು. ಅದೇನೆಂದರೆ. ಚೈತನ್ಯವು ಪುನಃ ಜಡತ್ವವನ್ನು ಹೊಂದುವುದಾಗಲಿ, ಮಾತೃಗರ್ಭದ ಸಂರಕ್ಷಣವನ್ನು ಪಡೆದು ಸುಖಿಸುವುದಾಗಲಿ, ಅದು ಒಂದು ಅಭೀಪ್ಸೆ ಎನಿಸಿದರೂ, ಅದರಲ್ಲಿ ಒಂದು ದೊಡ್ಡ ಮುಖ್ಯವಾದ ದೋಷವು ಕಂಡುಬರುವದು. ಅದೇನಂದರೆ, ಜಡತ್ವದಲ್ಲಿ ಅಥವಾ ಗರ್ಭಾವಸ್ಥೆಯಲ್ಲಿ ಯಾವ ಎಚ್ಚರವೂ (ಅವೆಯರ್‌ನೆಸ್) ಇರಲರಿಯದು. ಆದುದರಿಂದ ಆ ಎರಡು ಅಭೀಪ್ಸೆಗಳನ್ನು ಬಿಟ್ಟೆ ನಾವು ಇತರ ಸುಖ ಪರ್ಯಾಯಗಳನ್ನು ನಿರಾಲಂಬ ಆನಂದದೊಡನೆ ಹೋಲಿಸಬೇಕಾಗುವದು.

ಜಡತ್ವ ಹಾಗೂ ಗರ್ಭಾವಸ್ಥೆ ಇವೆರಡನ್ನು ಳಿದು ಇತರ ಸುಖಪರ್ಯಾಯಗಳನ್ನು ಆಲೋಚಿಸಿದರೆ, ಅವುಗಳಲ್ಲಿಯ ಮುಖ್ಯ ದೋಷವೆಂದರೆ ಪರಾವಲಂಬನೆ. ಪರವಶ ಅಥವಾ ಪರಾಧೀನ ಇದ್ದುದೆಲ್ಲವೂ ದುಃಖ ಮೂಲವಿರುವದು. 'ಯದ್ಯತ್ ಪರವಶಂ ದುಃಖಮ್ ಯದ್ಯದಾತ್ಮಾವಶಂ ಸುಖಮುಂ' ಎಂಬುದು ಪದೇಪದೇ ಅನುಭವಕ್ಕೆ ಬರುವ ಮಾತು.

ಆ ದೃಷ್ಟಿಯಿಂದ, ಅವಂಗಣ ವಿಷಯೋಪ-ಭೋಗ, ಮರಣಪಶ್ಚಾತ್ ಸ್ವರ್ಗೀಯ ವಿಷಯ ಸುಖ, ಸಂಭೋಗಸುಖ ಇವೆಲ್ಲವೂ ಪರವಶ ಅಥವಾ ಪರಾಧೀನ ಸುಖಗಳು. ಅದೇ ರೀತಿ ಮಾದ್ಯಮಾದಕ ಪದಾರ್ಥಗಳ ಮೂಲಕ ಆಗುವ ಸುಖವು ಕೂಡ ಪರಾಧೀನವೇ ಸೈ. ಆತ್ಮಾನಂದ, ಸಹಜಾನಂದ, ನಿಜಾನಂದ, ನಿರಾಲಂಬ ಆನಂದ, ಅದೇ ರೀತಿ ಯಾವದೇ ಬಾಹ್ಯ ಪದಾರ್ಥ, ವ್ಯಕ್ತಿ, ಕಲ್ಪಿತ-ಅಕಲ್ಪಿತ ವಿಭೂತಿ ವಿಶೇಷ ಇವಾವುಗಳ ಮೇಲೆಯೂ ಅವಲಂಬನ ವಿಲ್ಲದೆ ದೊರಕುವ ಆನಂದವೆ ಆತ್ಮವಶ ಆನಂದ ಎನಿಸುವದು. ಇನ್ನು ಈ ಆತ್ಮಾವಶ ಆನಂದವು ಯಾವದೇ ಅಭೀಪ್ಸೆಯನ್ನು ಇಲ್ಲವೆ ಆಶೆ-ಇಚ್ಛೆ-ಕಾಮನೆಗಳನ್ನು ಅವಲಂಬಿಸಿರಕೂಡದು. ಯಾಕೆಂದರೆ ಆಯಾ ಆನಂದವು ಆಯಾ ಅಭೀಪ್ಸೆಯನ್ನು ಇಲ್ಲವೆ ಕಾಮನೆಯನ್ನು ಅವಲಂಬಿಸಿದಂತಾಗುವದು ಹಾಗೂ ಆ ಮಟ್ಟಿಗೆ ಪರವಶ ಎನಿಸುವದು. ಆದುದರಿಂದಲೆ ಆತ್ಮಾನಂದವನ್ನು, ಸಹಜಾನಂದವನ್ನು, ನಿರಾಲಂಬ ಆನಂದವನ್ನು ಬಣ್ಣಿಸುವಾಗ ಆಯಾವ್ಯಕ್ತಿಯು ಆ-'ಕಾಮಹತ' ಯಾವದೇ ಕಾಮನೆಯಿಂದ ಕೂಡಿದವನಿರಕೂಡದು, ಎಂದು ಹೇಳಲಾಗಿದೆ. ಒಂದು ಸುಂದರ ಸರೋವರದಲ್ಲಿ ಕಮಲವು ಅರಳುವುದಾಗಲಿ, ಮಕ್ಕಳು ಆನಂದದಿಂದ ಆಡುತಿರುವುದಾಗಲಿ, ವಸಂತದಲ್ಲಿ ಕೋಗಿಲೆ ಹಾಡುವುದಾಗಲಿ, ಇವೆಲ್ಲವುಗಳನ್ನು ಸಹಜಾನಂದಕ್ಕೆ ಹೋಲಿಸಬಹುದು. ಅದು ಸ್ವಭಾವ, ಸ್ವಧರ್ಮ. ಅದೇ ರೀತಿ ಆನಂದ ಎನ್ನುವುದು ಆತ್ಮನ ಸ್ವಭಾವ, ಸ್ವಧರ್ಮ; ಆ ಸ್ವಭಾವ, ಆ ಸ್ವಧರ್ಮ ಬೇರೆ ಅಲ್ಲ. ಆತ್ಮ ಬೇರೆ ಅಲ್ಲ.

ಈ ಸುಖಪರ್ಯಾಯಗಳ ವಿವಿಧ ಪರವಶ ಆನಂದಗಳ ಹಾಗೂ ಸ್ವವಶ- ಸ್ವಾಧೀನ ಆತ್ಮಾನಂದದ ತಾರತಮ್ಯವನ್ನು ಈ ಕೆಳಗಿನಂತೆ ಮಂಡಿಸಬಹುದು:—

| ಪರವಶ ಆನಂದ | ಆತ್ಮವಶ ನಿರಾಲಂಬ ಆನಂದ |
|---|---|
| ೧ ಆಯಾ ವಸ್ತು ದೊರಕದೇ ಹೋದರೆ ಆನಂದಕ್ಕೆ ಬಾಧೆ. ದೊರೆತ ಆಯಾವಸ್ತು ಕಳೆದುಹೋದರೆ, ಸಾಕಷ್ಟು ಇಲ್ಲದಿದ್ದರೆ, ಅದರಲ್ಲಿ ದೋಷ ವಿದ್ದರೆ ದುಃಖಕ್ಕೆ ಕಾರಣ. | ಆತ್ಮನಿಂದ, ಆತ್ಮನಿಂದಲೆ ಆತ್ಮನಲ್ಲಿಯೆ ದೊರಕುವದಾದುದರಿಂದ ಪರವಶತೆಗೆ ಎಡೆಯಿಲ್ಲ. 'ಆತ್ಮನ್ಯೇವಾತ್ಮನಾ ತುಷ್ಟಃ' ಅಥವಾ ಆತ್ಮಕ್ರೀಡಃ ಆತ್ಮರತಿಃ ಎನ್ನ-ಬಹುದು. |
| ೨ ವ್ಯಕ್ತಿಗತ ಅಥವಾ ವ್ಯಕ್ತಿಮೂಲಕ ಆನಂದದ ಪರಿಸ್ಥಿತಿಯೂ ಅದೇ ರೀತಿ. | |
| ೩ ಕ್ಷಣಿಕ, ಭಂಗುರ; ಆಯಾ ಪದಾರ್ಥ, ಆಯಾ ವ್ಯಕ್ತಿ ದೊರಕುವವರೆಗೆ ಮಾತ್ರ | ಆತ್ಮವು ಆತ್ಮನಿಂದ ಅಗಲಲಾರದು. ಆದುದರಿಂದ ಅದು ಸುದೈವ ಹಾಗೂ ನಿತ್ಯ ಆನಂದವನ್ನು ಕೊಡಬಲ್ಲದು. |
| ೪ ಆಯಾ ಪ್ರಯತ್ನಗಳು ಆಯಾ ವ್ಯಕ್ತಿಗೆ ಯಾವ ಹೆಚ್ಚಿನ ಶಕ್ತಿಸಾಮರ್ಥ್ಯವನ್ನು ಕೊಡಲಾರವು. | ಆತ್ಮಾನಂದವನ್ನು ಸಾಧಿಸುವಾಗ ಮಾಡುವ ಪ್ರಯತ್ನಗಳಿಂದ ಆಯಾ ವ್ಯಕ್ತಿಯ ಶಕ್ತಿ ಸಾಮರ್ಥ್ಯಗಳು ಬೆಳೆಯುವವು. |
| ೫ ಆಯಾ ಇಂದ್ರಿಯ, ಆಯಾ ವಿಷಯ ಇವುಗಳಿಗೆ ಆಯಾ ಸುಖ ಮರ್ಯಾದಿತ. | ಆತ್ಮಾನಂದ ಸರ್ವಸ್ವ ವ್ಯಕ್ತಿತ್ವವನ್ನು ವ್ಯಾಪಿಸುವದು. |

ಈ ಹಾಗೂ ಇನ್ನು ಹಲವಾರು ಕಾರಣಗಳ ಮೂಲಕ ಸ್ವವಶ- ಸ್ವಾಧೀನ ಹಾಗೂ ಸಹಜ ಸ್ವಭಾವವಾದ ಆತ್ಮಾನಂದವನ್ನೇ ಕೈವಶ ಮಾಡಿಕೊಳ್ಳಲು ಹಂಬಲಿಸಿ ಅದನ್ನು ಪಡೆಯುವದು ಮಹಾನ್ ಪುರುಷಾರ್ಥವೆನಿಸುವದು.

✿

ಅಭೀಪ್ಸೆಯನ್ನು ಇಟ್ಟುಕೊಂಡಿದ್ದರೂ ಅದನ್ನು ಪೂರೈಸಲು ಸಾಧ್ಯವಿಲ್ಲ. ಆದುದರಿಂದ ಮಾನವನ ಶಕ್ತಿ ವಿಶೇಷಗಳು ಅಪಾರವಾಗಿ ಬೆಳೆಯಬೇಕು ಮತ್ತು ಅವನು ಸ್ವೈರ-ಸ್ವಚ್ಛಂದ ವೃತ್ತಿಯಿಂದ ಜೀವನವನ್ನು ಸಾಗಿಸಲು ಸಾಧ್ಯವಾಗಬೇಕು ಎಂಬ ಅಭೀಪ್ಸೆ ಉಂಟಾಗಲು ಆಸ್ಪದವಿದೆ. ಇಂಥ ಪರಿಸ್ಥಿತಿ ನಿರ್ಮಾಣವಾದರೆ ಇದೇ ಸ್ವರ್ಗಲೋಕವೊ, ಗಂಧರ್ವಲೋಕವೊ, ದೇವಲೋಕವೋ ಎನಿಸಬಲ್ಲದು.

ಈಗಿದ್ದ ಪರಿಸ್ಥಿತಿಯಲ್ಲಿ ಮಕ್ಕಳ ನಿರ್ಮಲ ಸ್ವಚ್ಛಂದ ಆನಂದವನ್ನು ದೊರತುಪಡಿಸಿದರೆ ಇಬ್ಬರು ಪ್ರೇಯಸಿಗಳು ಪ್ರೇಮಾಲಿಂಗನದಲ್ಲಿ ತಮ್ಮ ಭಿನ್ನತ್ವವನ್ನು ಮರೆತು ಏಕತ್ವದ ಅದ್ವೈತಾನಂದವನ್ನು ಅನುಭವಿಸುತಿರುವದು ಎಲ್ಲಕ್ಕೂ ಹೆಚ್ಚಿನ ಆನಂದ ಎನಿಸಿಕೊಳ್ಳುತ್ತಿರುವದು. ಹಲವು ತಪ್ಪು ತಿಳಿವಳಿಕೆಯ ಮೂಲಕ ಇಲ್ಲವೆ ಎರಡನೆ ಉದಾಹರಣೆ ಹೊಳೆಯದ ಪರಿಣಾಮವಾಗಿ ಆ ಭೋಗಾನಂದವು ಆತ್ಮಾ-ನಂದಕ್ಕೆ ಒಮ್ಮೊಮ್ಮೆ ಹೋಲಿಸಲಾಗುವದು. ಅಂಥ ಭೋಗಾನಂದವೇ ಕೊನೆಯ ಅಭೀಪ್ಸೆಯ ರೂಪವನ್ನು ತಾಳಬಲ್ಲದು.

ಈ ಬಗೆಯ ಅಭೀಪ್ಸೆಯ ವಿವಿಧ ಪರ್ಯಾಯಗಳನ್ನು ಸಾಧಿಸಲು ಮಾನವನು ಅನೇಕಾನೇಕ ಮಾರ್ಗಗಳನ್ನು ಅನುಸರಿಸುವನು. ಅವುಗಳಲ್ಲಿ ಮದ್ಯಮಾದಕಗಳ ಉಪಯೋಗವೂ ಒಂದು. ಆದರೆ ಇವೆಲ್ಲವುಗಳು ಒಂದು ಕಡೆ, ಆತ್ಮಾ-ನಂದ, ನಿರಾಲಂಬ ಸಹಜಾನಂದ ಇನ್ನೊಂದು ಕಡೆ, ಈ ದೃಷ್ಟಿಯಿಂದ ಈ ವಿಷಯವನ್ನು ಪರಿಶೀಲಿಸುವದು ಅವಶ್ಯ.

ಈ ಲೋಕದ ಪ್ರಾಣಿಮಾತ್ರಗಳಲ್ಲಿ ಮಾನವನು ಎಲ್ಲಕ್ಕೂ ಉಚ್ಚಸ್ಥಾನದಲ್ಲಿ ವಿರಾಜಮಾನನಾಗಿರುವನು ಎಂಬುದು ಒಂದು ರೀತಿ ಸ್ವತಃ ಸಿದ್ಧ. ನಿತ್ಯದ ಜೀವನಯಾತ್ರೆ, ಆಗುಹೋಗುಗಳು ಮುಂತಾದವುಗಳಲ್ಲಿ ಬೇಕಾದಷ್ಟು ವೈಷಿಧ್ಯವಿದ್ದರೂ ಒಬ್ಬ ಉತ್ಕ್ರಮಣಶೀಲ ಪ್ರಾಣಿ (ಇವ್ಹಾಲ್ವಿಂಗ್) ಎಂಬ ದೃಷ್ಟಿಯಿಂದ ಮಾನವನ ಒಳಂತರದ ಅಭೀಪ್ಸೆ ಯಾವುದು? ಜ್ಞಾತಾಜ್ಞಾತನಾಗಿ, ತಿಳಿದು ತಿಳಿಯದೆ, ಯಾವುದಕ್ಕೆ ನಾವು ಆತ್ಯಂತಿಕ ಸುಖ ಎನ್ನಬಲ್ಲೆವೊ ಅದನ್ನು ಮಾನವನು ಅರಸುತಿರುವನು ಎನ್ನಲು ಅಡ್ಡಿಯಿಲ್ಲ. ಆ ಸುಖದ ಸ್ವರೂಪದ ಬಗ್ಗೆ ಹಾಗೂ ಅದರ ಪರ್ಯಾಯಗಳ ಬಗ್ಗೆ ವಿಚಾರಿಸಿದ್ದಾಗಿದೆ. ಆ ಎಲ್ಲ ಸುಖ ಪರ್ಯಾಯಗಳು ಒಂದು ಕಡೆ ಹಾಗೂ ಯಾವುದಕ್ಕೆ ಆತ್ಮಾನಂದ, ಸಹಜಾನಂದ, ನಿರಾಲಂಬ ಆನಂದ ಎನ್ನಬಹುದೋ ಆ ಆನಂದ ಇನ್ನೊಂದು ಕಡೆ, ಈ ದೃಷ್ಟಿಯಿಂದ ವಿಚಾರಮಾಡುವದು ಈ ಲೇಖದ ಉದ್ದೇಶವಿರುವದು.

ಈ ವಿಚಾರವನ್ನು ಕೈಕೊಳ್ಳುವಾಗ ಯಾವದೇ ಧರ್ಮ, ತತ್ವಜ್ಞಾನ, ಆಸ್ತಿಕ್ಯ-ನಾಸ್ತಿಕ್ಯಭಾವ, ಆತ್ಮ-ಅನಾತ್ಮ ಇವುಗಳ ಪಕ್ಷಪಾತವನ್ನು ಬಿಟ್ಟು ಕೇವಲ ಮಾನವನ ಅನುಭವದ ದೃಷ್ಟಿಯಿಂದ ವಿಚಾರಿಸಬಹುದೇ ಎಂಬ ವಿಚಾರ ಹೊಳೆಯಿತು. ಪ್ರಾರಂಭದಲ್ಲಿ ಸೂಚಿಸಿದ ಸುಖ ಪರ್ಯಾಯಗಳನ್ನು ಪರಿಶೀಲಿಸಿದರೆ, ಒಂದು ಮಾತು ಸ್ಪಷ್ಟವಾಗುವದು. ಅದೇನೆಂದರೆ, ಚೈತನ್ಯವು ಪುನಃ ಜಡತ್ವವನ್ನು ಹೊಂದುವುದಾಗಲಿ, ಮಾತೃಗರ್ಭದ ಸಂರಕ್ಷಣವನ್ನು ಪಡೆದು ಸುಖಿಸುವುದಾಗಲಿ, ಅದು ಒಂದು ಅಭೀಪ್ಸೆ ಎನಿಸಿದರೂ, ಅದರಲ್ಲಿ ಒಂದು ದೊಡ್ಡ ಮುಖ್ಯವಾದ ದೋಷವು ಕಂಡುಬರುವದು. ಅದೇನಂದರೆ, ಜಡತ್ವದಲ್ಲಿ ಅಥವಾ ಗರ್ಭಾವಸ್ಥೆಯಲ್ಲಿ ಯಾವ ಎಚ್ಚರವೂ (ಅವೆಯರ್‌ನೆಸ್) ಇರಲರಿಯದು. ಆದುದರಿಂದ ಆ ಎರಡು ಅಭೀಪ್ಸೆಗಳನ್ನು ಬಿಟ್ಟೆ ನಾವು ಇತರ ಸುಖ ಪರ್ಯಾಯಗಳನ್ನು ನಿರಾಲಂಬ ಆನಂದದೊಡನೆ ಹೋಲಿಸಬೇಕಾಗುವದು.

ಜಡತ್ವ ಹಾಗೂ ಗರ್ಭಾವಸ್ಥೆ ಇವೆರಡನ್ನು ಳಿದು ಇತರ ಸುಖಪರ್ಯಾಯಗಳನ್ನು ಆಲೋಚಿಸಿದರೆ, ಅವುಗಳಲ್ಲಿಯ ಮುಖ್ಯ ದೋಷವೆಂದರೆ ಪರಾವಲಂಬನೆ. ಪರವಶ ಅಥವಾ ಪರಾಧೀನ ಇದ್ದುದೆಲ್ಲವೂ ದುಃಖಮೂಲವಿರುವದು. 'ಯದ್ಯತ್ ಪರವಶಂ ದುಃಖಮ್ ಯದ್ಯದಾತ್ಮಾವಶಂ ಸುಖಮಂ' ಎಂಬುದು ಪದೇಪದೇ ಅನುಭವಕ್ಕೆ ಬರುವ ಮಾತು.

ಆ ದೃಷ್ಟಿಯಿಂದ, ಆಮರಣ ವಿಷಯೋಪಭೋಗ, ಮರಣಪಶ್ಚಾತ್ ಸ್ವರ್ಗೀಯ ವಿಷಯ ಸುಖ, ಸಂಭೋಗಸುಖ ಇವೆಲ್ಲವೂ ಪರವಶ ಅಥವಾ ಪರಾಧೀನ ಸುಖಗಳು. ಅದೇ ರೀತಿ ಮದ್ಯಮಾದಕ ಪದಾರ್ಥಗಳ ಮೂಲಕ ಆಗುವ ಸುಖವು ಕೂಡ ಪರಾಧೀನವೇ ಸೈ. ಆತ್ಮಾನಂದ, ಸಹಜಾನಂದ, ನಿಜಾನಂದ, ನಿರಾಲಂಬ ಆನಂದ, ಅದೇ ರೀತಿ ಯಾವದೇ ಬಾಹ್ಯ ಪದಾರ್ಥ, ವ್ಯಕ್ತಿ, ಕಲ್ಪಿತ-ಅಕಲ್ಪಿತ ವಿಭೂತಿ ವಿಶೇಷ ಇವಾವುಗಳ ಮೇಲೆಯೂ ಅವಲಂಬನವಿಲ್ಲದೆ ದೊರಕುವ ಆನಂದವೆ ಆತ್ಮವಶ ಆನಂದ ಎನಿಸುವದು. ಇನ್ನು ಈ ಆತ್ಮಾವಶ ಆನಂದವು ಯಾವದೇ ಅಭೀಪ್ಸೆಯನ್ನು ಇಲ್ಲವೆ ಆಶೆ-ಇಚ್ಛೆ-ಕಾಮನೆಗಳನ್ನು ಅವಲಂಬಿಸಿರಕೂಡದು. ಯಾಕಂದರೆ ಆಯಾ ಆನಂದವು ಆಯಾ ಅಭೀಪ್ಸೆಯನ್ನು ಇಲ್ಲವೆ ಕಾಮನೆಯನ್ನು ಅವಲಂಬಿಸಿದಂತಾಗುವದು ಹಾಗೂ ಆ ಮಟ್ಟಿಗೆ ಪರವಶ ಎನಿಸುವದು. ಆದುದರಿಂದಲೆ ಆತ್ಮಾನಂದವನ್ನು, ಸಹಜಾನಂದವನ್ನು, ನಿರಾಲಂಬ ಆನಂದವನ್ನು ಬಣ್ಣಿಸುವಾಗ ಆಯಾವ್ಯಕ್ತಿಯು ಅ-'ಕಾಮಹತ' ಯಾವದೇ ಕಾಮನೆಯಿಂದ ಕೂಡಿದವನಿರಕೂಡದು, ಎಂದು ಹೇಳಲಾಗಿದೆ. ಒಂದು ಸುಂದರ ಸರೋವರದಲ್ಲಿ ಕಮಲವು ಅರಳುವುದಾಗಲಿ, ಮಕ್ಕಳು ಆನಂದದಿಂದ ಆಡುತಿರುವುದಾಗಿಲಿ, ವಸಂತದಲ್ಲಿ ಕೋಗಿಲೆ ಹಾಡುವುದಾಗಲಿ, ಇವೆಲ್ಲವುಗಳನ್ನು ಸಹಜಾನಂದಕ್ಕೆ ಹೋಲಿಸಬಹುದು. ಅದು ಸ್ವಭಾವ, ಸ್ವಧರ್ಮ. ಅದೇ ರೀತಿ ಆನಂದ ಎನ್ನುವುದು ಆತ್ಮನ ಸ್ವಭಾವ, ಸ್ವಧರ್ಮ; ಆ ಸ್ವಭಾವ, ಆ ಸ್ವಧರ್ಮ ಬೇರೆ ಅಲ್ಲ. ಆತ್ಮ ಬೇರೆ ಅಲ್ಲ.

ಈ ಸುಖಪರ್ಯಾಯಗಳ ವಿವಿಧ ಪರವಶ ಆನಂದಗಳ ಹಾಗೂ ಸ್ವವಶ- ಸ್ವಾಧೀನ ಆತ್ಮಾನಂದದ ತಾರತಮ್ಯವನ್ನು ಈ ಕೆಳಗಿನಂತೆ ಮಂಡಿಸಬಹುದು:—

| ಪರವಶ ಆನಂದ | ಆತ್ಮವಶ ನಿರಾಲಂಬ ಆನಂದ |
|---|---|
| ೧ ಆಯಾ ವಸ್ತು ದೊರಕದೇ ಹೋದರೆ ಆನಂದಕ್ಕೆ ಬಾಧೆ. ದೊರೆತ ಆಯಾವಸ್ತು ಕಳೆದುಹೋದರೆ, ಸಾಕಷ್ಟು ಇಲ್ಲದಿದ್ದರೆ, ಅದರಲ್ಲಿ ದೋಷವಿದ್ದರೆ ದುಃಖಕ್ಕೆ ಕಾರಣ. | ಆತ್ಮನಿಂದ, ಆತ್ಮನಿಂದಲೆ ಆತ್ಮನಲ್ಲಿಯೆ ದೊರಕುವದಾದುದರಿಂದ ಪರವಶತೆಗೆ ಎಡೆಯಿಲ್ಲ. 'ಆತ್ಮನ್ಯೇವಾತ್ಮನಾ ತುಷ್ಟಃ' ಅಥವಾ ಆತ್ಮಕ್ರೀಡಃ ಆತ್ಮರತಿಃ ಎನ್ನಬಹುದು. |
| ೨ ವ್ಯಕ್ತಿಗತ ಅಥವಾ ವ್ಯಕ್ತಿಮೂಲಕ ಆನಂದದ ಪರಿಸ್ಥಿತಿಯೂ ಅದೇ ರೀತಿ. | |
| ೩ ಕ್ಷಣಿಕ, ಭಂಗುರ; ಆಯಾ ಪದಾರ್ಥ, ಆಯಾ ವ್ಯಕ್ತಿ ದೊರಕುವವರೆಗೆ ಮಾತ್ರ | ಆತ್ಮವು ಆತ್ಮನಿಂದ ಅಗಲಲಾರದು. ಆದುದರಿಂದ ಅದು ಸುದೃವ ಹಾಗೂ ನಿತ್ಯ ಆನಂದವನ್ನು ಕೊಡಬಲ್ಲದು. |
| ೪ ಆಯಾ ಪ್ರಯತ್ನಗಳು ಆಯಾ ವ್ಯಕ್ತಿಗೆ ಯಾವ ಹೆಚ್ಚಿನ ಶಕ್ತಿಸಾಮರ್ಥ್ಯವನ್ನು ಕೊಡಲಾರವು. | ಆತ್ಮಾನಂದವನ್ನು ಸಾಧಿಸುವಾಗ ಮಾಡುವ ಪ್ರಯತ್ನಗಳಿಂದ ಆಯಾ ವ್ಯಕ್ತಿಯ ಶಕ್ತಿ ಸಾಮರ್ಥ್ಯಗಳು ಬೆಳೆಯುವವು. |
| ೫ ಆಯಾ ಇಂದ್ರಿಯ, ಆಯಾ ವಿಷಯ ಇವುಗಳಿಗೆ ಆಯಾ ಸುಖ ಮರ್ಯಾದಿತ. | ಆತ್ಮಾನಂದ ಸರ್ವಸ್ವ ವ್ಯಕ್ತಿತ್ವವನ್ನು ವ್ಯಾಪಿಸುವದು. |

ಈ ಹಾಗೂ ಇನ್ನು ಹಲವಾರು ಕಾರಣಗಳ ಮೂಲಕ ಸ್ವವಶ- ಸ್ವಾಧೀನ ಹಾಗೂ ಸಹಜ ಸ್ವಭಾವವಾದ ಆತ್ಮಾನಂದವನ್ನೇ ಕೈವಶ ಮಾಡಿಕೊಳ್ಳಲು ಹಂಬಲಿಸಿ ಅದನ್ನು ಪಡೆಯುವದು ಮಹಾನ್ ಪುರುಷಾರ್ಥವೆನಿಸುವದು. ✿

# ಧೂಮಪಾನ-ಒಂದು ಶಾಪ

ಡಾ. ಎ. ಡಿ. ದೇಶಪಾಂಡೆ

ಧೂಮಪಾನದ ದುಷ್ಪರಿಣಾಮಗಳೆಂದ ಕೂಡಲೇ ಜನಸಾಮಾನ್ಯನ ಕಣ್ಣೆದುರಿಗೆ ಪುಪ್ಪುಸದ ಕ್ಯಾನ್ಸರ್ ಕಾಣಿಸಿಕೊಳ್ಳುತ್ತದೆ. ಆದರೆ ಧೂಮಪಾನದಿಂದುಂಟಾಗುವ ಇತರ ಅನೇಕ ಅಪಾಯಗಳು ಆತನ ಗಮನ ಸೆಳೆಯದೇ ಇರುವದು ದುರದೃಷ್ಟವೇ ಸರಿ.

ಗಂಟಲಿನ ಉರಿತ, ಧ್ವನಿಪೆಟ್ಟಿಗೆಯ ಉರಿತ, ಅರುಚಿ. ಎದೆ ಬಡಿದುಕೊಳ್ಳುವದು, ನಿದ್ರಾಹೀನತೆ, ದಮ್ಮು ಮೊದಲಾದವುಗಳು ಪ್ರಾರಂಭದಲ್ಲಿ ಕಾಣಿಸಿಕೊಳ್ಳುವವು, ಧೂಮ್ರ ಪಾನಿಗಳಲ್ಲಿ ಹೃದಯಾಘಾತಗಳು ಹೆಚ್ಚು. ಜಠರದ ಹುಣ್ಣುಗಳು ಧೂಮಪಾನಿಗಳಲ್ಲಿ ಬೇಗನೇ ಗುಣವಾಗಲಾರವು. ಕೆಲವರಲ್ಲಿ ದೃಷ್ಟಿ ಮಾಂದ್ಯವಾಗಿ ಕೆಲವೊಮ್ಮೆ ಸಂಪೂರ್ಣವಾಗಿ ಕುರುಡಾಗಬಹುದು. ತಂಬಾಕಿನಲ್ಲಿರುವ ನಿಕೊಟಿನ್ ಕಣ್ಣಾಲದ ಜೀವಕೋಶಗಳ ಮೇಲೆ ನೇರ ಪರಿಣಾಮ ಮಾಡುತ್ತಿರಬಹುದೆಂದು ಭಾವಿಸಲಾಗಿದೆ. ಅದು ರಕ್ತದ ಮೂಲಕ ಈ ಜೀವಕೋಶಗಳಿಗೆ ತಲುಪುತ್ತದೆ. ಕಾಲ್ಬೆರಳು, ಪಾದ ಕೊಳೆತು ಹೋಗಬಹುದಾದ ಬರ್ಜರನ ರೋಗ ಹಾಗು ತುಟಿಯ ಕ್ಯಾನ್ಸರಗಳು ಧೂಮಪಾನಕ್ಕೆ ಸಂಬಂಧಿಸಿವೆ. ಲಂಡನ್ನಿನ ರಾಯಲ್ ಕಾಲೇಜ್ ಆಫ್ ಫಿಜೀಸಿಯನ್ಸದ ೧೯೭೧ ರ ವರದಿಯಲ್ಲಿ ಧೂಮಪಾನದೊಂದಿಗೆ ನಿಕಟವಾಗಿ ಸಂಬಂಧಿಸಿದ ರೋಗಗಳ ಯಾದಿಯನ್ನು ಸಾರಾಂಶದಲ್ಲಿ ಕೊಡಲಾಗಿದ್ದು ಅದರ ಪ್ರಕಾರ ಧೂಮಪಾನಿಗಳಲ್ಲಿ ಪುಪ್ಪುಸ, ತುಟಿ, ಬಾಯಿ, ಧ್ವನಿ ಪೆಟ್ಟಿಗೆ, ಗಂಟಲು ಹಾಗು ಅನ್ನ-ನಾಳಗಳ ಕ್ಯಾನ್ಸರ್, ಬೇರೂರಿದ ಎದೆಗೆಮ್ಮು, ಹೃದಯದ ಕಿರೀಟ ನಾಳಗಳ ಮುಚ್ಚುವಿಕೆ, ಹೃದಯ ವೇದನೆ,

ಎಂಫಿಸೀಮಾ, ಮೂತ್ರ ಕೋಶದ ಕ್ಯಾನ್ಸರ್ ಹಾಗು ಕ್ಷಯ ರೋಗಗಳು ಇತರರಿಗಿಂತ ಖಂಡಿತ ಹೆಚ್ಚಾಗಿ ಕಂಡು ಬರುತ್ತವೆ.

ಧೂಮಪಾನಿಗಳಲ್ಲಿ ತುಟಿಯ ಕ್ಯಾನ್ಸರ್ ಹೆಚ್ಚಿರುವದಾದರೂ ಇದು ಸೇದುಗೊಳವೆಯನ್ನು ಪಯೋಗಿಸುವವರಲ್ಲಿ ಹೆಚ್ಚಾಗಿ ಕಂಡು ಬರುವದು. ತುಟಿಯ ಜೀವಕೋಶಗಳನ್ನು ಸೇದುಗೊಳವೆಯು ಧಕ್ಕೆಗೊಳಿಸಿ ತುಟಿಯ ಮೇಲೆ ಹುಣ್ಣಾಗಲು ಕಾರಣವಾಗಬಹುದು. ಹುಣ್ಣಿನಿಂದ ರಕ್ತ ಸ್ರವಿಸಬಹುದು. ಇಂಥ ಜೀವಕೋಶಗಳಿಗೆ ಮೇಲಿಂದ ಮೇಲೆ ಬಹುಕಾಲ ಉಷ್ಣ ಹಾಗೂ ಸೇದುಗೊಳವೆಯಿಂದ ಧಕ್ಕೆಯಾಗುವದರಿಂದ ಅಜಾಗರೂಕ ಧೂಮಪಾನಿಯಲ್ಲಿ ಹುಣ್ಣು ಮುಂದೆ ಕಾನ್ಸರ್ ಆಗಿ ಪರಿವರ್ತಿತಗೊಳ್ಳಬಹುದಾಗಿದೆ.

ಬಾಯಿಯಲ್ಲಿ ಕಾನ್ಸರ್ ಉತ್ಪತ್ತಿಯಾಗಲು ಅನೇಕ ಕಾರಣಗಳಿದ್ದು ಅದರಲ್ಲಿ ಧೂಮಪಾನವೂ ಒಂದು. ನಾಲಗೆಯ ಕ್ಯಾನ್ಸರಿಗೆ ಧೂಮಪಾನವೂ ಒಂದು ಕಾರಣವಾಗಿದೆ. ಮದ್ಯ ಸೇವನೆ ಹಾಗು ಧೂಮಪಾನಗಳಿಂದ ಅನ್ನನಾಳದ ಕ್ಯಾನ್ಸರ್ ಪ್ರಮಾಣವು ಹೆಚ್ಚುವದು. ಹೆಚ್ಚಿಗೆ ಮದ್ಯ ಸೇವಿಸುವವರು ಅತಿಯಾಗಿ ಧೂಮಪಾನ ಮಾಡುವದು ಕಂಡು ಬಂದಿದೆ. ಮದ್ಯವು ಜೀವಕೋಶಗಳ ಚಯಾಪಚಯ ಕ್ರಿಯೆಯ ಮೇಲೆ ಪರಿಣಾಮ ಮಾಡುವದರಿಂದ ಆ ಜೀವ ಕೋಶಗಳು ಕ್ಯಾನ್ಸರರೋಗೋತ್ಪಾದಕಗಳಿಗೆ ಈಡಾಗುವವೆಂದು ಭಾವಿಸಲಾಗಿದೆ. ಬ್ರಿಟಿಶ್ ವೈದ್ಯರು ಹಾಗೂ ಅಮೇರಿಕದ ಯುದ್ಧ ಅನುಭವಿಗಳಲ್ಲಿ ೩೪ ರಿಂದ ೮೪ ವರ್ಷ ವಯಸ್ಸಿನವರಲ್ಲಿ ನಡೆಸಿದ ಎರಡು ಬೇರೆ ಬೇರೆ ಸಮೀಕ್ಷೆಗಳ ರೀತ್ಯಾ ಧೂಮಪಾನಿಗಳಲ್ಲಿ ಅನ್ನನಾಳದ ಕ್ಯಾನ್ಸರ್ ಇತರರಿಗಿಂತ ೩ ರಿಂದ ೫ ಪಟ್ಟು ಹೆಚ್ಚಿರುವದು.

"ನಾನು ಇಪ್ಪತ್ತೈದು ವರ್ಷಗಳಿಂದ ಧೂಮಪಾನ ಮಾಡಿದ್ದರೂ ನನಗಿನ್ನೂ ಕ್ಯಾನ್ಸರ್ ಆಗಿಲ್ಲವಲ್ಲ?" "ನಮ್ಮಜ್ಜ ದಿನವಿಡೀ ಬೀಡಿಯನ್ನೇ ಸೇದುತ್ತ ಕುಳಿತಿರುತ್ತಿದ್ದ ಆದರೂ ಆತ ಕ್ಯಾನ್ಸರಿನಿಂದ ಸಾಯಲಿಲ್ಲವಲ್ಲ?" "ಧೂಮಪಾನಿಗಳೆಲ್ಲರಿಗೂ ಕ್ಯಾನ್ಸರ್ ಏಕೆ ಆಗದು?" ಎಂಬ ಅನುಮಾನದ ಅನೇಕ ಪ್ರಶ್ನೆಗಳಿಗೆ ಸಮಾಧಾನಕರ ಹಾಗೂ ಮನಗಾಣುವಂಥ ಉತ್ತರ ಕೊಡುವದು ಕಷ್ಟವೇ ಸರಿ. ಧೂಮಪಾನದಿಂದ ಪುಪ್ಪುಸದ ಕ್ಯಾನ್ಸರ್ ಉಂಟಾಗಬಹುದು ಎಂದು ತೋರಿಸುವಲ್ಲಿ ನಾವು ಮೂರು ಬಗೆಯ ಪುರಾವೆಗಳನ್ನು ಪಡೆಯಬಹುದಾಗಿದೆ. ಮೊದಲನೆಯದು ರೋಗದ ಬಗ್ಗೆ ಅಂಕಿ ಸಂಖ್ಯೆಗಳು, ಎರಡನೆಯದು ಪ್ರಾಯೋಗಿಕ ಸಾಕ್ಷಿ, ಮೂರನೆಯದು ರೋಗ ಶಾಸ್ತ್ರದ ಆಧಾರ. ಅಮೇರಿಕೆಯಲ್ಲಿ ವಿಂಡರ್ ಹಾಗೂ ಗ್ರಹಾಂ ಅವರು ೬೦೫ ಪುಪ್ಪುಸ ಕಾನ್ಸರ್ ರೋಗಿಗಳನ್ನು ಪರೀಕ್ಷಿಸಿದಾಗ ೫೧% ರೋಗಿಗಳು ದಿನಂಪ್ರತಿ ೨೦ ಕ್ಕಿಂತ ಹೆಚ್ಚು ಸಿಗರೇಟುಗಳನ್ನು ಅನೇಕ ವರ್ಷಗಳವರೆಗೆ ಸೇದಿದ್ದರು. ಕೇವಲ ೧.೩% ರೋಗಿಗಳು ಮಾತ್ರ ಧೂಮಪಾನ ಮಾಡಿರಲಿಲ್ಲ. ತಂಬಾಕು ಸೇವನೆಯಿಂದಷ್ಟೇ ಪುಪ್ಪುಸದ ಕಾನ್ಸರ್ ಆಗುವದೆಂಬುದನ್ನು ಇದು ಖಚಿತಪಡಿಸಿಲ್ಲವಾದರೂ ಅಂಕಿ ಅಂಶಗಳ ಆಧಾರದಿಂದ ಹೇಳುವದಾದರೆ ಧೂಮಪಾನಿಗಳಲ್ಲಿ ಕ್ಯಾನ್ಸರಿನಿಂದ ಸಾಯುವವರ ಸಂಖ್ಯೆ ಇತರರಿಗಿಂತ ಖಂಡಿತವಾಗಿಯೂ ಬಹಳ ಹೆಚ್ಚಿಗೆ ಇದೆಯಲ್ಲದೆ ಅವರು ಸೇದುವ ಸಿಗರೇಟುಗಳ ಸಂಖ್ಯೆಗೆ ಅನುಲೋಮಾನುಪಾತದಲ್ಲಿದೆ. ಕಳೆದ ಐವತ್ತು ವರ್ಷಗಳಲ್ಲಿ ಸ್ತ್ರೀಯರಲ್ಲಿ ಧೂಮಪಾನ ಹೆಚ್ಚಿದೆಯಾದರೂ ಪುಪ್ಪುಸದ ಕ್ಯಾನ್ಸರ್ ಕೇವಲ ಗಂಡಸರಲ್ಲಿ ಹೆಚ್ಚಿಗಿದೆ.

ಶ್ವಾಸನಾಳಗಳ ಶ್ಲೇಷ್ಮ ಪೊರೆಯ ಜೀವಕೋಶಗಳನ್ನು ಸಿಗರೇಟು ಹೇಗೆ ಹಾನಿಗೊಳಗಾಗಿಸುತ್ತದೆ ಅಥವಾ ಧೂಮಪಾನಿಗಳಲ್ಲಿ ೯೦% ವ್ಯಕ್ತಿಗಳು ಇದರ ಕ್ಯಾನ್ಸರೋತ್ಪಾದಕ ಕೆಡುಕಿನಿಂದ ಹೇಗೆ ಪಾರಾಗುತ್ತಾರೆ ಎಂಬುದು ಇನ್ನೂ ತಿಳಿದಿಲ್ಲ. ಸಿಗರೇಟಿನಲ್ಲಿರುವ ನಿಕೋಟಿನ್ ಹಾಗೂ ಟಾರ್‌ಗಳಿಂದ ಕ್ಯಾನ್ಸರ್ ಉಂಟಾಗುವದೆನ್ನಲು ಆಧಾರಗಳು ಇನ್ನೂ ಪ್ರಬಲವಾಗಿಲ್ಲ. ಆದಾಗ್ಯೂ ಸಿಗರೇಟು ಸೇವನೆ

ಹಾಗೂ ಕ್ಯಾನ್ಸರಿನ ನಿಕಟ ಸಂಬಂಧಗಳನ್ನು ಅಲ್ಲಗಳೆಯುವಂತಿಲ್ಲ. ಉದಾಹರಣೆಗೆ ಬ್ರಿಟನ್ನಿನಲ್ಲಿ ವೈದ್ಯರು ತಾವು ಸೇದುವ ಸಿಗರೇಟುಗಳ ಸಂಖ್ಯೆಯನ್ನು ಕಡಿಮೆ ಮಾಡಿದರಲ್ಲದೆ ಕೆಲವರು ಸಂಪೂರ್ಣವಾಗಿ ತ್ಯಜಿಸಿದರು. ಆದರೆ ಅದೇ ದೇಶದಲ್ಲಿನ ಸಾಮಾನ್ಯ ಜನರು ಧೂಮಪಾನದಲ್ಲಿ ಇಳಿಕೆಯನ್ನೇನೂ ತೋರಲಿಲ್ಲ. ಇದರ ಪರಿಣಾಮವಾಗಿ ಪುಪ್ಪುಸ ಕ್ಯಾನ್ಸರಿನಿಂದ ಸಾವಿನ ಪ್ರಮಾಣ ವೈದ್ಯರಲ್ಲಿ ಇಳಿಕೆಯನ್ನು ತೋರಿಸಿದೆಯಾದರೆ ಉಳಿದ ಜನರಲ್ಲಿ ಈ ರೋಗದಿಂದ ಸಾವಿನ ಪ್ರಮಾಣ ಹೆಚ್ಚುತ್ತಲೇ ನಡೆದಿದೆ.

ಅಮೇರಿಕೆಯಲ್ಲಿ ೧೯೩೦ ರಲ್ಲಿ ೩೦೦೦ ಕ್ಕಿಂತ ಕಡಿಮೆ ಜನರು ಪುಪ್ಪುಸ ಕ್ಯಾನ್ಸರಿನಿಂದ ಸತ್ತರು. ೧೯೬೦ ರಲ್ಲಿ ಇದು ಹತ್ತುಪಟ್ಟು ಜಾಸ್ತಿ ಆಯಿತು. ಇಂಗ್ಲೆಂಡ ಹಾಗು ವೇಲ್ಸ ಗಳಲ್ಲಿ ೧೯೧೬ ರಿಂದ ೧೯೨೦ರ ಅವಧಿಯಲ್ಲಿ ಇದರಿಂದ ಕೇವಲ ೨೦೦ ಜನ ಸತ್ತರೆ ೧೯೫೬-೧೯೫೯ ರಲ್ಲಿ ೧೦,೦೦೦ ಜನರು ಸತ್ತರು. ಇದಕ್ಕೆ ಧೂಮಪಾನವೊಂದೇ ಕಾರಣವಾಗಿರಲಿಲ್ಲ. ವಾತಾವರಣದ ಮಾಲಿನ್ಯ. ಆಹಾರದಲ್ಲಿನ ಬದಲಾವಣೆ ಹಾಗು ರೋಗ ಗುರುತಿಸುವ ನವೀನ ವಿಧಾನಗಳು ಇತ್ಯಾದಿ. ಆದರೆ ಪುಪ್ಪುಸ ಕ್ಯಾನ್ಸರಿನಿಂದ ಸತ್ತ ರೋಗಿಗಳಲ್ಲಿ ಬಹಳ ಜನ ಧೂಮಪಾಸಿಗಳೆಂಬುದನ್ನು ಮರೆಯುವಂತಿಲ್ಲ. ಅಮೇರಿಕೆಯ ಸರ್ಜನ್ ಜನರಲ್ಲರ ವರದಿಯ ಪ್ರಕಾರ (೧೯೬೭) ದಿನಕ್ಕೆ ಇಪ್ಪತ್ತಕ್ಕಿಂತ ಕಡಿಮೆ ಸಿಗರೇಟು ಸೇದುತ್ತಿದ್ದಂಥ ಗಂಡಸರು ಕೂಡ ಪುಪ್ಪುಸ ಕ್ಯಾನ್ಸರ್ ಪಡೆಯುವಲ್ಲಿ ಇತರರಿಗಿಂತ ಮೂವತ್ತು ಪಟ್ಟು ಹೆಚ್ಚಿಗೆ ಗಂಡಾಂತರದಲ್ಲಿದ್ದಾರೆ. ಧೂಮದಲ್ಲಿ ನೂರಾರು ಬಗೆಯ ರಾಸಾಯನಿಕ ಪದಾರ್ಥಗಳಿದ್ದು ಅವುಗಳೆಲ್ಲದರ ಕ್ಯಾನ್ಸರೋತ್ಪಾದಕ ಗುಣಧರ್ಮಗಳನ್ನು ಕಂಡುಹಿಡಿಯಲು ಸಾಧ್ಯವಿಲ್ಲವಾಗಿದೆ. ಅವು ತೀರ ಅತ್ಯಲ್ಪ ಪ್ರಮಾಣದಲ್ಲಿವೆ. ಆದರೆ ಬೆಂಜ್ ಪೈರೀನ್ ಎಂಬ ಪದಾರ್ಥ ಕ್ಯಾನ್ಸ-ರೋತ್ಪಾದಕವೆಂದು ಬಗೆಯಲಾಗಿದೆ. ತಂಬಾಕಿನ ಧೂಮ ಇಂಥ ಅನೇಕ ಪದಾರ್ಥಗಳನ್ನು ಹೊಂದಿರಲೂ ಸಾಧ್ಯವಿದೆ. ಅವು ಕಡಿಮೆ ಪ್ರಮಾಣದಲ್ಲಿದ್ದು ಕಡಿಮೆ ಶಕ್ತಿಶಾಲಿಗಳಾಗಿವೆ.

ಲಿಲಿಯನ್ ಫೀಲ್ಡ್ ಹಾಗು ಆತನ ಸಹೋದ್ಯೋಗಿಗಳು ಧೂಮಪಾನ ಹಾಗು ಮೂತ್ರ-ಕೋಶದ ನಡುವಿನ ಸಂಬಂಧವನ್ನು ಸುಮಾರು ಹದಿನೇಳು ವರ್ಷಗಳ ಹಿಂದೆಯೇ ತೋರಿಸಿಕೊಟ್ಟರು, ಅವರ ಈ ನಿರೀಕ್ಷಣೆಯು ಇತರರ ಅಧ್ಯಯನಗಳಿಂದ ದೃಢೀಕರಿಸಲ್ಪಟ್ಟಿದೆ. ಧೂಮಪಾನದಿಂದ ಮೂತ್ರಕೋಶದ ಕ್ಯಾನ್ಸರ್ ಉಂಟಾಗುವ ಬಗೆಗೆ ಇನ್ನೂ ಸರಿಯಾಗಿ ತಿಳಿದಿಲ್ಲ. ಪುಪ್ಪುಸದ ಕಾನ್ಸರ್ ಹಾಗು ಮೂತ್ರಕೋಶದ ಕ್ಯಾನ್ಸರಿನಿಂದ ಸಾಯುವವರ ನಡುವಣ ಸಂಬಂಧವನ್ನು ಡಾ. ಎ. ಜಿ. ಲಿಯಾ ತೋರಿಸಿದ್ದಾರೆ. ಈ ಎರಡೂ ಕ್ಯಾನ್ಸರಗಳಲ್ಲಿ ಕಂಡು ಬರುವ ಸಾಮಾನ್ಯ ಸಂಗತಿಯೆಂದರೆ ಧೂಮಪಾನ. ವಿಜ್ಞಾನಿಗಳು ಇಲಿಗಳ ಬಾಯಲ್ಲಿನ ಶ್ಲೇಷ್ಮಾವರಣಕ್ಕೆ ಸಿಗರೇಟಿನ ಧೂಮದ ಸಂಕ್ಷೇಪವನ್ನು ಹಚ್ಚಿ ಅವುಗಳ ಮೂತ್ರಕೋಶಗಳಲ್ಲಿ ಕಾನ್ಸರ್ ಗಡ್ಡೆಯನ್ನು ಉತ್ಪತ್ತಿ ಮಾಡಿ ತೋರಿಸಿಸಿದ್ದಾರೆ. ಟ್ರಿಪ್ಟೋಫೇನ್ ಎಂಬ ಅಮೈನೋ ಆಮ್ಲದ ಚಯಾಪಚಯ ಕ್ರಿಯೆಯ ಉಪಪದಾರ್ಥಗಳು ಸಿಗರೇಟು ಸೇದುವವರ ಮೂತ್ರದಲ್ಲಿ ಧೂಮಪಾನಿಗಳಲ್ಲದವರಿಗಿಂತ ಹೆಚ್ಚಿನ ಪ್ರಮಾಣದಲ್ಲಿರುವವು. ಧೂಮಪಾನಿಗಳು ಧೂಮಪಾನ ತ್ಯಜಿಸಿದಲ್ಲಿ ಈ ಉಪ-ಪದಾರ್ಥಗಳ ಪ್ರಮಾಣ ಕಡಿಮೆಯಾಯಿತಲ್ಲದೇ ಧೂಮಪಾನವನ್ನು ಹೊಸತಾಗಿ ಪ್ರಾರಂಭಿಸಿದವರಲ್ಲಿ ಇದರ ಪ್ರಮಾಣ ಹೆಚ್ಚಿತು.

ಸರ್ ಜಾರ್ಜ ಇ. ಗೋಡಬರ್ ಅವರ ಅಭಿಪ್ರಾಯದಂತೆ ಧೂಮಪಾನವು ವ್ಯಕ್ತಿಯು ತಂತಾನೆ ಮಾಡಿಕೊಂಡ ಹಾನಿ ಅಥವಾ ಬಾಧೆ. ಕಡಿಮೆ ಪ್ರಮಾಣದಲ್ಲಿಯಾದರೂ ಯಕೃತ್ತು. ಮೇದೋಜೀರಕ ಹಾಗೂ ಪಿತ್ತರಸನಾಳಗಳು ಮತ್ತು ಮೂತ್ರಕೋಶದ ಕ್ಯಾನ್ಸರಿಗೆ

ಧೂಮಪಾನವೇ ಕಾರಣ.

ಸದೃಢ ಹಾಗು ನಿರೋಗಿಯಾದ ವ್ಯಕ್ತಿಯಲ್ಲಿ ಫುಪ್ಪುಸದಲ್ಲಿನ ಸಣ್ಣ ಸಣ್ಣ ಶ್ವಾಸಕೋಶಗಳು ಉಸಿರಾಡುವಾಗ ಪ್ರಸರಣ ಹಾಗು ಆಕುಂಚನವನ್ನು ಹೊಂದುತ್ತವೆ. ಆದರೆ ಎಂಫಿಸೀಮಾ ಆದ ವ್ಯಕ್ತಿಗಳಲ್ಲಿ ಇದು ಇಲ್ಲದಂತಾಗಿ ಅವು ಚೆಂಡಿನಂತೆ. ಉಬ್ಬಿಕೊಂಡಿರುತ್ತವೆ. ಸಿಗರೇಟು ಸೇದುವವರಿಗೆಲ್ಲ ಎಂಫಿಸೀಮಾ ಆಗುತ್ತದೆಂದು ಹೇಳಲಾಗದು. ಆದಾಗ್ಯೂ ಅದು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಇರುತ್ತದೆ. ಹೆಚ್ಚು ಧೂಮಪಾನ ಮಾಡಿದವರಲ್ಲಿ ಇದರ ಪ್ರಮಾಣ ಹೆಚ್ಚು. ಬ್ರಾಂಕ್ಯಾಟಿಸ್ ಆಗುವದು ಮೊದಲು ಹಂತ. ನಂತರ ಫುಪ್ಪುಸದ ಸಣ್ಣ ಸಣ್ಣ ಶ್ವಾಸಕೋಶಗಳಿಗೆ ಧಕ್ಕೆಯುಂಟಾಗಿ ಈ ಕೋಶಗಳಿಂದ ಸಿಕ್ಕಿಕೊಂಡ ಗಾಳಿಯನ್ನು ಹೊರಗೆ ತಳ್ಳಲು ಸಾಧ್ಯವಾಗದೇ ಅವು ದುಂಡಗೆ ಉಬ್ಬಿ ಶಾಶ್ವತ ಧಕ್ಕೆಯುಂಟಾಗುವದು. ಆದರೆ ಕೆಲವೊಮ್ಮೆ ಧೂಮಪಾನ ತ್ಯಜಿಸಿದ ವ್ಯಕ್ತಿಗಳಲ್ಲಿ ಈ ಧಕ್ಕೆಯು ಕಾಲಾಂತರದಲ್ಲಿ ದುರಸ್ತಿಯಾಗಿ ಉಸಿರಾಡಿಸಲು ಸುಲಭವಾಗುವ ಸಾಧ್ಯತೆಯುಂಟು.

ಧೂಮಪಾನ ಹಾಗೂ ರಕ್ತನಾಳಗಳ ರೋಗಗಳ ನಡುವೆ ಇರಬಹುದಾದ ನಿಕಟ ಸಂಬಂಧವು ಇತ್ತೀಚೆಗೆ ಹೆಚ್ಚು ಹೆಚ್ಚಾಗಿ ದೃಢೀಕರಿಸಲ್ಪಡುತ್ತಿದೆ. ೧೯೬೦ರಲ್ಲಿ ಡಾ. ಜರ್ಗನ್ಸ ಹಾಗು ಅವನ ಸಹೋದ್ಯೋಗಿಗಳು ಮೇಯೋ ಕ್ಲಿನಿಕ್‌ನಲ್ಲಿ ಐದು ವರ್ಷಗಳಿಂದ ರಕ್ತನಾಳಗಳಿಗೆ ಸಂಬಂಧಿಸಿದ ರೋಗಗಳ ೫೨೦ ರೋಗಿಗಳ ತಪಾಸಣೆ ಮಾಡಿದರು. ಈ ರೋಗಿಗಳಲ್ಲಿ ಧೂಮಪಾನವನ್ನು ಕೆಲವು ರೋಗಿಗಳು ಸಂಪೂರ್ಣವಾಗಿ ತ್ಯಜಿಸಿದ್ದರಿಂದ ಅಂಥವರ ಕೈಗಳನ್ನು ಇಲ್ಲವೆ ಕಾಲುಗಳನ್ನು ಕತ್ತರಿಸುವುದನ್ನು ತಪ್ಪಿಸಲಾಯಿತು. ಧೂಮಪಾನವನ್ನು ಮುಂದುವರಿಸಿದವರಲ್ಲಿ ೧೦% ರಷ್ಟು ರೋಗಿಗಳಲ್ಲಿ ಗ್ಯಾಂಗ್ರೀನ್ ಸಲುವಾಗಿ ಕೈ ಅಥವಾ ಕಾಲುಗಳನ್ನು ಕತ್ತರಿಸಬೇಕಾಯಿತು. ಮೊದಲೇ ರಕ್ತನಾಳಗಳ ರೋಗವಿದ್ದಂಥವರು ಧೂಮಪಾನ ಪ್ರಾರಂಭಿಸಿದರೆ ಅಥವಾ ಮುಂದುವರೆಸಿದರೆ ರೋಗವು ಉಲ್ಬಣಗೊಳ್ಳುವದರಲ್ಲಿ ಸಂದೇಹವಿಲ್ಲ.

ಬರ್ಜರನ ರೋಗವು ದೇಹದಲ್ಲಿನ ರಕ್ತನಾಳಗಳೆಲ್ಲದರ ಮೇಲೆ ಪರಿಣಾಮ ಮಾಡಿದರೂ ಕಾಲುಗಳ ಅಪಧಮನಿಗಳು ಹೆಚ್ಚು ತೊಂದರೆಯನ್ನು ಅನುಭವಿಸುವವು. ಅಪಧಮನಿಗಳ ಒಳ ಆವರಣದಲ್ಲಿ ಉರಿತ ಉಂಟಾಗಿ ಕ್ರಮೇಣ ರಕ್ತ ಸಂಚಾರಕ್ಕೆ ಅಡ್ಡಿಯುಂಟಾಗುವದು. ಇದರಿಂದಾಗಿ ಆ ಅಪಧಮನಿಗಳು ರಕ್ತ ಪೂರೈಕೆ ಮಾಡುವ ಅಂಗಾಂಶಗಳಿಗೆ ರಕ್ತದ ಪೂರೈಕೆ, ಹಾಗೂ ಪೋಷಕ ಘಟಕಗಳ ಪೂರೈಕೆಯು ನಿಲ್ಲುವದರಿಂದ ಗ್ಯಾಂಗ್ರೀನ್ ಆಗಬಹುದು. ಸ್ವಲ್ಪ ಆಯಾಸದಿಂದಲೂ (ಉದಾ: ತಿರುಗಾಡುವದು) ಸಹಿಸಲಸಾಧ್ಯ ನೋವು ಕಾಣಬಹುದು. ಧೂಮಪಾನಿಗಳಲ್ಲಿ ಇದರ ಪ್ರಮಾಣ ಹೆಚ್ಚು. ಧೂಮಪಾನವನ್ನು ತ್ಯಜಿಸಿದ ಈ ರೋಗಿಗಳಲ್ಲಿ ಸುಧಾರಣೆ ಕಂಡು ಬರುವದು.

ಈ ಸಂಗತಿಗಳನ್ನವಲೋಕಿಸಿದಾಗ ಧೂಮಪಾನದ ಮೇಲೆಯೇ ತಪ್ಪನ್ನೆಲ್ಲ ಹೊರಿಸಲು ಸಾಧ್ಯವಿಲ್ಲವಾದರೂ ಅದರ ಪ್ರಮುಖ ಪಾತ್ರದ ಬಗೆಗೆ ಸಂಶಯವಿಲ್ಲ. ಧೂಮಪಾನ ಹಾಗು ಬರ್ಜರನ ರೋಗಗಳ ನಡುವೆ ಇರುವ ನಿಕಟ ಸಂಬಂಧವಲ್ಲದೆ ರಕ್ತನಾಳಗಳ ಇತರ—ಮುಖ್ಯವಾಗಿ ರಕ್ತನಾಳಗಳ ಗಟ್ಟಿ ನಾಳ ಕ್ರಿಯೆಯ ಮೇಲೆಯೂ ಧೂಮಪಾನವು ತನ್ನ ಪರಿಣಾಮ ಬೀರುವದೆಂದು ಬಗೆಯಲಾಗಿದೆ. ರಕ್ತನಾಳಗಳ ಕ್ಲಿನಿಕ್‌ಗಳಲ್ಲಿ ೯೫% ರೋಗಿಗಳು ಧೂಮಪಾನಿಗಳಾಗಿರುತ್ತಾರೆಂದು ಅಂಕಿ ಅಂಶಗಳಿಂದ ಕಂಡು ಬಂದಿದ್ದು ಸಾಮಾನ್ಯ ಜನತೆಯಲ್ಲಿ ಧೂಮಪಾನಿಗಳ ಪ್ರತಿಶತ ಪ್ರಮಾಣ ಇದೇ ರೀತಿಯಲ್ಲಿಲ್ಲ.

ಡಾ. ಸಾಕೆಟ್ ಹಾಗು ಅವರ ಸಹೋದ್ಯೋಗಿಗಳು ಕ್ಯಾನ್ಸರಿನಿಂದ ಸತ್ತಂತಹ ಹಾಗು ಮಹಾ ಅಪಧಮನಿಯಲ್ಲಿ ಗಟ್ಟಿನಾಳ ಕ್ರಿಯೆಗೊಳಗಾದ ೧೦೯ ರೋಗಿಗಳ ಶವ ಪರೀಕ್ಷೆ ನಡೆಸಿದರು. ಸತ್ತಂಥ ಈ ರೋಗಿಗಳು

ಜೀವಂತವಿದ್ದಾಗ ಅವರ ಧೂಮಪಾನದ ಬಗೆಗೆ ವಿವರಗಳನ್ನು ಪಡೆಯಲಾಗಿತ್ತು. ಮಹಾ ಅಪಧಮನಿಯ ಗಟ್ಟಿ ನಾಳ ಕ್ರಿಯೆಯು ಧೂಮಪಾನಿಗಳಲ್ಲಿ ಹೆಚ್ಚಿಗೆ ಕಂಡು ಬಂದಿದ್ದು ಅದರ ತೀವ್ರತೆಯೂ ಹೆಚ್ಚು ಧೂಮಪಾನ ಮಾಡಿದಂತೆ ಹೆಚ್ಚಾಗಿದ್ದುದನ್ನು ತೋರಿಸಿಕೊಟ್ಟರು.

ಕೆಲವು ವಿಜ್ಞಾನಿಗಳು ಧೂಮಪಾನಿಗಳ ಕೈ ಬೆರಳು, ಕಾಲ್ಬೆರಳುಗಳ ಉಷ್ಣತೆ ೦.೫ ರಿಂದ ೫° ಸೆಂಟಿಗ್ರೇಡಿನಷ್ಟು ಕಡಿಮೆ ಇದೆಯೆಂದು ತೋರಿಸಿದ್ದಾರೆ. ಧೂಮಪಾನಿಗಳ ರಕ್ತ ಸಾರದಲ್ಲಿ ಕೊಲೆಸ್ಟೆರಾಲ್ ಹಾಗು ಬೀಟಾಲೈತೋ ಪ್ರೊಟೀನಿನ ಪೂರ್ವ ಪದಾರ್ಥಗಳು ಹೆಚ್ಚಿನ ಪ್ರಮಾಣದಲ್ಲಿರುವವಲ್ಲದೆ, ಹಲಗೆ ರಕ್ತಕಣಗಳು ಒಂದುಗೂಡುವಿಕೆ ಹಾಗು ಅಂಟಿಕೊಳ್ಳುವಿಕೆ ಇತರರಿಗಿಂತ ಗಮನಾರ್ಹವಾಗಿ ಹೆಚ್ಚಿಗೆ ಇದೆ.

ಪುಪ್ಪುಸ ಹಾಗು ಶ್ವಾಸನಾಳಗಳ ರೋಗಗಳ ಮುಖ್ಯ ಕಾರಣಗಳೆಂದರೆ ಧೂಮಪಾನ, ರೋಗಾಣು ಸೋಂಕುವಿಕೆ ಹಾಗು ವಾತಾವರಣ ಮಾಲಿನ್ಯ. ಧೂಮಪಾನ ತ್ಯಜಿಸಿದರೆ ಶ್ವಾಸೋಚ್ಛ್ವಾಸ ಮಂಡಲದ ಮೇಲಾಗುವ ಹಾಗು ಇದರಿಂದಾಗಿ ಹೃದಯದ ಮೇಲಾಗುವ ದುಷ್ಪರಿಣಾಮಗಳನ್ನೂ ಕಡಿಮೆ ಮಾಡಬಹುದು. ಧೂಮಪಾನ, ಆಹಾರ ಸೇವನೆ, ಶಾರೀರಿಕ ಕ್ರಿಯೆ, ವ್ಯಾಯಾಮ ಮಾಡುವದು ವ್ಯಕ್ತಿಗತವಾದದ್ದಲ್ಲದೇ, ಮನಸ್ಸು ಮಾಡಿದರೆ ಪ್ರತಿಯೊಬ್ಬನೂ ಇವುಗಳನ್ನು ನಿಗ್ರಹಿಸಬಹುದು.

ಭಾರತದಲ್ಲಿ ಸ್ತ್ರೀಯರು ಧೂಮಪಾನ ಮಾಡುವದು ವಿರಳ. ಪಾಶ್ಚಾತ್ಯ ರಾಷ್ಟ್ರಗಳೊಡನೆ ಹೋಲಿಸಿದಾಗ ಇದು ಬಹಳ ಕಡಿಮೆ. ಗರ್ಭಿಣಿಯರು ಧೂಮಪಾನ ಮಾಡುವದರಿಂದ ಗರ್ಭಪಾತ, ನವಜಾತ ಶಿಶುಮರಣ, ಆತುರದ ಜನನ, ಕಡಿಮೆ ತೂಕದ ಶಿಶು ಜನನ, ತಾಯಿಯಲ್ಲಿ ಹೆಚ್ಚಿನ ರಕ್ತ ಒತ್ತಡಗಳು ಸಾಮಾನ್ಯ. ಆಹಾರ ರುಚಿಸದಿರುವದರಿಂದ ತಾಯಿಯ ಪೋಷಣೆ ಸರಿಯಾಗಿ ಆಗದೆ ಬೆಳೆಯುತ್ತಿರುವ ಭ್ರೂಣದ ಮೇಲೆ ಕೆಟ್ಟ ಪರಿಣಾಮವಾಗುವದು.

ಫಿಲ್ಟರ್ ಇರುವಂಥ ಸಿಗರೇಟುಗಳನ್ನು ಸೇದುವವರಲ್ಲಿ ಕಫದ ಉತ್ಪತ್ತಿ ಕಡಿಮೆ ಇರುವದೆಂದು ಡಾ. ರಿವಿಂಗ್ಟನ್ ಅವರ ಅಭಿಪ್ರಾಯ. ಆದ್ದರಿಂದ ಯಾರಿಗೆ ಧೂಮಪಾನವನ್ನು ಸಂಪೂರ್ಣವಾಗಿ ತ್ಯಜಿಸಲು ಸಾಧ್ಯವಿಲ್ಲವೋ ಅಂಥವರು ಫಿಲ್ಟರ್ ಇರುವ ಸಿಗರೇಟು ಸೇದುವದು ಉತ್ತಮ. ಇಂಥ ಸಿಗರೇಟು ಸೇದಿದಾಕ್ಷಣ ಆತ ಧೂಮಪಾನದ ದುಷ್ಪರಿಣಾಮಗಳಿಂದ ಪಾರಾದಂತೇನಲ್ಲ, ಬ್ರಾಂಕೈಟಿಸ್ ಪ್ರಮಾಣವನ್ನು ಮಾತ್ರ ಕಡಿಮೆ ಮಾಡಲು ಸಾಧ್ಯವಿದೆ.

ಕಡಿಮೆ ಸಿಗರೇಟು, ಫಿಲ್ಟರ್ ಇರುವ ಸಿಗರೇಟು, ನಿಕೋಟಿನ್ ಹಾಗು ಟಾರ್ ಅಂಶ ಕಡಿಮೆ ಇರುವ ಸಿಗರೇಟನ್ನು ಸೇದುವದು, ಸಿಗರೇಟನ್ನು ಅರ್ಧ ಮಾತ್ರ ಸೇದಿ ಎಸೆಯುವದು, ಬಾಯಿಯಲ್ಲಿಯೇ ಹೊಗೆಯನ್ನು ಹಿಡಿದು ಹೊರಗೆ ಉಗುಳುವದು ಮತ್ತು ಸಿಗರೇಟಿಗೆ ಬದಲು ಸಿಗಾರ್ ಇಲ್ಲವೇ ಸೇದು ಗೊಳವೆಯನ್ನುಪಯೋಗಿಸುವದು ಕಡಿಮೆ ಅಪಾಯಕಾರಿ. ✡



ಹೃದಯದಲ್ಲಿ ಸ್ಥಾನವಿದ್ದವನಿಗೆ ಮನೆಯಲ್ಲಿಯೂ ಸ್ಥಾನವಿರುತ್ತದೆ.

—ಲಂಡನ ಟೈಮ್ಸ್

ಪೋಲೀಸರು ಕಾಯದೆಯನ್ನು ಮುರಿಯಲು ಹೆದರುವ ವ್ಯವಸ್ಥೆಗೆ ಪ್ರಜಾಪ್ರಭುತ್ವವೆಂಬ ಹೆಸರು.

—ವಾಲ್ಟರ್ ವಿನ ಚೆಲ್

# ಇದುವೆ ಜೀವ ಇದು ಜೀವನ

## ಅತ್ತಿಗೆಯವರ ಅಚ್ಚು ಮೆಚ್ಚು

ನನ್ನ ಅತ್ತಿಗೆಯವರಿಗೆ "ನಂಗೊತ್ತು" ಎಂಬುದು ಅಚ್ಚು ಮೆಚ್ಚಾದ ಪದ.

ಒಮ್ಮೆ ಅತ್ತಿಗೆಯವರು ಮೆಳಿಹಳ್ಳಿಯಿಂದ ಹೊರಟು ಮೊದಲಿಗೆ ಮಗಳ ಮನೆಗೆಂದು ತುಮಕೂರಿಗೆ ಹೋದರು. ಅವರು ಮಗಳ ಮನೆಯ ಮೆಟ್ಟಿಲುಗಳ ಹತ್ತೋ ಹೊತ್ತೇ ಮಗಳ ಆಫೀಸಿನ ಹೊತ್ತಾಗಿತ್ತು. ತಾಯಿಯ ಕಂಡ ಮಗಳು ಅತುರದಲ್ಲೇ ಆರೋಗ್ಯ-ಭಾಗ್ಯಗಳ ವಿಚಾರಿಸಿ, ಊಟದ ತಯಾರಿಕೆಗೆ ಎಲ್ಲಾ ಒದಗಿಸಿ "ಅಮ್ಮಾ! ಇವತ್ತು ಆಫೀಸಿಗೆ ಹೊತ್ತಾಗಿದೆ ತಾವು ದಯವಿಟ್ಟು ನಮ್ಮೆಲ್ಲರಿಗೂ ಅಡಿಗೆ ಮಾಡ್ಬಿಟ್ಟು ಊಟ ಮಾಡಿರ್ರೀ" ಎಂದು ಹೇಳಿ ಗಾಳಿ ತುಂಬಿ, ಎಣ್ಣೆ ಸುರಿಸಿ ಉರಿಸುವ ಸ್ಟೋವನ್ನು ಹಿಡಿದು "ನೋಡಮ್ಮಾ, ಈ ಸ್ಟೋವನ್ನು ಹೀಗೆ..." ಎಂದು ಉಪಯೋಗಿಸುವ ಕ್ರಮ ತಿಳಿಸುವ ಮೊದಲೇ "ನಂಗೊತ್ತು" ಎಂದು ಸರಿದ ಧ್ವನಿಯಲ್ಲಿ ನುಡಿದರು ನನ್ನತ್ತಿಗೆಯವರು. ಮಗಳು ಮರು ಮಾತಿಲ್ಲದೇ ಆಫೀಸಿಗೆ ಓಡಿದಳು.

ಇತ್ತ ಅತ್ತಿಗೆಯವರು ಮಾಮೂಲು ಬತ್ತಿಯ ಎತ್ತಿ ಇಳಿಸೋ ಸ್ಟೋವ್ ಎಂದೇ ಗೀರಿದರು. ಬೆಂಕಿಕಡ್ಡಿಯ ಉರಿಯು ಬೆರಳ ಸುಡುವಂತಾದರೂ ಜ್ಯೋತಿ ಕಾಣಲಿಲ್ಲ. ಕೆಲವು ಭಾಗಗಳನ್ನು ಕಿತ್ತಿಡಿದಾಗ ಅವರಿಗೆ ಅರಿವಾಯಿತು "ಇದು ನನ್ನ ಸ್ಟೋವ್‌ನಂತಿಲ್ಲ; ಇದ್ಯಾವುದೋ ವಿಚಿತ್ರವಾದದ್ದು" ಹೀಗೆಂದುಕೊಂಡೇ ನಿಂತು ಅಡ್ಡಾಡಿಕೊಂಡರೂ ಯಾರೂ ಬರಲಿಲ್ಲ. ಬೇಸತ್ತು ಇನ್ನೇನು ತಲೆ ನೆಲಕ್ಕಾಗಬೇಕು ಎನ್ನುವಷ್ಟರಲ್ಲಿ ಅವರ ಮಗಳು ಮತ್ತು ಅಳಿಯ ಬಂದೇಬಿಟ್ರು. ಅವರು ಊಟಕ್ಕೆ ಅಣಿಯಾಗುವಾಗ ಅತ್ತಿಗೆಯವರು ಬಾಯ್ಬಿಟ್ರು "ಅಡಿಗೆ ಮಾಡಿಲ್ಲಮ್ಮಾ." "ಏಕಮ್ಮಾ, ಮಾಡ್ಲಿಲ್ಲಾ" ಎಂಬ ಪ್ರಶ್ನೆ ಎದ್ದಾಗ ಅತ್ತಿಗೆಯವರು ನಡೆದ ಸಂಗತಿಯನ್ನು ಹೇಳಲೇಬೇಕಾಯಿತು. ಅಂದು ಅಂಗಡಿಯಿಂದ ಬ್ರೆಡ್ಡು, ಬಾಳೆಹಣ್ಣು ತಂದು ಫಲಾಹಾರ ಮುಗಿಸಬೇಕಾಯಿತು. ಅಂದಿನಿಂದ "ನಂಗೊತ್ತು" ನನ್ನತ್ತಿಗೆಯವರ ಬಳಿ ಸುಳಿದೇ ಇಲ್ಲ.

ಚಂದ್ರಶೇಖರ

## ಕಾರ್ಯ ಗೌರವ

ನಮ್ಮ ಪ್ರೊಫೆಸರರೊಬ್ಬರು ತಾವು ಅಮೇರಿಕದಲ್ಲಿದ್ದಾಗ ನಡೆದ ಘಟನೆಯನ್ನು ಹೇಳಿದರು. ಕಾರ್ಯ ಗೌರವ (Dignity of Labour) ಅಲ್ಲಿ ಕೊಟ್ಟಿರುವ ಮಹತ್ವವನ್ನು ಕಾಣಬಹುದು.

"ನಾನು ಎಂ. ಬಿ. ಬಿ. ಎಸ್ ಪಾಸಾದ ನಂತರ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಅಮೇರಿಕೆಗೆ (ನ್ಯೂಯಾರ್ಕ್) ತೆರಳಿದೆ. ನನ್ನ ಪ್ರೊಫೆಸರ್ ಬಹಳ ಉತ್ಸಾಹಿ, ಪ್ರಾಮಾಣಿಕ ಹಾಗು ಸಂಭಾವಿತ. ನಮಗೆ ಬಹುವಾಗಿ ಪ್ರೋತ್ಸಾಹಿಸುತ್ತಿದ್ದರು. ಒಂದು ದಿನ ಅವರು ವಾರ್ಡಿನಲ್ಲಿ ನನಗೆ ತಮ್ಮ ಮಗನ ಪರಿಚಯ ಮಾಡಿ ಕೊಡುತ್ತ 'Meet my son Mr John' ಎಂದರು. ನಾನೂ ಅವರ ಮಗನ ಕೈಕುಲುಕಿ ಮುಗುಳ್ನಕ್ಕೆ. ವಾರೆರಡುವಾರ ಕಳೆದಿರಬಹುದು, ಅದೇ ಆಸ್ಪತ್ರೆಯ ಇನ್ನೊಂದು ಫ್ಲೋರ್‌ನಲ್ಲಿರುವ ವಾರ್ಡಿನ ರೋಗಿಯೊಬ್ಬನನ್ನು ನೋಡಲು ನಾನು ತೆರಳುತ್ತಿದ್ದೆ. ಸ್ಟ್ರೆಚರನ್ನು ನೂಕುತ್ತ ನಡೆದಿದ್ದ ಒಬ್ಬ ವಾರ್ಡ್‌ಬಾಯ್ ನನಗೆ ಹಲೋ ಎಂದು ನಕ್ಕ. ನಾನೂ ಹಲೋ ಎಂದೆ. ಆತ ನನ್ನೊಂದಿಗೆ ಮಾತಾಡಬೇಕೆಂದು ನಿಂತ. ನಾನೂ ನಿಂತೆ ಆದರೆ ಆತನಾರೆಂದು ನನಗೆ ಹೊಳೆಯಲಿಲ್ಲ. ನನ್ನ ಮುಖ

ನೋಡಿದ ಆತನೇ "ಯಾಕೆ ನನ್ನ ಗುರುತು ಸಿಗಲಿಲ್ಲವೇ? ನಾನು ನಿಮ್ಮ ಪ್ರೊಫೆಸರರ ಮಗ ಬಿ. ಜಾನ್. ಇದೇ ವಾರ್ಡಿನಲ್ಲಿ ವಾರ್ಡ್‌ಬಾಯಾಗಿದ್ದೇನೆ," ಎಂದುಸುರಿದಾಗ ನನಗೆ ಆಶ್ಚರ್ಯವೋ ಆಶ್ಚರ್ಯ. ಒಂದೇ ಆಸ್ಪತ್ರೆಯಲ್ಲಿ ತಂದೆ ಪ್ರೊಫೆಸರ್ ಅವರ ಮಗ ವಾರ್ಡ್‌ಬಾಯ್.

-ಡಾ. ಎ. ಡಿ. ದೇಶಪಾಂಡೆ

## ವರಶೋಧನೆ

ಈಗ್ಗೆ ಕೆಲವು ದಿವಸಗಳ ಹಿಂದೆ ನಮ್ಮ ದೂರದ ಸಂಬಂಧಿಕರಲ್ಲೊಬ್ಬರು ತಮ್ಮ ಮಗಳಿಗಾಗಿ ವರಶೋಧನೆ ಮಾಡುತ್ತಿದ್ದರು. ಬಹಳ ದಿನಗಳಾದರೂ ಯೋಗ್ಯ ವರ ದೊರಕಿರಲಿಲ್ಲ. ನಮ್ಮ ಸಂಬಂಧಿಕರೂ ಸಹ "ವರನ ನೌಕರಿ ಖಾಯಂ ಇದೆಯೇ? ಜಮೀನು ಮನೆ ಇದೆಯೆ? ಅತ್ತೆ ಇರುವಳೆ?" ಎಂದೆಲ್ಲಾ ಚೌಕಶಿ ಮಾಡುತ್ತಿದ್ದರು.

ಕೊನೆಗೆ ಅವರು ಒಂದು ವರನನ್ನು ಪತ್ತೆ ಹಚ್ಚಿದರು. ಆ ವರನನ್ನು ನೋಡಿದವರು, ಹುಡುಗಿಯ ತಂದೆ. ತಾಯಿ ಆತನನ್ನು ನೋಡಿರಲಿಲ್ಲ. ಹುಡುಗಿಯ ತಂದೆ ವರನನ್ನು ಮರುದಿನ ಮುಂಜಾನೆ ತಮ್ಮ ಮನೆಗೆ ಚಹಾ ಫಲಾಹಾರಕ್ಕೆ ಬರುವಂತೆ ಆಮಂತ್ರಣವಿತ್ತು ಬಂದರು.

ಮರುದಿನ ಯಾವ ಕಾರಣಕ್ಕೋ ವರನು ಮುಂಜಾನೆ ಬರಲಿಲ್ಲ. ಸಂಜೆ ಬಂದ. ಆ ಹೊತ್ತಿನಲ್ಲಿ ಕನ್ಯಾಪಿತೃ ಮನೆಯಲ್ಲಿ ಇರಲಿಲ್ಲ ಭಾವೀ ಅತ್ತೆಯು ವರನನ್ನು ನೋಡಿರಲಿಲ್ಲ. ಆದರೂ ಆಕೆ ವರನು ಬರುವ ಗತ್ತಿನಿಂದ ಆತ ವರನ ದೂರದ ಸಂಬಂಧಿಕನಿರಬಹುದೆಂದು ತಿಳಿದುಕೊಂಡು "ಬರ್ರಿ ಬರ್ರಿ" ಎಂದು ಕುರ್ಚಿ ತೋರಿಸಿ "ಅಲ್ಲಿ ಕೂಡ್ರಿ" ಎಂದು "ಏನ್ರೀ ನಿಮ್ಮ ಹುಡುಗ (ವರ)ನ ನೌಕರಿ ಖಾಯಂ ಇದೆಯೆ? ಅತ್ತೆ ಸೊಸೆಗೆ ತುಂಬಾ ತ್ರಾಸ ಕೊಡುತ್ತಾಳಂತೆ ಹೌದಾ? ಜಮೀನು ಇವೆಯೆ?" ಎಂದು ಕೇಳಿದಾಗ ಒಮ್ಮೆಲೆ ವರ ಮಹಾಶಯ ಎದ್ದು ಹೋಗೇ ಬಿಟ್ಟ.

ಆ ವೇಳೆ ಆತನೇ ವರನೆಂದು ತಿಳಿದಾಗ ಕನ್ಯಾ ಮಾತೆಯ ಮುಖ ಇಂಗು ತಿಂದ ಮಂಗನಾಗಿತ್ತು.

-ಆರ್. ಕೆ. ಕುಲಕರ್ಣಿ

## ಅವರು ಬಂದಿದ್ದಾರೆ...

ನಮ್ಮ ಪಕ್ಕದ ಮನೆ ಬಾಡಿಗೆಗೆ ಹೊಸದಾಗಿ ಒಬ್ಬ ಮುಸ್ಲಿಂ ದಂಪತಿಗಳು ಬಂದರು ಆ ದಂಪತಿಗಳಲ್ಲಿ ಗಂಡನಿಗೆ ಚೆನ್ನಾಗಿ ಕನ್ನಡ ಬರುತ್ತಿತ್ತು ಆದರೆ ಹೆಂಡತಿಗೆ ಸ್ವಲ್ಪ ಮಾತ್ರ ಕನ್ನಡ ಬರುತ್ತಿತ್ತು.

ಒಂದು ದಿನ ಅವರ ಹೆಂಡತಿಯು ಹತ್ತಿರ ಮಾತನಾಡುತ್ತಾ ನಿಂತಿದ್ದೆ. ಆಗ ಅವರ ಹೆಂಡತಿ ನನ್ನ ಹತ್ತಿರ ನೋಡಿ, ನಮ್ಮ ಮನೆಯಲ್ಲಿ 'ರಾತ್ರಿ ಕಪ್ಪಗೆ ಇರುವವರು ಬರುತ್ತಾರೆ, ಒಂದು ಈರುಳ್ಳಿ, ಹಸಿ ಮೆಣಸಿನಕಾಯಿ ತಿಂದು ಹೋಗ್ತಾರೆ. ಮನೆಯಲ್ಲಿ ತುಂಬಾ ಗಲಾಟೆ ಮಾಡ್ತಾರೆ ಅವರಿಗೆ ಏನು ಮಾಡಬೇಕು' ಎಂದು ಕೇಳಿದರು. ಇದನ್ನು ಕೇಳಿದ ನಾನು, ಆಶ್ಚರ್ಯವಾಗಿ, ಅವರ್ಯಾರೆಂದು ತಿಳಿಯದೆ, 'ಯಾರ್ರೀ ಅವರು ನನಗೆ ಒಂದು ದಿನ ಅವರನ್ನು ತೋರಿಸಿ' ಎಂದು ಹೇಳಿದೆ

ಅಂದು ರಾತ್ರಿ ಸುಮಾರು ಎಂಟು ಘಂಟೆಯಾಗಿತ್ತು. ಅವರ ಪತಿ ಮನೆಯಲ್ಲಿರಲಿಲ್ಲ. ನಾನು ನನ್ನ ಮನೆಯಲ್ಲಿ ಅಡಿಗೆ ಮಾಡುತ್ತಿದ್ದೆ. ಇದ್ದಕ್ಕಿದ್ದಂತೆ ಆ ಮುಸ್ಲಿಂ ಹೆಂಡತಿ ನಮ್ಮ ಮನೆಗೆ ಬಂದು ನೋಡಿ 'ಅವರು ಬಂದಿದ್ದಾರೆ ಬೇಗ ಬನ್ನಿ ತೋರಿಸುತ್ತೇನೆ' ಎಂದರು. ಆಗ ನಾನು 'ಅವರನ್ನು' ನೋಡುವ ಕುತೂಹಲದಿಂದ ಮಾಡುತ್ತಿದ್ದ ಕೆಲಸವನ್ನು ಅರ್ಧದಲ್ಲಿಯೇ ಬಿಟ್ಟು ಅವರ ಮನೆಗೆ ಹೋದೆ. ಅಲ್ಲಿ ಹೋಗಿ 'ಅವರನ್ನು' ನೋಡಿದಾಗ ನನಗೆ ನಗು ತಡೆಯಲಾಗಲಿಲ್ಲ.

ಅವರು ಯಾರು ಗೊತ್ತೆ 'ಇಲಿರಾಯರು.'

—ಆರ್. ಸುಜಾತ

# ಪರಿಣಾಮ

ಮೂಲ : ಯಶಪಾಲ
ಕನ್ನಡಕ್ಕೆ : ಸುಮನಾಭ

ಒಬ್ಬ ವ್ಯಕ್ತಿ ಯಾರನ್ನಾದರೂ ಬಹಳ ಹಚ್ಚಿಕೊಂಡಿದ್ದರೆ, ಎಂದಾದರೂ ಅವರಿಂದ ತನಗೆ ಅಪಮಾನ, ತಿರಸ್ಕಾರವುಂಟಾದರೆ, ಅವನಿಗೆ ಸತ್ತುಹೋಗುವಷ್ಟು ಬೇಸರ ಬರುತ್ತದೆ. ಇದನ್ನು ಮಾತುಗಳಲ್ಲಿ ವರ್ಣಿಸಲಸಾಧ್ಯ. ದಿಲೀಪ ತನ್ನ ಪತ್ನಿ ಹೇಮಾಳನ್ನು ಅತಿ ಎನ್ನುವ ಮಟ್ಟಿಗೆ ಪ್ರೀತಿಸುತ್ತಿದ್ದ. ಒಮ್ಮೊಮ್ಮೆ ಇವರೊಬ್ಬರೇ ಏನು ಮದುವೆಯಾಗಿರುವುದು ಎಂಬಂತೆ ಸುತ್ತಲಿನ ಜನ-ರಾಡಿಕೊಂಡಿದ್ದೂ ಉಂಟು.

ಹೀಗೆಯೇ ಒಂದು ದಿನ ದಿಲೀಪ ತನ್ನ ಹಳೆಯ ಸಹಪಾಠಿಯೊಬ್ಬಳ ಜೊತೆ ಸೆಕೆಂಡ್ ಷೋ ಸಿನಿಮಾಕ್ಕೆ ಹೋಗಿ ಬಂದೊಡನೆಯೇ ಅವನಿಗೆ ಸಿಕ್ಕಿದ್ದು ಒರಟಾದ ಸ್ವಾಗತ. ರಾತ್ರಿಯೆಲ್ಲಾ ಹೇಮಾ ಆಕಾಶವೇ ತನ್ನ ತಲೆಯ ಮೇಲೆ ಬಿದ್ದಂತೆ ಅಳುತ್ತಾ ಕಂಪಡರಿಸಿಕೊಂಡು ತನ್ನ ತವರುಮನೆಗೆ ಹೊರಟು ಹೋಗಿದ್ದಳು.

ಡಿಸೆಂಬರ್ ತಿಂಗಳ ಕೊನೆಯ ವಾರವದು. ಮಳೆ ಹನಿಯುತ್ತಿತ್ತು. ದಿಲೀಪ ಸುಮ್ಮನೆ ಕುಳಿತುಕೊಂಡು ಕಿಟಕಿಯೆಡೆಗೆ ದಿಟ್ಟಿಸುತ್ತಿದ್ದ. ಅವನಿಗೆ ಫಲಹಾರ ಕೂಡ ಬೇಕಿರಲಿಲ್ಲ. ಮನಸ್ಸು ವ್ಯಸ್ತವಾಗಿತ್ತು. ಯಾವುದೋ ಪುಸ್ತಕ ಓದುತ್ತ ಕುಳಿತಂತೆ ಮಧ್ಯಾಹ್ನವಾಗಿತ್ತು. ಹೊಟ್ಟೆ ಚುರುಗುಟ್ಟುತ್ತಿತ್ತು. ಹೋಟೆಲಿಗೆ ಹೋಗಿ ಕೇವಲ ತಿಂಡಿ ಮುಗಿಸಿ ಬಂದು ಮತ್ತೆ ರೂಮು ಸೇರಿದ. ಹೀಗೆಯೇ ಶೂನ್ಯಮನಸ್ಕನಾಗಿ ಕುಳಿತಾಗ, ಅವನ ತಮ್ಮ ಬಂದವನೇ, 'ಭಾಯಿ, ನಿಮಗೆ ತೊಂದರೆಯಿಲ್ಲದಿದ್ದರೆ ನಾನು ಮೋಟರ್ ಸೈಕಲನ್ನು ಒಯ್ಯಲೇ ?' ಎಂದ. ಅವನಿಗೆ ಉತ್ತರಿಸಲು ಕೂಡ ಮನಸ್ಸಿಲ್ಲದೆ ಕೇವಲ ಕೈಸನ್ನೆಯಿಂದ ಸೂಚಿಸಿ ಅವನ ಇರುವಿಕೆಯನ್ನು ಇಷ್ಟಪಡದವನಂತೆ ತನ್ನ ಮುಖವನ್ನು ತಿರುಗಿಸಿಕೊಂಡ. ಈಗ ಮಳೆ ಸ್ವಲ್ಪ ನಿಂತಿತ್ತು. ಅರೆ! ಆಗಲೇ ೬ ಘಂಟೆಯಾಯಿತಲ್ಲ ಎಂದು ಮೇಲೆದ್ದವನೇ ಶಾಲು ಹೊದೆದು ಹೊರಹೊರಟ.

ತನ್ನ ತಮ್ಮನ ಹಳೆಯ ಸೈಕಲನ್ನು ತೆಗೆದುಕೊಂಡು, ಯಾರಾದರೂ ಎದುರಿಗೆ ಸಿಕ್ಕರೆ ಒಲ್ಲದ ಮಾತಿನ ಸುರಿಮಳೆಯಾದೀತೆಂದು ಊರ ಹಳೆಯ ಕೋಟೆಯ ಬಯಲಿನ ಕಡೆ ಕ್ರಮಿಸಿದ. ಸಂಜೆಯ ಅಷ್ಟು ಹೊತ್ತಿನಲ್ಲಿ ಅದೂ ಊರಿನ ಹೊರಗೆ ಯಾರು ಬಂದಾರು ? ಏಕಾಂತವೇ ಅವನಿಗೆ ಪ್ರಿಯ



ವಾಗಿತ್ತು. ದೀಪಗಳು ಹೊತ್ತಿಕೊಳ್ಳ-ತೊಡಗಿದುವು. ರಸ್ತೆಯುದ್ದಕ್ಕೂ ಸಾಗಿದಂತೆ ಬೀದಿ ದೀಪಗಳು ಅವನನ್ನು ಮುಂದೆ ಕಳುಹಿಸುವಂತಿತ್ತು. ಸಮೀಪದಲ್ಲಿಯೇ ಇದ್ದ ಮೈಲಿಗಲ್ಲಿನ ಬಳಿ ಸೈಕಲ್ಲನ್ನು ಒರಗಿಸಿ, ಕರವಸ್ತ್ರದಿಂದ ಮುಖವನ್ನೊರಸಿಕೊಂಡು ಕಲ್ಲು ಬೆಂಚೊಂದರ ಮೇಲೆ ಕುಳಿತ. ಚಳಿಗಾಳಿಯೇನೋ ಬೀಸುತ್ತಿತ್ತು. ಇಷ್ಟು ಸಣ್ಣ ವಿಷಯಕ್ಕೆ ತಾನೇಕೆ ತಲೆಕೆಡಿಸಿಕೊಳ್ಳಬೇಕು ? ತಲೆತಗುಲಿದರೆ, ಅವಳೇ ವಾಪಸು ಬಂದಾಳು ಎಂದುಕೊಂಡವನೇ ಸುಮ್ಮನೆ ರಸ್ತೆಯನ್ನು ನೋಡುತ್ತಾ ಕುಳಿತ. ರೈಲ್ವೆ ಲೈನಿನ ಬಳಿಯೇ ಅವನಿದ್ದುದರಿಂದ ಅದರ ಸಾಲಿನಲ್ಲಿ ಸ್ವಲ್ಪ ನಡೆದ. ಫ್ರಾಂಟಿಯರ್ ಮೇಲ್ ಗಾಡಿ ರಾಕ್ಷಸ ಶಬ್ದದೊಡನೆ ಬರುತ್ತಿತ್ತು. ಹೌದು ! ಈಗ ೯ ಗಂಟೆಯಾಗಿದೆ. ಗಡಿಯಾರ ನೋಡಿ ಖಚಿತಪಡಿಸಿಕೊಂಡು, ನಿಧಾನವಾಗಿ ಸಾಯಿಕಲ್ಲನ್ನು ತಳ್ಳಿಕೊಂಡು ರಸ್ತೆಯೆಡೆ ಚಲಿಸಿದ.

ರಸ್ತೆ ದೀಪಗಳು ಮನುಷ್ಯನ ಜೀವನದ-ಲ್ಲಿಯ ಆಗುಹೋಗುಗಳಿಗೆ ನಿರ್ವಿಕಾರ, ಜೀವಂತ ಸಾಕ್ಷಿಗಳಾಗಿ ನಿಂತಿದ್ದುವು. ಅವನು ಮುಂದೆ ಹೋಗುತ್ತಿದ್ದಂತೆ ನೆರಳು ಅವ-ನನ್ನು ಹಿಂಬಾಲಿಸುತ್ತಿತ್ತು. ಸ್ವಲ್ಪ ದೂರ ನಡೆದ ಮೇಲೆ ಮರವೊಂದರ ಬಳಿ ಏನೋ ಬಿಳಿಯ ವಸ್ತು ಕಂಡಿತು. ಇದೇನು ! ಯಾರೂ ಇಲ್ಲದ ಕಡೆ ಕಾಣುತ್ತಿದೆ ! ಎಂಬ ಕುತೂಹಲದಿಂದ ಹತ್ತಿರ ಸರಿದ ದಿಲೀಪ.

ಈಗ ಆಕೃತಿ ಸ್ಪಷ್ಟವಾಯಿತು. ಅರೆ ! ಬಿಳೀ ಪಾಯಿಜಾಮ–ಅಂಗಿ ಧರಿದಸಿ

ಸುಮಾರು ೮–೧೦ ವರ್ಷದಹುಡುಗ. ಅವನು ಕೊರಳಿಗೆ ಪೆಪ್ಪರಮಿಂಟು, ಚಾಕಲೇಟುಗಳ ತಗಡಿನ ತಟ್ಟೆಯನ್ನು ದಾರದಿಂದ ಕಟ್ಟಿಹಾಕಿ ಕೊಂಡಿದ್ದ. ಅವನ ಕೃಶ ಶರೀರ, ಎಣ್ಣೆಕಾಣದ ಕೂದಲು, ಇನ್ನು ವ್ಯಾಪಾರಸ್ಥರ ಚುರುಕಿನ ಛಾಯೆಯೇ ಮುಖದ ಮೇಲೆ ಇಲ್ಲದ ಈ ಹುಡುಗ ಏನು ಸಂಪಾದಿಸಿಯಾನು ? ಎಂದು ಕೊಂಡ. ಬಾಲಕನ ಬಳಿ ಇವನು ಕ್ಷಣಕಾಲ ನಿಂತೊಡನೆಯೇ, 'ಬಾಬು, ಒಂದು ಪೈಸೆಗೆ ಒಂದು ಮಿಠಾಯಿ ಕೊಡ್ತೇನೆ, ತಗೊಳ್ಳಿ' ಎಂದ. ದಿಲೀಪ, 'ಇದಷ್ಟೂ ಮಿಠಾಯಿಗೆ ಎಷ್ಟಾಗುತ್ತೆ ಮರಿ,' ಎಂದ. 'ಮೂವತ್ತು ಪೈಸ್ಟೆ' ಉತ್ತರ ಬಂತು. ಎಷ್ಟೋ ಜನ ಅವನನ್ನು ಹೀಗೆ ತಮಾಷೆ ಮಾಡಿರುವುದಿದೆ. 'ಇಷ್ಟೇನೇ? ಕಡಿಮೆ ಮಾಡಿಕೊಳ್ಳಲ್ಲವೇ ?' ಎಂಬ ದಿಲೀಪನ ಮಾತಿಗೆ, 'ಇಲ್ಲ ಬಾಬೂ, ನಮ್ಮ ತಾಯಿ ಬೈತಾರೆ' ಎಂದ ಹುಡುಗ. 'ಹೋಗಲಿ, ಎಲ್ಲಾ ನನಗೆ ಕೊಡಪ್ಪ' ಎಂದು ಒಂದು ರೂಪಾಯಿಯ ನೋಟನ್ನು ಕೊಟ್ಟು ತನ್ನ ಕರ್ಚಿಫಿನಲ್ಲಿ ಅವನ್ನು ಕಟ್ಟಿಕೊಂಡ. 'ಮರಿ, ನಿನ್ನ ಮನೆ ಎಲ್ಲಪ್ಪ' ಎಂಬ ಪ್ರಶ್ನೆಗೆ ಕ್ಷೀಣ ದನಿಯಲ್ಲಿ, 'ಇಲ್ಲೇ ಪಕ್ಕದ ಸಂದಿಯಲ್ಲಿದೆ' ಎಂಬ ಉತ್ತರ. ಹುಡುಗನಿಗೆ ರೂಪಾಯಿಯ, ನೋಟಿನ ಮೇಲೆಯೆ ಗಮನವಿತ್ತು. ಅವನೆಂದ 'ನನ್ನ ಬಳಿ ಚಿಲ್ಲರೆ ಇಲ್ಲವಲ್ಲಾ'

'ಮನೆಯಲ್ಲಿ ತಗೆದುಕೊಂಡುಬಾ.'

'ಅಲ್ಲೂ ಇಲ್ಲ ಬಾಬು.'

'ನಿಮ್ಮ ತಂದೆಯ ಬಳಿ ಇರಬೇಕು ನೋಡು'

'ಅವರು ಸತ್ತುಹೋಗಿದಾರೆ, ಅವ್ವ ಒಬ್ಬಳೇ ಇರೋದು.'

'ನಿಮ್ಮ ತಾಯಿ ಏನು ಕೆಲಸಮಾಡುತ್ತಾಳೆ.'

'ನಿಮ್ಮಂತಹ ಬಾಬುಗಳೊಬ್ಬರ ಮನೇಲಿ ಕೆಲಸಕ್ಕಿದ್ಲು, ಆದರೆ ಈಗ ಓಡಿಸಿಬಿಟ್ರು'

"ನಮ್ಮ ತಾಯಿ ೫ ರೂಪಾಯಿ ತೆಗೆದು ಕೊಳ್ತಿದ್ರು, ಜಗತೂನ ತಾಯಿ ಮೂರು ರೂಪಾಯಿಗೇ ಕೆಲ್ಸ ಮಾಡ್ತೀನಿ ಎಂದಿದ್ದರಿಂದ ಅವಳನ್ನು ಸೇರಿಸಿಕೊಂಡ್ರು"

ಹುಡುಗ ಒಂದು ರೂಪಾಯಿಗೆ ಚಿಲ್ಲರೆ ವಾಪಸು ಕೊಡುವುದು ಹೇಗೆಂದು ಚಿಂತಿಸುತ್ತಿದ್ದ. ಆ ಹುಡುಗನ 'ಮನೆ' ಹೇಗಿದೆಯೆಂದು ನೋಡುವ ಕುತೂಹಲ ಇವನಿಗೆ. ಸಂದಿಯಲ್ಲಿ ಕೊಚ್ಚೆ ನೀರನ್ನು ತುಳಿದುಕೊಂಡು ವಾಸನೆಯನ್ನು ಮೂಗುಮುಚ್ಚಿ ಸಹಿಸಿ, ಕೊನೆಗೆ ಅವನ 'ಮನೆ' ತಲುಪಿದ. ಬುಡ್ಡಿ ದೀಪವೊಂದು ಕ್ಷೀಣ ಪ್ರಕಾಶ ಬೀರುತ್ತಿತ್ತು. ಒಳಗಿನಿಂದ 'ಮಗೂ, ಎಲ್ಲಾ ಮಾರಿಬಿಟ್ಯಾ' ಎಂಬ ದನಿ. ಅವರಮ್ಮನದೇ ಇರಬೇಕು. 'ಹೌದವ್ವಾ ಈ ಬಾಬು ತೆಗೆದುಕೊಂಡರು. ಬಾಕಿ ಚಿಲ್ಲರೆ ಅವರಿಗೆ ಕೊಡಬೇಕು' ಎಂದ ಹುಡುಗ. 'ಯಾವ ಬಾಬು ಮರೀ?' 'ಬೈಸಿಕಲ್ ಬಾಬು ಅವ್ವ, ಮನೆಯ ಮುಂದಿನ ಗಲ್ಲಿಯಲ್ಲಿ ಕಾದಿದಾರೆ'. 'ಮಗೂ, ರೂಪಾಯಿ ಅವರಿಗೆ ವಾಪಸು ಮಾಡಿ, ಮನೆ ಅಡ್ರೆಸ್ ತಿಳಿದುಕೋ, ನಾಳೆ ಚಿಲ್ಲರೆ ತೆಗೆದುಕೊಂಡು ಬರುವಿಯಂತೆ' ಮಾತುಗಳು ಅಸ್ಪಷ್ಟವಾಗಿ ಕೇಳಿಬರುತ್ತಿದ್ದವು. ಮನೆಗೆ ಮತ್ತಷ್ಟು ಹತ್ತಿರ ಹೋಗಿ ಬಾಗಿಲ



ನಾವು ತುಂಬಾ ಪ್ರಾಣ ಸ್ನೇಹಿತರು ಕಣಯ್ಯ, ಬೈಟು ಚಹಾಬಿಲ್ಲಿನ ಹರಿ ಸಮನಾಗಿ ಮಾಡಿ ಕೊಡು...

ಬಳಿ ನಿಂತು, 'ಇರಲಿ ಬಿಡು ಮರೀ. ಒಂದ್ರೂಪಾಯಿ ನೀನೇ ಇಟ್ಕೊ' ಎಂದವನೇ ಸೈಕಲನ್ನೇರಿ ಮನೆಯ ಕಡೆ ಹೊರಟ. ಹುಡುಗನ ತಾಯಿ 'ಬೇಡ, ಬೇಡ' ಎಂದೇ ಅನ್ನುತ್ತಿದ್ದಳು.

*

ಹುಡುಗನಿಗೆ ಬಹಳ ಹಸಿವಾಗಿತ್ತು. ತಾಯಿ, 'ಕೈಕಾಲು ತೊಳೆದುಕೋ ಮಗು, ರೊಟ್ಟಿ ತಿನ್ನುವಿಯಂತೆ' ಎಂದಾಗ, ಕಾಲ್ತೊಳೆದು ಬಂದು ಕುಳಿತ. ತಾಯಿ ಹಳೆಯ ಬಟ್ಟೆ ಗಂಟಿನೊಳಗೆ ಕಟ್ಟಿದ್ದ ರೊಟ್ಟಿಯನ್ನವನಿಗೆ ಕೊಟ್ಟಾಗ, ರೂಪಾಯಿ ನೋಟಿನ ಕಡೆಗೇ ನೋಡುತ್ತ 'ಊಂ......ನನಗೆ ರೊಟ್ಟಿಗೆ ನೆಂಜಿಕೊಳ್ಳಕ್ಕೆ ಪಲ್ಯಬೇಕು,' ಎಂದು ರಾಗವೆಳೆದ.

'ರೊಟ್ಟಿಗೆ ಉಪ್ಪು ಹಾಕಿದೀನಪ್ಪ, ಗಲಾಟೆ ಮಾಡದೆ ತಿನ್ನು, ದಣಿದಿದ್ದಿ' ಎಂದಳು ತಾಯಿ.

'ಊಂ ಬೆಳಿಗ್ಗನೂ ಅದೇ. ಈಗಲೂ ಅದೇ ಒಣಗಿದ್ದೇ' ಹುಡುಗ ಅಳುವನ್ನು ಪ್ರಾರಂಭಿಸುವಂತೆ ತೋರುತ್ತಿತ್ತು. 'ನನ್ರಾಜ, ಅಳ್ಬೇಡಪ್ಪ, ನಾಳೆ ಖಂಡಿತ ಪಲ್ಯ ಮಾಡ್ತೀನಿ' ತಾಯಿ ಅವನನ್ನು ಸಂತೈಸಲು ಪ್ರಯತ್ನಿಸಿದಳು. ಹುಡುಗ ತಟ್ಟನೆ, 'ಅಮ್ಮಾ, ನೀನು ರೊಟ್ಟಿ ತಿಂದೆಯಾ' ಎಂದಿದ್ದಕ್ಕೆ 'ಇಲ್ಲ ಮಗೂ, ಸಾಯಂಕಾಲ ಬಹಳ ತಡವಾಗಿ ತಿಂದಿದ್ದೆ, ಹಸಿವಿಲ್ಲ.' ಈ ಮಾತುಗಳನ್ನು ಮನೆಯ ಪಕ್ಕದಲ್ಲಿ ಕತ್ತಲಲ್ಲಿ ನಿಂತುಕೊಂಡ ದಿಲೀಪ ಕೇಳಿ ಅವನ ಮನಸ್ಸಿಗೆ ಏನೋ ಅನಿಸಿ, ಮನೆಗೆ ಹೊರಟ.

*

ದಿಲೀಪ ಬೆಳಿಗ್ಗೆ ಸ್ನಾನ, ಉಪಾಹಾರ ಮುಗಿಸಿ ಆಫೀಸಿಗೆ ಹೊರಟ. ಮಧ್ಯಾಹ್ನ ಸಮಯದ ನಂತರ ಆಫೀಸಿನ ಜವಾನ ಬಂದು, 'ಸಾಹೇಬರೆ, ಊಟ ತರಲೇ' ಎಂದ. 'ಹಸಿವಿಲ್ಲ ಹೋಗು' ಇವನ ಉತ್ತರ.

'ಸ್ವಲ್ಪ ಹಾಲಾದರೂ......'

'ಬೇಡ ಹೋಗೋ, ಹಸಿವಿಲ್ಲಾಂದ್ರೆ ಹಾಲು ಸೇರುತ್ತ್ಯೆ'

ಅವನು ಹೊರಟು ಹೋದ.

ಅಂಚೆ ಪೇದೆ ದಿಲೀಪನಿಗಾಗಿ ಒಂದು ಕವರನ್ನು ತಲುಪಿಸಿ ಹೋದ. ಅದು ಅವನಿಗೆ ಪರಿಚಿತ ಅಕ್ಷರದಿಂದ ಕೂಡಿತ್ತು. ಹೇಮಳ ಕಾಗದವನ್ನು ಒಡೆದ ತಕ್ಷಣ, ಅವನ ಕಣ್ಣಿಗೆ ಕಾಣಿಸಿದುದು.'

"ನಾನು ಬದುಕಿನಲ್ಲಿ ಕೇವಲ ದುಃಖ-ಕಷ್ಟಗಳನ್ನು ಅನುಭವಿಸಲು ಎಂದೇ ಹುಟ್ಟಿದವಳು............ನೀವೆಂದಾದರೂ ನನ್ನನ್ನು ಆತ್ಮೀಯವಾಗಿ......"ಎಂದೇನೇನೋ ಇತ್ತು.

ದಿಲೀಪನಿಗೆ ಆ ಪತ್ರವನ್ನು ಮುಂದೆ ಓದಲಾಗಲಿಲ್ಲ. ಹರಿದು ಚೂರು ಚೂರು ಮಾಡಿ ಹೊರಗೆಸೆದ. ✿



ಬಹಳ ಕಾಲದ ನಂತರ ಗೆಳೆಯರಿಬ್ಬರು ಭೇಟಿಯಾದರು. ಹಳೆ ನೆನಪುಗಳನ್ನು ಮೆಲುಕು ಹಾಕುತ್ತಾ ಒಬ್ಬಾತ, "ಏನಪ್ಪಾ, ಹೇಗಿದ್ದಾಳೆ ನಿನ್ನ ಹೆಂಡತಿ?" ಎಂದು ಕೇಳಿದ. "ಹೇಗೊ ಏನೋ. ಕೆಲವು ತಿಂಗಳ ಹಿಂದೆ ನನಗೂ ಅವಳಿಗೂ ಜಗಳವಾಗಿ ಅವಾಚ್ಯವಾಗಿ ಬೈದೆ. ಆಗ ಮನೆ ಬಿಟ್ಟು ತವರು ಮನೆಗೆ ಹೋದವಳು ತಿರುಗಿ ಬಂದೇ ಇಲ್ಲ," ಎರಡನೆಯವ ಹೇಳಿದ. "ಅಯ್ಯೋ ಪಾಪ; ಹೀಗಾಯಿತೆ? ಅಂದ ಹಾಗೆ ನೀನು ಏನೆಂದು ಬೈದೆ?" ಮೊದಲನೆ ಮಿತ್ರ ಕಿವಿ ನಿಮಿರಿಸಿಕೊಂಡು ಕೇಳಿದ.

# ನಗೆಮಲ್ಲಿಗೆ

## ಏನೋ ಇದು !

ರಾಜು: ಪರೀಕ್ಷೆಯಲ್ಲಿ ಮೊದಲಿಗನಾಗಿ ಉತ್ತೀರ್ಣನಾದರೆ ಸೈಕಲ್ ಕೊಡಿಸುವೆನೆಂಬ ಅವನ ತಂದೆ ಹೇಳಿದುದು ಮಾಸ್ತರರಿಗೆ ಜ್ಞಾಪಕವಿತ್ತು

ರಾಜು ಉತ್ತಮ ಅಂಕಗಳನ್ನು ಪಡೆಯದೇ ಇದ್ದಾಗ ಅವರು, ಅವನನ್ನು ಕರೆದು,

'ಮಗು ನೀನು ಪಡೆದ ಅಂಕಗಳನ್ನು ನೋಡಿ ನಿನ್ನ ತಂದೆ ಬೈಸಿಕಲ್ಲನ್ನು ಕೊಡಿಸದೇ ಹೋಗುವವರಲ್ಲ! ಹೀಗೇಕೆ ಮಾಡಿದೆ ನೀನು?' ಎಂದು ಸಹಾನುಭೂತಿ ಪೂರ್ವಕವಾಗಿ ಕೇಳಿದರು.

ಆಗ ರಾಜು,

'ಏನು ಮಾಡಲಿ ಮೇಷ್ಟ್ರೇ, ಬೈಸಿಕಲ್ ಸವಾರಿ ಕಲಿಯುವುದರಲ್ಲಿಯೇ ಸಮಯ ತುಂಬಾ ಕಳೆಯುತ್ತಿತ್ತು; ಇನ್ನು ಓದುವದಕ್ಕೆಲ್ಲಿ ಸಮಯ?' ಎಂದುತ್ತರಿಸಿದ.

—ಜಯತೀರ್ಥ ಕೋಟಿ

## ಎಂಥ ರೋಗ ?

ರೋಗಿ: ನೋಡಿ ಡಾಕ್ಟರ್, ನನಗೆ ಈಗೀಗ ಮರೆವು ಹೆಚ್ಚಾಗುತ್ತಿದೆ. ಯಾರಾದ ರೊಡನೆ ಮಾತಾಡುತ್ತಿದ್ದರೆ ಅವರು ಮಾತು ಮುಗಿಸುವಷ್ಟರಲ್ಲೇ ಅವರು ಹೇಳಿದುದನ್ನು ಮರೆಯುವಷ್ಟು ನನ್ನ ಸ್ಥಿತಿ ಹದಗೆಟ್ಟಿದೆ. ದಯವಿಟ್ಟು ಏನಾದರೂ ಔಷಧಿ ಕೊಡಿ.

ಡಾಕ್ಟರ್ : ಎಷ್ಟು ಸಮಯದಿಂದ ಹೀಗಾಗುತ್ತಿದೆ?

ರೋಗಿ : ಏನು ಎಷ್ಟು ಸಮಯದಿಂದ ಹೀಗಾಗುತ್ತಿರುವುದು ?

-ಕೆ. ಗೋಪಾಲರಾವ್

## ವ್ಯಾಪಾರಿ ಬುದ್ಧಿ

ಆಶ: "ನಿಮ್ಮ ಸೌದೆ ಅಂಗಡಿ ಹೇಗಿದೆ?"

ಈಶ: "ಎಲ್ಲಾ ಬೆಂಕಿ ಬಿದ್ದು ಸುಟ್ಟು ಹೋಯಿತು.

ಆಶ: ಹಾಗಾದರೆ ಈಗ ಏನು ಮಾಡುತ್ತಿದ್ದೀರಿ?"

ಈಶ: "ಈಗ ಇದ್ದಲು ಅಂಗಡಿ ನಡೆಸುತ್ತಿದ್ದೀನಿ.

-ಎಂ. ರಂಗನರಸಿಂಹಯ್ಯ

## ಕಾಲ ಕೆಟ್ಟೋಯ್ತು

ಆಶ— (ಎಳ ನೀರನ್ನು ಕುಡಿಯುತ್ತಾ) ಏನ್ರಿ ಈ ನೀರು ಸ್ವಲ್ಪಾನೂ ರುಚಿ ಇಲ್ಲ ಏನೋ ಬಾಯಲ್ಲಿ ಒಂದು ಥರಾ ಆಗೊತ್ತಲ್ಲ

ಅಂಗಡಿಯಾತ—ಸ್ವಾಮಿ. ಏನು ಹೇಳಲಿ, ಕಾಲ ಕೆಟ್ಟೋಯ್ತು. ದೇವ್ರು ಜನರಿಂದ ಕಲಿತುಕೊಂಡ್ರು ಸ್ವಾಮಿ, ಕಲಬೆರಕೆ ಕ್ರಮಾನ.

-ಎಚ್ ಜಯಂತಿ ಪೆಟ್ಟಾರ್

## ನಿರಾಶೆ

ಕ್ಲಬ್ ನಿಂದ ಬಹಳ ಬೇಗ ಹಿಂತಿರುಗಿದ ಶ್ರೀಮತಿಯವರನ್ನು ನೋಡಿ ರಾಯರು ಕಾರಣವೇನೆಂದು ವಿಚಾರಿಸಿದರು. ಶ್ರೀಮತಿಯವರು, "ಏನು ಮಾಡೋಣ ಹೇಳಿ, ಎಲ್ಲ ಸದಸ್ಯೆಯರೂ ಬಂದಿದ್ದರಿಂದ ನಾವು ಯಾರ ಬಗ್ಗೆಯೂ ಮಾತನಾಡುವಂತಿರಲೇ ಇಲ್ಲ !"

-ವಿನೋಬಾ ಆರ್. ಕಿರಣ

## ಒಂದಕ್ಕೆ ಸಾರ್

"ನಿಮಗೆ ಮೂತ್ರ (ಒಂದಕ್ಕೆ) ಬರುವಾಗ ಒಂದೇ ಬೆರಳು ತೋರು" ಎಂದರು ಉಪಾಧ್ಯಾಯರು ಹೊಸದಾಗಿ ಸೇರಿದ ಒಬ್ಬ ಬಾಲಕನೊಂದಿಗೆ.

"ಹಾಗೆ ಬೆರಳು ತೋರಿಸಿದ್ರೆ ಮೂತ್ರ ಬರೋದು ಹೇಗೆ ನಿಂತು ಹೋಗುತ್ತೆ" ಎಂದು ಕೇಳಿದಾ ಬಾಲಕ.

—ನಂಗಲಿ ಎಂ. ಶಿವಾನಂದಂ

## ನನ್ನ ಮೇಜಲ್ಲ

ಕಾಫೀ ಹೌಸ್‌ನಲ್ಲಿ ಒಬ್ಬ ಗಿರಾಕಿ ಒಬ್ಬ ಮಾಣಿಯನ್ನು ಕರೆದು, "ನೋಡಯ್ಯಾ ಹೊರಗೆ ಮಳೆ ಬೀಳುತ್ತಿರುವುದೇ ?"

ಮಾಣಿ "ಕ್ಷಮಿಸಿ ಸಾರ್, ಇದು ನನ್ನ ಮೇಜಲ್ಲ."

—ಮುಳಲಕೆರೆ ಶ್ರೀಧರ

## ಎರಡು ಸುಳ್ಳು

ದೀಪಾವಳಿ ಭಾವ, ಅಕ್ಕ ಮತ್ತು ರವಿ ಬಂದಿದ್ದರು. ನಮ್ಮಕ್ಕನ ಮಗ ರವಿ

ಸಾಕಷ್ಟು ತುಂಟನಿದ್ದಾನೆ. ವಯಸ್ಸು ಹತ್ತು.

ಆರತಿ ಮಾಡಿಸಿಕೊಂಡು ಭಾವ ಅಕ್ಕನಿಗೆ ಹಣ ಇಟ್ಟ. ಅದನ್ನು ನೋಡಿದ ರವಿ. "ಅಮ್ಮನಿಗೆ ಯಾಕೆ ಹಣ? ನನಗೂ ಬೇಕು" ಎಂದು ಹಟ ಹಿಡಿದ.

ಎಷ್ಟು ಸಮಾಧಾನ ಮಾಡಿದರೂ ಸುಮ್ಮನಾಗಲಿಲ್ಲ.

"ರವಿ ಎರಡು ಸುಳ್ಳನ್ನು ಹೇಳ್ಬಿಡು. ಎರಡು ರೂಪಾಯಿ ಕೊಡ್ತೀನಿ" ಎಂದೆ. 'ದೋ ಜೂಟ್' ದ ನೆನಪು.

"ಒಂದು ಸುಳ್ಳು ಹೇಳಿದ್ಮೇಲೆ ಒಂದು ರೂಪಾಯಿ ಕೊಡ್ಬೇಕು" ಎಂದು ಅಲ್ಲಿಂದ ಹೊರಟು ಹೋದ.

ಹೊರಗೆ ಭಾವಿಯಲ್ಲಿ ಏನೋ ಸಪ್ಪಳವಾಗಿ ಹೊರಗೆ ಓಡಿದೆವು. ರವಿ ಬಾವಿಯಲ್ಲಿ ಬಗ್ಗಿ ನೋಡುತ್ತಿದ್ದ.

"ಏನಾಯ್ತೋ!" ಎಂದು ಆಶ್ಚರ್ಯದಿಂದ ಕೇಳಿದೆವು.

"ಅಪ್ಪಾ, ಇದೇ ಈಗ ಒಂದು ಇರುವೆ ಬಿತ್ತು" ಎಂದ. ಎಲ್ಲರೂ ನಕ್ಕರು. ಒಂದು ರೂಪಾಯಿಯನ್ನು ಕೊಟ್ಟಿದ್ದಾಯ್ತು.

"ಅಯ್ಯಯ್ಯೋ ಎರಡು ರೂಪಾಯಿ ಕೊಟ್ಟಿದ್ದೀರಾ ನೀವು!" ಎಂದ. ಭಾವ ಎದ್ದು ಮುಷ್ಟಿ ಬಿಡಿಸಿ ನೋಡಿದ. ಮೋಸ ಹೋಗಿದ್ದರು. ರವಿ ಎರಡು ಸುಳ್ಳನ್ನು ಹೇಳಿ ಹಣ ಗಿಟ್ಟಿಸಿದ

—ಶಂಕರ ವಿ. ಬಣಕಾರ

## ನನಗೇ ತಾನೇ

ಲಾಯರ್ ಲಕ್ಷ್ಮಣರಾಯರು, ತಮ್ಮ ಪಕ್ಷಗಾರನ ಮೇಲೆ ಬಂದಿದ್ದ ಕಳುವಿನ ಅಪಾದನೆಯ ಕೇಸಿನಲ್ಲಿ ಬಹಳ ದಕ್ಷತೆಯಿಂದ ವಾದ ಮಾಡಿ, ಆ ಒಡವೆಗಳು ಹಾಗೂ ಬಟ್ಟೆಬರೆಗಳನ್ನು ಅವನು ಕದಿಯಲೇ ಇಲ್ಲವೆಂದು ಸಾಧಿಸಿದರು.

ಜಡ್ಜಿಗಳೂ ಇವರ ವಾದದ ಮೋಡಿಗೆ ಬಿದ್ದು, ಚೋರ ನಿರಪರಾಧಿ ಎಂದು ತೀರ್ಪಿತ್ತರು.

ಆದರೆ, ಚೋರ, ಪೆದ್ದ! ಜಡ್ಜಿಗಳು ತೀರ್ಪು ಓದಿದ ತಕ್ಷಣವೇ. "ಅಂಗಾದ್ರೆ, ಸ್ವಾಮೋರೆ, ಆ ಒಡವೆಗಳು, ಬಟ್ಟೆಬರೆ ಎಲ್ಲಾ ನಾನೇ ಇಟ್ಕೊಂಡ್ಬಿಡಬಹುದಾ?" ಎಂದು ಕೇಳಿಬಿಡುವುದೇ?

—ಸಿ. ಮಾಲಿನಿ ಸಾಮಾನಶಾಹ್

## ತಪ್ಪು

ದೃಷ್ಟಿದೋಷವಿದ್ದ ಸಿದ್ಧ ಒಮ್ಮೆ ಕಣ್ಣು ಪರೀಕ್ಷೆ ಮಾಡಿಸಿಕೊಳ್ಳಲು ಹೋಗಿದ್ದ:

ಡಾಕ್ಟರ್: "ಮಿಸ್ಟರ್ ಸಿದ್ಧ, ಎದುರು ಗೋಡೆಯ ಮೇಲಿರುವ ಪರದಲ್ಲಿ ನೀವು ಕಾಣುವ ಸಂಗತಿಗಳನ್ನು ತಿಳಿಸಿರಿ."

ಸಿದ್ಧ ಪರದತ್ತ ನೋಡಿ ಹೆಮ್ಮೆಯಿಂದ ಹೇಳಿದ: "ಅದು ಸಂಖ್ಯೆ ೧೮."

ಡಾಕ್ಟರ್: "ತಪ್ಪು! ಅದು ಚಿತ್ರನಟ ಅಮಿತಾಬ್ ಬಚ್ಚನ್ ತಾರೆ ಟಿನ್‌ಟಿನ್‌ಳೊಂದಿಗೆ ನಿಂತಿರುವ ಚಿತ್ರ" ಎಂದುಸುರಿದ.

—ಕುಮಾರ ಅರಳೀಮಠ

## ಸೇವಾರ್ಹತೆ

ಒಬ್ಬ ಜಿಪುಣನಿಗೆ ಒಬ್ಬ ಮನೆಯ ನೌಕರನ ಅವಶ್ಯಕತೆಯಿದ್ದಿತು. ಆದರೆ ಆ ನೌಕರರ ದುಂದು ವೆಚ್ಚದಿಂದ ಆತ ಬೇಸರಗೊಂಡಿದ್ದ. ಆದುದರಿಂದ ಆತ ನೌಕರಿಗೋಸ್ಕರ ಆಗಮಿಸಿದ್ದ ಒಬ್ಬ ಯುವಕನನ್ನು ಕೇಳಿದ, "ನೀನು ಅಧಿಕ ವೆಚ್ಚ ಮಾಡುವದಿಲ್ಲ ಎನ್ನುವುದಕ್ಕೆ ಆಧಾರ ವಿದೆಯೆ?"

ಯುವಕ ನುಡಿದ, "ಆ ಕಾರಣಕ್ಕೋಸ್ಕರವೆ ನಾನು ಹಿಂದಿನ ಕೆಲಸ ಬಿಡಬೇಕಾಯಿತು.

"ಅದು ಹೇಗೆ?" ಸೇಠ್ ಆಶ್ಚರ್ಯದಿಂದ ಕೇಳಿದ.

ಆತ ನುಡಿದ, "ನನ್ನ ಬಟ್ಟೆಗಳನ್ನುಳಿಸಲು ನಾನು ಮಾಲೀಕನ ಬಟ್ಟೆಗಳನ್ನುಪಯೋಗಿಸುತ್ತಿದ್ದೆ."

—ಎನ್. ಕೆ. ನರಸಿಂಹಮೂರ್ತಿ

# ಹಳ್ಳಿಯ ದಾರಿಯಲ್ಲಿ

ಎನ್. ಎಸ್. ಚಿದಂಬರರಾವ್

ಅರ್ಧ ದಾರಿಯಲ್ಲೇ ಸುತ್ತಲೂ ಕವಿದ ಮೋಡಗಳನ್ನು ಕಂಡಾಗ ಇವಳ ಗಮನವನ್ನು ಸೆಳೆದ— "ಇವತ್ತು ನಾವು ಆ ಹಳ್ಳಿ ತಲುಪೋದು ಸಾಧ್ಯವೇ?" ಆಕೆ ನನ್ನ ಪ್ರಶ್ನೆಯಿಂದಲೇ ಗಾಬರಿಯಾಗಿ ನನ್ನ ಮುಖ ನೋಡತೊಡಗಿದಳು. ಬಸ್ಸಿನಲ್ಲಿದ್ದ ಹಲವಾರು ಮಂದಿ ದೂರದಲ್ಲಿ ಕಾಣುತ್ತಿದ್ದ ಮೋಡಗಳನ್ನು ಕಂಡು, ಎಲ್ಲೆಲ್ಲಿ ಎಷ್ಟೆಷ್ಟು ಮಳೆಯಾಗುತ್ತಿರಬಹುದೆಂದು ಅಂದಾಜ ಮಾಡುತ್ತಿದ್ದರು. "ಕಂಚೀಮಲ್ಡೀ ತಪಪ ಬರ್ಜರಿ ಮಳೆ ಬಿದ್ದೈತಿ. ಆ ಮೋಡ ನೋಡಿದ್ರೋ ಕಾಣಾಕಿಲ್ವಾ?" ಎಂದು ಒಬ್ಬ ಹಳ್ಳಿಯವ ಅಡಿಕೆಲೆಯನ್ನು ಬಸ್ಸಿನ ಕಿಟಕಿಯ ಆಚೆ ಬಲವಾಗಿ ಉಗಿಯುತ್ತಾ ಹೇಳಿದಾಗ ನನಗೆ ತೀವ್ರ ಗಾಬರಿಯಾಯಿತು. ಬಸ್ ವೇಗವಾಗಿ ಮುಂದುವರಿಯುತ್ತಿತ್ತು, ಅಲ್ಲೇನೂ ಮಳೆ-ಪ್ರಾರಂಭವಾಗಿರಲಿಲ್ಲ. ಆದರೆ ಆ ಹಳ್ಳಿ ತಲುಪಲು, ಮುಂದೆ ಬಸ್ ನಿಲ್ಲುವ ಜಾಗದಲ್ಲಿಳಿದರೆ, ಎರಡು ಮೈಲಿ ಹೀಕಬೇಕು. ಹೂಂ. ಅದನ್ನು ಮಾಡಬಹುದು—ಆದರೆ ದಾರಿಯಲ್ಲಿ ಹೆಬ್ಬಾವಿನಂತೆ ಮಲಗಿರುವ ಆ ದರಿದ್ರ ಹಳ್ಳ? ಅಲ್ಲಿಂದ ಉತ್ತರಕ್ಕೆ ಎಂಟು ಮೈಲಿ ದೂರದಲ್ಲಿದ್ದ ಕಂಚೀ ಮರಡಿಯ ಮೇಲೆ ಮಳೆ ಬಿದ್ದರೆ, ಈ ಹಳ್ಳ ತುಂಬಿ ಹರಿಯುವುದನ್ನು ನಾನೇ ಅದೆಷ್ಟೋ ಬಾರಿ ಕಂಡಿಲ್ಲವೇ? ಅವಳು ಕಾತರಳಾಗಿ ನನ್ನನ್ನೇ ನೋಡುತ್ತಿದ್ದ ಹಾಗಿತ್ತು. ಗಾಡಿಯನ್ನು ಬಸ್ ಬಳಿ ಕಳಿಸಬೇಕೆಂದು ಮೊದಲೇ ಪತ್ರವೇನೋ ಹಾಕಿದ್ದೆ. ಆದರೆ ಹೀಲೆ ಮರಡಿಯಲ್ಲಿ ಸುರಿದ ಮಳೆಯ ಬೆಸೆಯಿಂದ ಗಾಡಿ ಬಾರದೇ ಹಾಗೇ ನಿಂತರೆ? ಪಾಪ ಅವರು ತಾನೇ ಏನು ಮಾಡಿಯಾರು?

ಅಳೆದೂ ಹೊಯ್ದೂ ಮಾಡುವ ಹೊತ್ತಿಗೆ ಬಸ್ ನಿಂತೇ ಬಿಟ್ಟಿತು ಅಲ್ಲಿ ಇಳಿದವರೇ ನಾವಿಬ್ಬರು—ನಾನು ಮತ್ತು ಇವಳು. ಹತ್ತುವ ಮಹನೀಯರು ಯಾರೂ ಇಲ್ಲದುದರಿಂದ ನಮ್ಮನ್ನು ಕೆಳಗಿಳಿಸಿದ ಬಸ್ ನಡೆದೇ ಬಿಟ್ಟಿತು. ನೀನೇ ಎನ್ನುವವರಿಲ್ಲದ ಆ ಸ್ಥಳದಿಂದ ದಕ್ಷಿಣಕ್ಕೆ ಎರಡು ಮೈಲಿ ನಡೆದರೆ ಆ ಹಳ್ಳಿ... ನನಗೆ ಆ ದಾರಿ ಹಳೆಯದಾದರೂ ನನ್ನವಳಿಗೆ ಹೊಚ್ಚ ಹೊಸದು. ಅಲ್ಲಿಯೇ ನಿಂತು ಮಾಡುವುದಾದರೂ ಏನನ್ನು? ಮೋಡಗಳು ದೂರದಲ್ಲಿವೆ. ಆ ಹಳ್ಳಿಯ ಮನುಷ್ಯ ಹೇಳಿದಂತೆ ಕಂಚೀ ಮರಡಿಯ ಮೇಲೆ ಅಗಾಧ ಮಳೆ ಸುರಿಯುತ್ತಿರುವುದು ಕಾಣಿಸಿತು. "ಬಾ... ಬೇಗ ಬೇಗ ಹೆಜ್ಜೆ ಹಾಕಿ ಬಿಡೋಣ... ಆ ಮೇಲೆ ಮಳೆ ಇಲ್ಲಿಗೂ ಬಂತು ಅಂದರೆ ನಮಗೆ ನಿಂತ್ಕೊಳ್ಳೋಕೆ ಗೇಣಗಲ ಜಾಗ ಸಹ ಇಲ್ಲಿಲ್ಲ..." ಎಂದು ಅವಳ ಕೈ ಹಿಡಿದು ಮುಂದೆ ಸಾಗಿದೆ. ದಾರಿ ಸುಮಾರಾಗಿ ಚೆನ್ನಾಗಿಯೇ ಇತ್ತು. ಮಳೆ ಹನಿಗಳು ಬಿದ್ದಿರಲಿಲ್ಲವಾದುದರಿಂದ ಅಷ್ಟೇನೂ ಕೆಸರಾಗಿರಲಿಲ್ಲ ನಾಲ್ಕು ಹನಿ ಉದುರಿದರೂ ಸಾಕು, ಕಾಲು ಕುಸಿಯುವಷ್ಟು ಕೆಸರಾಗುವಂತಹ ಎರೇ ನೆಲ ಆ ದಾರಿ! ಇಬ್ಬರೂ ಏನೇನೋ ಮಾತನಾಡುತ್ತ ಸಾಗಿದೆವು. "ಅಲ್ರೀ, ಆ ಹಳ್ಳೀವರೆಗೂ ಯಾವ ಬಸ್ಸೂ ಹೋಗೋದೇ ಇಲ್ವ?"— ಎಂದು ಇವಳು ಕೇಳಿದಳು. ಹಾಗೆ ಯಾವುದಾದರೂ ನೇರವಾದ ವಾಹನ ಇದ್ದಿದ್ದರೆ ಈ ಫಜೀತಿ ಎಲ್ಲ ಯಾಕೆ ಬೇಕಿತ್ತು?

"ಇದು ಅಪ್ಪಟ ಏರೇ ನೆಲ ಚಿನ್ನಾ, ಇಲ್ಲಿ ಬಸ್ ಓಡಿಸೋಕೆ ಸಾಧ್ಯವೇ ಇಲ್ಲ ಅಲ್ದೆ ಆ ಹಾಳು ಹಳ್ಳ ಬೇರೆ ಇದೆಯಲ್ಲ- ಅದು ಮಳೆ ಗಾಲ್ದಲ್ಲಿ ಯಾವ ಬಸ್ಸನ್ನೂ ಮುಂದಕ್ಕೆ ಬಿಡೋಲ್ಲ..." ಎನ್ನುವಾಗಲೇ ಹೆಜ್ಜೆ ಚುರುಕು ಮಾಡಬೇಕೆನ್ನಿಸಿತು. ಹಳ್ಳಿಗೆ ಬರಾಬರಿ ಎರಡು ಮೈಲಿ...ಈ ಹಳ್ಳ ಒಂದನೇ ಮೈಲಿಯು ಕಲ್ಲಿನ ಪಕ್ಕದಲ್ಲೇ ಹರಿಯುತ್ತಿತ್ತು. ಆ ಹಳ್ಳಿಗೆ ಯಾವ ವಾಹನ ಸೌಕರ್ಯ ಇಲ್ಲದಿದ್ದರೂ ಮೂರು ಕಲ್ಲುಗಳನ್ನು ನಿಲ್ಲಿಸಿದ್ದರು ಸರ್ಕಾರದವರು. ಆ ಬಸ್ ಸ್ಟಾಪಿನ ಹತ್ತಿರ ಸೊನ್ನೆ ನಂಬರಿನ ಕಲ್ಲಿತ್ತು. ಹಳ್ಳದ ದಂಡೆಯ ಮೇಲೆ ಒಂದನೇ ಮೈಲುಗಲ್ಲು ಹಾಗೂ ಹಳ್ಳಿಯ ಮುಂದುಗಡೆ ಎರಡನೇ ಮೈಲುಗಲ್ಲು...ಅಲ್ಲಿಂದ ಮುಂದೆ ಆ ದಾರಿ ಅಡಗಿ ಹೋಗಿತ್ತು... ಹಳ್ಳಿಯ ಸುತ್ತಲೂ ಹೊಲಗಳು.

ನನ್ನ ಮತ್ತು ಇವಳ ವಿವಾಹವಾದುದರ ಕುರುಹಾಗಿ ಆ ಹಳ್ಳಿಗೆ ಹೊರಟಿದ್ದೆವು. ಅಲ್ಲಿಯೇ ನಮ್ಮ ಮನೆದೇವರ ದೇವಸ್ಥಾನವಿರುವುದು-ಮನೆ ದೇವರ ದರ್ಶನ ಸಿಕ್ಕಬೇಕಾದರೆ ಇಷ್ಟೆಲ್ಲ ಕಷ್ಟಪಡಲೇಬೇಕೆಂಬ ಒಣ ವೇದಾಂತವನ್ನೂ ಇವಳಿಗೆ ಉಪದೇಶಿಸಿದೆ. ಪಾಪ, ಹೊಸದಾಗಿ ನಮ್ಮ ಮನೆಗೆ ಬಂದವಳು. ಮನೆ ದೇವರನ್ನೇ ನೆನೆಯುತ್ತಾ ನನ್ನ ಜೊತೆ ಸಾಗುತ್ತಿದ್ದಳು. 'ಗಡಗಡ ಗುಡುಗುಡು' ಎಂಬ ಶಬ್ದವೂ ದೂರದಿಂದ ತೇಲಿ ಬರುತ್ತಿತ್ತು. ಕಳೆದ ವಾರ ಯಾರೋ ಒಬ್ಬಾತ ಅದೇ ದಾರಿಯಲ್ಲೇ ಹೀಗೆ ಸಾಗುತ್ತಿದ್ದಾಗ ಸಿಡಿಲು ಬಡಿದು ಸತ್ತೇ ಹೋದನೆಂಬ ವಿಚಾರವನ್ನು ಪತ್ರಿಕೆಗಳಲ್ಲಿ ನೋಡಿದ್ದ ನೆನಪಾಯಿತು. ಅಲ್ಲಿಲ್ಲಿ ದಟ್ಟವಾಗಿ ಬೆಳೆದ ಈಚಲ ಪೊದೆಗಳಲ್ಲಿ ಎರಡು ಕರಡಿಗಳು ಸೇರಿಕೊಂಡಿವೆ ಎಂಬ ವರ್ತಮಾನವೂ ಕಿವಿಗೆ ಬಡಿದಿತ್ತು... ಇದೆಲ್ಲ ಯೋಚಿಸಿಕೊಂಡೇ ಪೂಜಾರ್ರು ತಿಮ್ಮರಾಯಪ್ಪನಿಗೆ ನಮಗೊಂದು ಗಾಡಿ ಕಳಿಸುವಂತೆ ಕಳೆದ ವಾರವೇ ಪತ್ರ ಹಾಕಿದ್ದೆ. ಈ ಹಾಳು ಹಳ್ಳಿಗೆ ಪೋಸ್ಟ್ ಸಹ ದಿನವೂ ತಲುಪುವುದೋ



ಇಲ್ಲವೋ ಗಾಡಿಯಂತೂ ಬಂದಿರಲಿಲ್ಲ.

ಮಳೆಯು ಅಷ್ಟೊಂದು ಹೆದರಿಸಿದರೂ ಹನಿಗಳೇನೂ ಬೀಳಲಿಲ್ಲ......ಬೇಗ ಬೇಗ ಹೆಜ್ಜೆ ಹಾಕುತ್ತಾ ನಡೆದಿದ್ದೆವು. ನನ್ನ ಕೈಯಲ್ಲೊಂದು ಬ್ರೀಫ್‌ಕೇಸ್ ಇತ್ತು. ಆ ರಾತ್ರಿ ಹಳ್ಳಿಯಲ್ಲೇ ಉಳಿಯಬೇಕಾಗಬಹುದಾದ್ದರಿಂದ ಎರಡು ಜಮಖಾನೆ, ಎರಡು ಬೆಡ್‌ಷೀಟ್‌ಗಳನ್ನು ತೆಗೆದುಕೊಂಡಿದ್ದೆ, ದೇವರಿಗೆ ಹಣ್ಣು ಕಾಯಿ ಹೂವು...ಇತ್ಯಾದಿ...ಚಿತ್ರದುರ್ಗದಲ್ಲಿ ಈ ಮಳೆಯ ಸೂಚನೆ ಸಿಕ್ಕಿದ್ದರೆ ಆ ದಿನ ನಾವು ಹೊರಡುತ್ತಲೇ ಇರಲಿಲ್ಲ. ಈಗ ಮಾಡುವುದೇನು? ಬೇಗ ಬೇಗ ಸಾಗಬೇಕು. ನಾವು ಆ ಒಂದನೇ ಮೈಲುಗಲ್ಲನ್ನು ದಾಟಿದರೆ ನಮ್ಮ ಗುರಿ ನಿಶ್ಚಿತ. ಹಳ್ಳ ಬರದಿದ್ದರೆ ಚಿಂತೆಯಿಲ್ಲ. ಒಂದು ವೇಳೆ ಹಳ್ಳದಲ್ಲ ಸೆಳೆವು ಬಂದುಬಿಟ್ಟಿದ್ದರೆ ಇಡೀ ರಾತ್ರಿಯೆಲ್ಲ ದಂಡೆಯ ಮೇಲೇ ಕಳೆಯಬೇಕು, ಕೈಗಡಿಯಾರ ನೋಡಿಕೊಂಡೆ. ಮಧ್ಯಾಹ್ನ ಮೂರು ಗಂಟೆ! ಪರವಾಗಿಲ್ಲ. ಹಳ್ಳ ಬಂದಿದ್ದರೂ ಹಿಂದಕ್ಕೆ ಬಸ್ ಸ್ಟ್ಯಾಂಡಿನವರೆಗೆ ಹೋಗಿ ವಾಪಸ್ ಆಗಿಬಿಡಬಹುದು. "ಬೇಗ ಬಾ ಚಿನ್ನ, ಅಕಸ್ಮಾತ್ ಹಳ್ಳ ಬಂದಿದ್ರೆ ಹಿಂದಕ್ಕಾದ್ರೂ ಹೋಗೋಣ. ಸಾಯಂಕಾಲ ಆರುಗಂಟೆಯ ಬಸ್‌ಗಾದ್ರೂ ದುರ್ಗಕ್ಕೆ ಹೋಗ್ಬಹುದು," ಎಂದು ಅವಳನ್ನು ಅವಸರಪಡಿಸಿದೆ. ಅವಳೂ ಪಾಪ, ಏದುಸಿರು ಬಿಡುತ್ತಾ ನಡೆಯುತ್ತಿದ್ದವಳು. "ರೀ ನನ್ಕೈಲಾಗೋಲ್ಲರೀ...... ನೀವೇ ಬ್ಯಾಗ ಹೋಗಿ ನೋಡ್ರಿ......ಹಳ್ಳ ಬರ್‍ದೇ ಇದ್ರೇ ಅಲ್ಲೇ ಇರಿ ಇಲ್ಲಾಂದ್ರೆ ವಾಪಸ್ ಬಂದು ಬಿಡಿ," ಎಂದಳು.

ನಾವು ಅರ್ಧ ಮೈಲು ಮಾತ್ರ ನಡದಿದ್ದೆವು. ಇನ್ನು ಅರ್ಧ ಮೈಲಿಯ ಆಚೆಗಿದೆ ಆ ಹಳ್ಳ. ಇವಳ ಸಲಹೆಯಂತೆ ನಾನೇಕೆ ಮಾಡಬಾರದು, ಹೌದು, ಒಂದು ವೇಳೆ ಹಳ್ಳ ಈ ವೇಳೆಗೆ ತುಂಬಿ ಹರಿಯುತ್ತಿದ್ದರೆ ನಾನೇ ಬೇಗ ವಾಪಸ್ ಬಂದುಬಿಡಬೇಕು. ಇವಳು ಮತ್ತಷ್ಟು ನಡೆಯುವ ಶ್ರಮವಾದರೂ ತಪ್ಪಬಹುದು ಎಂದುಕೊಂಡವನೇ ಬೇಗ ಬೇಗ ಹೆಜ್ಜೆಹಾಕಿದೆ. ಅವಳೂ ಬೇಗ ಬೇಗ ಹಿಂಬಾಲಿಸುತ್ತಿದ್ದರೂ ನಮ್ಮಿಬ್ಬರ ಅಂತರ ಇಪ್ಪತ್ತು ಮಾರಿಗಿಂತ ಹೆಚ್ಚಾಗಿಯೇ ಇತ್ತು. ಅಷ್ಟರಲ್ಲಿ ಕಣ್ಣು ಕೋರೈಸುವಂಥ ಕೋಲ್ಮಿಂಚು ನಮ್ಮ ಎದುರಿಗೆ ಕಾಣುತ್ತಿದ್ದ ಮೋಡಗಳಲ್ಲಿ ಹೊಳೆದು, ಕ್ಷಣ ಹೊತ್ತಿನಲ್ಲೇ 'ಛಟ್ ಛಟಲ್' ಎಂಬ ಸಿಡಿಲಿನ ಅಬ್ಬರವೂ ಕೇಳಿಸಿತು. ಎಲ್ಲೋ ದೂರದಲ್ಲಿ ಎರಗಿದ ಸಿಡಿಲಿಗೇ ಬೆಚ್ಚುವಂತಾಯಿತು. ಅವಳು ಎಷ್ಟು ಹೆದರಿಕೊಂಡಳೋ ಎಂಬ ಕಾತುರ. ಒಂದು ನಿಮಿಷ ಅವಳು ಕುಳಿತೇಬಿಟ್ಟಿದ್ದಳು. ನಾನು ಹಿಂದಿರುಗಿ ಅವಳ ಬಳಿ ಹೋಗಬೇಕೆನ್ನುವಷ್ಟರಲ್ಲೇ ಅವಳೇ ಮೇಲೆದ್ದು ನಿಂತು, "ಬ್ಯಾಗ ಹೋಗ್ಬಾರ್‍ದೇ" ಎಂದು ಕೂಗಿದ್ದು ಕೇಳಿಸಿ ಸಮಾಧಾನವಾಯಿತು. ಮತ್ತೆ ಮುಂದೆ ಮುಂದೆ ಹೆಜ್ಜೆ ಹಾಕತೊಡಗಿದೆ.

ಅಂತೂ ಹತ್ತು ನಿಮಿಷಗಳಲ್ಲೇ ಒಂದನೇ ಮೈಲಿಯ ಕಲ್ಲು ಕಂಡಿತು. ಆತುರದಿಂದ ಮುನ್ನುಗ್ಗಿ ನೋಡಿದೆ. ಸದ್ಯ ಅದೃಷ್ಟ ಚನ್ನಾಗಿದೆ ಎನ್ನಿಸಿತು. ಹಳ್ಳದಲ್ಲಿ ಪಾದ ಮುಳುಗುವಷ್ಟು ನೀರು ಹರಿಯಲು ಆಗ ತಾನೇ ಪ್ರಾರಂಭವಾಗಿತ್ತು. ಕಂಚೀ ಮರಡಿಯ ಮೇಲೆ ಬಿದ್ದ ನೀರೆಲ್ಲ ಒಟ್ಟಾಗಿ ಸೇರಿ ಈ ದಾರಿಯ ವರೆಗೂ ಬರಲು ಸಾಕಷ್ಟು ಸಮಯವೇ ಬೇಕಲ್ಲ. ನಮ್ಮ ಹಣೆಬರಹ ಚೆನ್ನಾಗಿತ್ತು. ಹಿಂತಿರುಗಿ ನೋಡಿದೆ. ಇವಳೂ ಹತ್ತಿರ ಬರುತ್ತಿದ್ದುದು ಕಾಣಿಸಿತು. "ಬೇಗ ಬಾ, ಹಳ್ಳ ಇನ್ನೂ ಬಂದಿಲ್ಲ. ದೂರ ಇದೆ. ಎನ್ನುತ್ತಾ ಹಳ್ಳದಲ್ಲಿ ಇಳಿದೆ. ಪಾದ ಮಾತ್ರ ಮುಳುಗಿತು. ಅಂತೂ ನೀರು ಚೆನ್ನಾಗಿ, ವೇಗವಾಗಿ ಹರಿಯುತ್ತಿತ್ತು. ಸುಮಾರು ಇಪ್ಪತ್ತೈದು ಮೂವತ್ತು ಅಡಿ ಪಾತ್ರದ ಹಳ್ಳವಿರಬಹುದು. ಹೆಜ್ಜೆಗಳನ್ನೆತ್ತಿಡುತ್ತಾ ಆಚೆಯ ದಡದ ಸಮೀಪ ಹೋಗುತ್ತಿದ್ದ ಹಾಗೇ ಸಪ್ಪಳ ವೇಗವಾಗಿ ಕೇಳಿಸಿತು. ಇವಳು ಎಲ್ಲಿ ಇರಬಹುದೆಂದು ತಿರುಗಿ ನೋಡಿದಾಗ ನನ್ನ ಎದೆ ಒಡೆದಂತಾಯಿತು. ಹಳ್ಳದ ಪಾತ್ರ ನೀರಿನಿಂದ ತುಂಬಿ ಹೊರಸೂಸುತ್ತಾ ಭೋರ್ಗರೆಯುವ ಶಬ್ದ; ನನ್ನವಳು ಆಚೆಯ ದಡದಲ್ಲಿ ಒಂದನೇ ಮೈಲಿಯ

ಕಲ್ಲಿನ ಹತ್ತಿರ ನಿಂತುಬಿಟ್ಟಳು.

ನಾನು ಈ ಬದಿಯಲ್ಲಿ, ಅವಳು ಆ ದಡದಲ್ಲಿ. ಮಧ್ಯೆ ಭಾರೀ ಹಳ್ಳ ನೊರೆನೊರೆಯಾಗಿ ಹರಿಯುತ್ತಿತ್ತು. "ಮುಂದಕ್ಕೆ ಬರಬೇಡ ಚಿನ್ನಾ......ಅಲ್ಲೇ ಇರು" ಎಂದು ಗಟ್ಟಿಯಾಗಿ ಕೂಗಿದೆ. ಅದು ನನಗೇ ಕೇಳಿಸಲಿಲ್ಲ. ಅಂತಹ ನೀರಿನ ಮೊರೆತ. ಅವಳಿಗೆ ಹೇಗೆ ಕೇಳಿಸಬೇಕು. ಅವಳೂ ಎರಡೂ ಕೈಗಳನ್ನೆತ್ತಿ ಏನೋ ಗಟ್ಟಿಯಾಗಿ ಹೇಳುವಂತೆ ಕಾಣುತ್ತಿದ್ದರೂ ಕೇಳಿಸುತ್ತಿಲ್ಲ. ಥೂ, ನಾನೆಂತಹ ಕೆಲಸ ಮಾಡಿಬಿಟ್ಟೆ. ಆತುರವಾಗಿ ಈಚೆಗೆ ಯಾಕೆ ಬಂದೆ? ಅವಳ ಜೊತೆಗೇ ಬರಬಹುದಾಗಿತ್ತು. ಅಥವಾ ಹಳ್ಳ ಹರಿದರೂ ಮೊದಲೇ ಮಾತಾಡಿಕೊಂಡಂತೆ ಹಿಂದಕ್ಕೆ ಹೋಗಬಹುದಾಗಿತ್ತು. ಈ ಹಳ್ಳ ಇದೇ ತಾನೇ ತುಂಬಿ ಹರಿಯಲು ಪ್ರಾರಂಭ ಮಾಡಿದೆ. ಕಂಚೀಮರಡಿಯ ಮೇಲೆ ಆ ದಟ್ಟವಾದ ಮೋಡಗಳು ಇನ್ನೂ ತುಯ್ಯುತ್ತಾ ಮಳೆಗರೆಯುತ್ತಿವೆ. ಹಳ್ಳ ಇಳಿಯಬೇಕಾದರೆ ಕೊನೇ ಪಕ್ಷ ಒಂದು ದಿನವಾದರೂ ಬೇಕಾಗಬಹುದು. ಆ ಯೋಚನೆಯಿಂದಲೇ ನನಗೆ ದಿಗ್ಭ್ರಮೆಯಾಯ್ತು. ಅವಳ ಗತಿ ಏನು? ಇಡೀ ರಾತ್ರಿಯೆಲ್ಲ, ಅವಳು ಆಚೆಗೆ ನಾನು ಈಚೆಗೆ...ನಿರ್ಜನ ಪ್ರದೇಶ...ಕರಡಿಗಳ ಕಾಟ ಬೇರೆ...ಅಲ್ಲದೆ ರಾತ್ರಿಯ ಕತ್ತಲೆ... ಊಟ...ವಸತಿ... ಛೆ... ಮನೆದೇವರ ದರ್ಶನಕ್ಕಾಗಿ ಬಂದ ನಮಗೆ ಈ ವಿಪತ್ತೇ...ಇದರ ಬದಲು ನಾವಿಬ್ಬರೂ ಕೂಡಿ ಈ ಹಳ್ಳದ ಮಧ್ಯೆ ಬರುವಾಗಲೇ ಪ್ರವಾಹ ಬಂದು ಇಬ್ಬರನ್ನೂ ಕೊಚ್ಚಿಕೊಂಡು ಹೋಗಿದ್ದರೂ ಚಿಂತೆಯಿರಲಿಲ್ಲ.

ಅವಳನ್ನೇ ಎವೆಯಿಕ್ಕದೆ ನೋಡತೊಡಗಿದೆ. ಅವಳು ಗಟ್ಟಿಯಾಗಿ ಅಳುತ್ತಿರುವಂತೆ ಕಂಡಿತು. ಅವಳನ್ನು ಬಸ್‌ಸ್ಟಾಪಿಗೆ ಹೋಗುವಂತೆ ಸನ್ನೆ ಮಾಡಲೆ? ಅವಳಾದರೂ ಸಂಜೆಯ ಬಸ್ಸಿನಲ್ಲಿ ದುರ್ಗಕ್ಕೆ ಹೋಗಲಿ. ನಾನು ಹೇಗೆಯೋ ಹಳ್ಳಿಯನ್ನು ಸೇರಬಹುದು-... ಮರುಗಳಿಗೆಯೇ ಎಲ್ಲ ಹಣವೂ ನನ್ನ ಬಳಿಯೇ ಇರುವುದೂ ನೆನಪಾಯಿತು. ಒಂದು ವೇಳೆ ಹಣವಿದ್ದರೂ ಅವಳು ಏಕಾಂಗಿಯಾಗಿ ಬಸ್ ಸ್ಟಾಪ್ ತಲುಪಲು ಆದೀತೆ? ಅಲ್ಲಿ ಬಸ್ ಬರುವವರೆಗೂ ಒಬ್ಬಳೇ ಕಾಯಬೇಕು. ಆ ದರಿದ್ರ ಬಸ್ಸು ಆ ದಿವಸ ದಾರಿಯಲ್ಲೇ ಕೆಟ್ಟು ಅಲ್ಲಿಗೆ ಬರದೇ ಹೋದರೆ?... ಛೆ... ಛೆ... ಬೇಡ ಬೇಡ... ಅವಳು ಅಲ್ಲಿಯೇ ನಿಂತಿರಲಿ... ನಾನಿಲ್ಲಿಯೇ ನಿಂತಿರುತ್ತೇನೆ. ಹೀಗೇ ಒಬ್ಬರನ್ನೊಬ್ಬರು ನೋಡುತ್ತಾ ಈ ನಿರ್ಜನ ಪ್ರದೇಶದಲ್ಲಿ ಕಾಲ ಹಾಕುವುದೇ ಒಳ್ಳೆಯದು. ಮರುಗಳಿಗೆಯೇ ಕರಡಿಗಳ ನೆನಪಾಯಿತು. ನಾನಿರುವ ಕಡೆ ಆ ಪ್ರಾಣಿಗಳಿದ್ದರೆ ಪರವಾಗಿಲ್ಲ... ಅವಳಿರುವ ಕಡೆ ಇದ್ದರೆ...?

ಎದುರಿಗೇ ಹಳ್ಳ ಭೋರ್ಗರೆಯುತ್ತಿತ್ತು. ನಿಮಿಷ ನಿಮಿಷಕ್ಕೂ ಅದರ ವೇಗ, ಆರ್ಭಟ ಹೆಚ್ಚಾಗತೊಡಗಿತು. ವಿಚಿತ್ರ ಮಳೆ ಆ ಮರಡಿಯ ಮೇಲೆ... ಹಳ್ಳದ ನೀರಿನಲ್ಲಿ ಈಚಲು ಮರಗಳು ಬುಡ ಸಮೇತ ತೇಲಿ ಹೋಗುವುದು ಕಾಣಿಸಿತು... ನೋಡು ನೋಡುತ್ತಿದ್ದ ಹಾಗೆಯೇ, ನಾಲ್ಕೈದು ಎಮ್ಮೆಗಳು ತೇಲಿ ಬರುವ ದೃಶ್ಯ ನನ್ನನ್ನು ದಂಗು ಬಡಿಸಿತು. ಹಿಂದೆಯೇ ಹಸುಗಳೆರಡು ತೇಲಿ ಬಂದವು... ಆ ನೀರಿನ ರೊಚ್ಚನ್ನು ಕಂಡು ನನಗೆ ಬವಳಿ ಬಂದಂತಾಯಿತು.... ನನ್ನವಳನ್ನು ಕತ್ತೆತ್ತಿ ನೋಡಿದೆ... ಮೈಲಿಯ ಕಲ್ಲನ್ನು ಭದ್ರವಾಗಿ ಹಿಡಿದುಕೊಂಡು ಬಿಟ್ಟ ಕಣ್ಣುಗಳಿಂದ ಪ್ರವಾಹವನ್ನೇ, ಗರಬಡಿದವಳಂತೆ ನೋಡುತ್ತಿದ್ದಳು...ಆ ಜಲರಾಶಿಯ ಮಧ್ಯೆ ಮಧ್ಯವಯಸ್ಸಿನ ಮನುಷ್ಯ ದೇಹವೊಂದು ತೇಲಿ ಬರುವುದು ಕಂಡಾಗ ಭಯದಿಂದ ನಡುಗಿ ಹೋದೆ. ಆ ಮನುಷ್ಯ ಒಂದು ಕೈ ಮೇಲೆತ್ತಿದ್ದ... ಬಾಯಿಯನ್ನು ವಿಕಾರವಾಗಿ ತೆರೆದಿದ್ದ... ಒಂದು ಕಾಲು ಮೇಲಕ್ಕೆ ಚಾಚಿತ್ತು... ಶರವೇಗದಲ್ಲಿ ಸಾಗಿದ ಆ ದೇಹ ಅಷ್ಟೇ ಬೇಗ ಕಣ್ಮರೆಯಾದರೂ ಮನಸ್ಸಿನ ಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತಿ ಹೋಗಿತ್ತು. ನನಗೇ ಇಷ್ಟು ಭಯವಾದರೆ ಅವಳಿಗೆಷ್ಟು ಭಯವಾಗಿರಬೇಡ! ಮತ್ತೊಮ್ಮೆ ಆಚೆಯ ದಡದ ಮೇಲೆ ನಿಂತಿದ್ದ ಅವಳನ್ನು

ಗಮನಿಸಿದೆ. ಅವಳ ಮುಖದಲ್ಲಿ ಭಾವನೆಗಳೆಲ್ಲ ಒಂದಾಗಿರುವ ಹಾಗೆ ಕಂಡಿತು. ಮುಖವೆಲ್ಲ ಬಿಳುಪೇರಿದಂತೆ ಕಾಣುತ್ತಿತ್ತು. "ಹೆದರಬೇಡ ಚಿನ್ನಾ, ನಾನು ಇಲ್ಲೇ ಇದೀನಿ' ಎಂದು ಬೊಬ್ಬೆ ಹಾಕಿದೆ. ಅದು ವ್ಯರ್ಥವೆಂದು ನನಗೂ ಗೊತ್ತು. ಅಖಂಡ ಜಲರಾಶಿಯ ಆ ಗರ್ಜನೆಯಲ್ಲಿ ನನ್ನ ಧ್ವನಿ ಅಡಗಿ ಹೋದಂತಾಗಿತ್ತು.

ಇದೆಂತಹ ವಿಪರ್ಯಾಸ? ಅವಳ ಮನಸ್ಸಿನಲ್ಲಿ ಉದ್ಭವಿಸಬಹುದಾದ ಭಾವನೆಗಳನ್ನು ನಾನು ಹೇಗೆ ತಿಳಿಯಲಿ? ಅವಳ ಬಗ್ಗೆ ನಾನು ಪಡುತ್ತಿರುವ ಬವಣೆಯನ್ನು ಅವಳು ಹೇಗೆ ತಾನೇ ತಿಳಿದಾಳು? ಇಬ್ಬರ ಅಂತರ ಸರಾಸರಿ ನಲವತ್ತು ಅಡಿಗಳ ಮೇಲಿಲ್ಲ. ಆದರೂ ನಮ್ಮಿಬ್ಬರ ಮಧ್ಯೆ ಏರ್ಪಟ್ಟ ಈ ಕಂದಕದಿಂದಾಗಿ ನಾವು ಪರಸ್ಪರ ಅದೆಷ್ಟು ದೂರವಾಗಿಬಿಟ್ಟಿದ್ದೇವೆ? ನಮ್ಮಿಬ್ಬರ ಈ ಅಗಲಿಕೆ ಶಾಶ್ವತವಾಗಿಬಿಟ್ಟರೆ? ಸಾಯಂಕಾಲ ಅಡಿ ಇಡುತ್ತಾ ಇದೆ. ಕತ್ತಲೆ ತನ್ನ ಕರಾಳ ಸೆರಗನ್ನು ಬೀಸುತ್ತಿದೆ. ಅವಳು ನಿಂತಿರುವ ಕಡೆ, ಇದೇ ದಾರಿಯಲ್ಲಿ ಓಡಾಡುತ್ತಿವೆ ಎನ್ನಲಾದ ಕರಡಿಗಳು ಪ್ರತ್ಯಕ್ಷವಾದರೆ? ಅಥವಾ ನಾನಿರುವ ಕಡೆಯೇ ಆ ದುಷ್ಟ ಪ್ರಾಣಿಗಳು ಸೇರಿಕೊಂಡಿದ್ದರೆ? ಎರಡೂ ಬದಿಗಳಲ್ಲಿ ಹೇರಳವಾಗಿ ಬೆಳೆದ ಆ ಈಚಲ ಪೆಳೆಗಳು! ಮನೆಯ ದೇವರನ್ನು ಮನಸಾರೆ ನೆನೆಯುವುದಲ್ಲದೆ ಬೇರೆ ದಾರಿಯೇನಿದೆ?

ಮತ್ತೊಮ್ಮೆ ಅವಳತ್ತ ನೋಡಿದೆ... ಓಹೋ... ಅವಳು ಆ ಮೈಲಿಯ ಕಲ್ಲಿನ ಪಕ್ಕದಲ್ಲಿ ಕುಳಿತುಬಿಟ್ಟಿದ್ದಾಳೆ... ಪಾಪ... ನಿಂತು ಆಯಾಸವಾಗಿರಬೇಕು... ನಾನು ಯಾಕೆ ಕುಳಿತುಕೊಳ್ಳಬಾರದು– ಎಂದುಕೊಂಡೆ. ಆದರೆ ನಾನೂ ಕುಳಿತುಬಿಟ್ಟರೆ, ಅವಳು ಕಾಣಿಸಲಾರಳು... ಅವಳ ಧೈರ್ಯಕ್ಕಾದರೂ ನಾನು ನಿಂತುಕೊಂಡೇ ಇರಬೇಕು ಎಂದು ನನ್ನ ನಿರ್ಧಾರವನ್ನು ಬಲಪಡಿಸಿಕೊಂಡೆ. ಮತ್ತೊಂದು ಸಾಹಸದ ಯೋಚನೆ ಬಂತು... ನನಗೆ ಈಜು ಚೆನ್ನಾಗಿ ಬರದಿದ್ದರೂ, ಸುಮಾರಾಗಿ ನಿರ್ವಹಿಸಬಲ್ಲೆ.. ಏಕೆ ಈ ಹೊಳೆಗೆ ಹಾರಿ, ಈಜುತ್ತಾ ಆಚೆಯ ದಡ ಸೇರಬಾರದು? ಪ್ರಯತ್ನಪಟ್ಟರೂ ಪಡಬಹುದು...

ಆದರೆ... ಆದರೆ... ಏನಿದು? ಹುಚ್ಚು ಹೊಳೆ ಹೆಚ್ಚಾಯಿತು. ಇದುವರೆಗೂ ಆ ಮರಡಿಯ ಮೇಲೆ ಸುರಿದಿದ್ದ ಮಳೆಯೆಲ್ಲವೂ ಒಟ್ಟಾಗಿ ಸೇರಿ, ಅಕ್ಕಪಕ್ಕದಲ್ಲಿ ಜಾರಿ ಬಂದ ನೀರನ್ನು ಹೊತ್ತು ಒಂದಕ್ಕೆ ಹತ್ತಾಗಿ ಹರಿಯತೊಡಗಿತು. ಪ್ರಾಯಶಃ ನಮ್ಮ ಜೀವನದ ಪ್ರತೀಕವೇ ಈ ಹೊಳೆಯಿರಬಹುದೇ ಎನ್ನಿಸಿತು. ಅಷ್ಟರಲ್ಲಿ ಆಚೆಯ ದಡದ ಮೇಲೆ ಸ್ವಲ್ಪ ದೂರದಲ್ಲಿ ಎರಡು ಚಲಿಸುವ ಪ್ರಾಣಿಗಳು ಗೋಚರಿಸಿದಾಗ ನನ್ನ ಮೈಯ ರಕ್ತವೆಲ್ಲ ಬಸಿದು ಹೋದಂತಾಯಿತು... ಕರಡಿಗಳು ಬಂದೇ ಬಿಟ್ಟವು– ಎನ್ನಿಸಿತು. ಕರಿಯ ಆಕೃತಿಗಳೆರಡೂ ಹತ್ತಿರವಾಗತೊಡಗಿದವು. ಅವಳು ಕಲ್ಲಿನ ಪಕ್ಕ ಕುಳಿತು ತದೇಕವಾಗಿ ನನ್ನತ್ತ ನೋಡುತ್ತಿದ್ದಳು. ಅವಳಿಗೆ ತಿರುಗಿ ನೋಡುವ ಸೂಚನೆ ಕೊಡಲೆ– ಎಂದುಕೊಂಡವನು ಮತ್ತೆ ಸುಮ್ಮನಾದೆ. ಅಯ್ಯೋ ಪರಮಾತ್ಮ! ಆ ದುಷ್ಟ ಜಂತುಗಳು ಇದೇ ಮಾರ್ಗವಾಗಿ ಮುನ್ನುಗ್ಗುತ್ತಿವೆ. ನಾನು ಅವುಗಳನ್ನೇ ಎವೆಯಿಕ್ಕದೆ ನೋಡತೊಡಗಿದೆ. ಅಲ್ಲಿಯೇ ಬಿದ್ದಿದ್ದ ಕಲ್ಲುಗಳನ್ನು ಅವುಗಳತ್ತ ಬೀಸಿ ಒಗೆಯಬಾರದೇಕೆ ಎನ್ನಿಸಿ ತಕ್ಕಷ್ಟು ತೂಕವಾದ ಕಲ್ಲನ್ನೆತ್ತಿ ಬೀಸಿ ಒಗೆದೆ. ಅದು ಹಳ್ಳದ ಮಧ್ಯೆ ಧೊಪ್ಪೆಂದು ಬಿದ್ದು ತಳ ಸೇರಿತು. ನಾನು ಕಲ್ಲು ಬೀರಿದುದನ್ನು ಕಂಡ ಅವಳೂ ಅದೇನೋ ಹೇಳುತ್ತಾ ತನ್ನ ಬಲಗೈ ಎತ್ತಿದಂತೆ ಕಾಣಿಸಿತು.

ನನ್ನ ಗಮನ ಮತ್ತೆ ಕರಡಿಗಳತ್ತ ಹೋಯಿತು. ಅರೇ ಏನಿದು! ಅಲ್ಲಿ ಬರುತ್ತಿರುವುದು ಕರಡಿಗಳಲ್ಲ ಇಬ್ಬರು ಮನುಷ್ಯರು. ಜನ ಸಂಚಾರವೇ ಇಲ್ಲದ ಈ ಹಾದಿಯಲ್ಲಿ ಇಬ್ಬರು ಮನುಷ್ಯರನ್ನು ಕಂಡು ಎಷ್ಟೋ ನೆಮ್ಮದಿ ಎನ್ನಿಸಿತು. ಆ ಇಬ್ಬರೂ ಸಮೀಪಕ್ಕೆ ಬಂದ ಹಾಗೆಲ್ಲ ದಟ್ಟವಾಗಿ ಗೋಚರಿಸತೊಡ

ಗಿದರು. ಕಪ್ಪನೆಯ ಮೈ, ಕೆದರಿದ ಕೂದಲು, ಕೊಳಕು ಚಡ್ಡಿಯೊಂದೇ ಉಡುಪು... ಇಬ್ಬರೂ ತಲಾ ಒಂದು ದೊಣ್ಣೆ ಹಿಡಿದಿದ್ದರು. ಮುಖವೂ ಅಸ್ಪಷ್ಟವಾಗಿ ಕಾಣಿಸುತ್ತಿತ್ತು. ಗಂಟುಂ ಗಂಟಾದ ಮುಖ... ಕಣ್ಣು ಕೆಂಪ ಗಿದ್ದವು... ಬರು ಬರುತ್ತಾ ಅವರತ್ತ ನೋಡುವುದು ನನಗೆ ಅಸಾಧ್ಯವೆನಿಸಿತು... ಛೆ! ಎಂತಹ ವಿಪತ್ತು ಬಂತಲ್ಲ- ಎನ್ನಿಸಿತು. ಆ ಇಬ್ಬರೂ ನೇರವಾಗಿ ಪಳ್ಳದ ದಂಡೆಗೇ ನಡೆದು ಬರುತ್ತಿದ್ದರು. ಅಲ್ಲಿ ನನ್ನವಳನ್ನು ಅವರು ಇನ್ನು ಕೆಲವೇ ನಿಮಿಷಗಳಲ್ಲಿ ಕಾಣು ತ್ತಾರೆ- ಅಯ್ಯೋ ದೇವರೆ? ಮುಂದಿನದನ್ನು ಊಹಿಸುವುದೂ ನನಗೆ ಸಾಧ್ಯವಾಗಲಿಲ್ಲ. ಅವರು ಮನುಷ್ಯರಾಗದೇ ಕರಡಿಗಳೇ ಆಗಿದ್ದರೂ ನನಗಷ್ಟು ಭಯವಾಗುತ್ತಿರಲಿಲ್ಲ. ಆದರೆ ಈಗ?... ಏನು ಮಾಡುವುದಕ್ಕೂ ತೋಚದೆ ಸುಮ್ಮನೆ ಮೂಕ ಸಾಕ್ಷಿಯಾಗಿ ಚಡಪಡಿಸುತ್ತ ನಿಂತೆ.

ಇಬ್ಬರೂ ವಕ್ರವಾಗಿ ಹೆಜ್ಜೆ ಹಾಕುತ್ತಾ ಸೀದಾ ಒಂದನೇ ಮೈಲುಗಲ್ಲಿನ ಬಳಿ ಬಂದರು. ಅವರಲ್ಲೊಬ್ಬ ಅದೇ ಮೈಲುಗಲ್ಲಿನ ಹತ್ತಿರ ತನ್ನ ಚಡ್ಡಿಯನ್ನು ಮೇಲಿತ್ತಿಕೊಂಡು ಕುಳಿತುಕೊಳ್ಳಲು ಹೋದದ್ದು ಸ್ಪಷ್ಟವಾಗಿ ಕಾಣಿಸಿತು. ನನ್ನವಳು ಇದಾವುದರ ಪರಿ ವೆಯೂ ಇಲ್ಲದಂತೆ ಸುಮ್ಮನೆ ನನ್ನತ್ತ ನೋಡುತ್ತ ಕುಳಿತಿದ್ದಳು. ಅವಳ ಹಿಂದೆಯೇ ಕುಳಿತ ಆ ಮನುಷ್ಯ ತನ್ನ ಬಾಧೆ ತೀರಿಸಿ ಕೊಳ್ಳುವಾಗ ಅವಳತ್ತ ತಿರುಗಿ ನೋಡಿದ. ನನಗೆ ಮೈಮೇಲೆ ಜರಿ ಹರಿದಂತಾಯಿತು. ಮುಂದೇನು ಎಂದು ಬಡಿದುಕೊಳ್ಳುವ ಎದೆಯನ್ನು ಅಂಗೈಯಲ್ಲಿ ಹಿಡಿದುಕೊಂಡು ನೋಡಿದೆ. ಆ ಮನುಷ್ಯ ಮೇಲೇಳುತ್ತಾ ಒಮ್ಮೆ ಹಲ್ಲುಗಳನ್ನು ಕಾಣಿಸುವಂತೆ ಬಾಯಿ ಕಿಸಿದ.

ಆಗ ಇವಳೂ ಅತ್ತ ತಿರುಗಿ ನೋಡಿ ಬಿದ್ದಂತಾಯಿತು. ಪ್ರಾಯಶ: ಅವಳು ಭಯದಿಂದ ಕಿರುಚಿಕೊಂಡಿರಬೇಕು. ಅಷ್ಟರಲ್ಲಿ ಇನ್ನೊಬ್ಬ ತನ್ನ ದೊಣ್ಣೆಯನ್ನು ಎಸೆದು ಅವಳ ಕಡೆ ನುಗ್ಗಿದ. ಅವಳ ತಲೆ, ಹಣೆಗಳ ಮೇಲೆಲ್ಲ ಕೈಯಾಡಿಸುತ್ತಿರುವುದನ್ನು ಕಂಡಾಗ ನನ್ನ ರಕ್ತ ಕುದಿಯಿತು. ಬೇಕಾದುದಾಗಲಿ... ನೀರಿಗೆ ಹಾರಿ ಆಚೆ ದಡವನ್ನು ಸೇರಬೇಕು. ನನ್ನವಳ ಮಾನ ಪ್ರಾಣಗಳನ್ನು ಉಳಿಸಬೇಕು. ಈ ಪ್ರಯತ್ನದಲ್ಲಿ ನನ್ನ ಪ್ರಾಣ ಹೋದರೂ ಸರಿ-ಎನ್ನಿಸಿತು. ಎರಡು ಹೆಜ್ಜೆ ಮುಂದಿಟ್ಟೆ. ಅಷ್ಟರಲ್ಲಿ ಎರಮಣ್ಣಿನ ದಡ ಕುಸಿಯಿತು. ಕಾಲು ಜಾರಿದಂತಾಯಿತು. ಭಯದಿಂದ ಅಲ್ಲಿದ್ದ ಈಚಲುಮರದ ಗರಿಯನ್ನೇ ಭದ್ರ ವಾಗಿ ಹಿಡಿದುಕೊಂಡು ದಡ ಹತ್ತಿದೆ. ಪ್ರವಾಹ ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ಕಣ್ಣ ಮುಂದಿನ ದೃಶ್ಯ ಮತ್ತಾವ ಘೋರ ರೂಪ ತಾಳಿದೆಯೋ ಎನ್ನಿಸಿ ಕತ್ತೆತ್ತಿದೆ.

ಆ ನೀಚರಿಬ್ಬರೂ ನನ್ನವಳನ್ನು ಹೊತ್ತು ಕೊಂಡು ಹೆದ್ದಾರಿಯತ್ತ ಸಾಗುತ್ತಿದ್ದರು. ಅವರು ನನ್ನನ್ನು ನೋಡಿದ್ದರೋ ಇಲ್ಲವೋ ಗೊತ್ತಾಗಲಿಲ್ಲ. ನನಗೆ ಪ್ರಾಣವೇ ಹೋದಂತಾ ಯಿತು. ಅವರಿಬ್ಬರೂ ಏಳೆಂಟು ಹೆಜ್ಜೆಯಿ ಟ್ಟಿರಬಹುದು... ಅಷ್ಟರಲ್ಲಿ-ಅವಳನ್ನು ಕೆಳ ಗಿಳಿಸಿ ಮುಂದೆ ಓಡಿದರು...ದೊಣ್ಣೆಯನ್ನು ಬೀಸುತ್ತಾ ಅವರು ಅಲ್ಲಲ್ಲಿ ಓಡುತ್ತಿರುವುದು ಸ್ಪಷ್ಟವಾಗಿ ಕಾಣುತ್ತಿತ್ತು...ಹಾದು-ಅವರು ಏನನ್ನೋ ಅಟ್ಟಿಸಿಕೊಂಡು ಹೋಗಿ ಹೊಡೆ ಯುತ್ತಿದ್ದಾರೆನ್ನಿಸಿತು. ಇಬ್ಬರೂ ಶಕ್ತಿಯೆಲ್ಲ ಬಿಟ್ಟು ಥಳಿಸುತ್ತಿದ್ದರು...ಮರುಕ್ಷಣದಲ್ಲೇ ವಿಲವಿಲನೆ ಒದ್ದಾಡುವ ಕರಡಿ ಕಾಣಿಸಿತು. ನನ್ನ ಎದೆ ಝಲ್ಲೆಂದಿತು... ಅಯ್ಯೋ-ಎಲ್ಲ ಅನರ್ಥ ಪರಂಪರೆಗಳೂ ಅವಳಿರುವ ದಿಕ್ಕಿ ನಲ್ಲೇ ಜರುಗಬೇಕೆ? ನಾನಿನ್ನು ಏಕೆ ಬದುಕಿರ ಬೇಕೆನ್ನುವಷ್ಟು ಮನಸ್ಸು ಶೂನ್ಯವಾಗತೊಡ ಗಿತು.

ಕರಡಿಯ ದೇಹ ಇದೀಗ ಸ್ಪಷ್ಟವಾಗಿ ಕಾಣು ತ್ತಿತ್ತು...ಆ ಇಬ್ಬರು ಧಾಂಡಿಗರು ಮತ್ತೆ ಇವಳನ್ನು ಹೊತ್ತು ಸಾಗಿದರು. ನಾನು ಪ್ರತ್ಯಕ್ಷ ಮೂಕ ಸಾಕ್ಷಿಯಾಗುವ ವಿನಾ ಏನು ಮಾಡಬಹುದಿತ್ತು? ಖದೀಮರಿಬ್ಬರೂ ನೇರ ರಸ್ತೆಯನ್ನು ಬಿಟ್ಟು ಪಕ್ಕಕ್ಕೆ ತಿರುಗಿದರು.

ಹೊಲಗಳ ಮೂಲಕ ಸಾಗುತ್ತಾ ಕಣ್ಮರೆಯಾಗಿ ಬಿಟ್ಟರು. ನಾನು ದಿಗ್ಭ್ರಾಂತನಾಗಿ ಕುಳಿತು ಬಿಟ್ಟೆ. ಎದೆಯು ಬಡಿತ ನಿಂತ ಹಾಗೆ ಭಾಸ ವಾಯಿತು. ಸೂರ್ಯ ಅಸ್ತಮಿಸಿದ್ದ. ಆದರೆ ಮರಡಿಯು ಕಡೆಗಿದ್ದ ಮೋಡಗಳೆಲ್ಲ ಬಯಲಾಗಿದ್ದವು. ಮಬ್ಬುಗತ್ತಲೆ ಇತ್ತು. ಮುಂದಿನ ಕ್ರಮವೇನೆಂದು ಬಗೆ ಹರಿಯಲಿಲ್ಲ. ಇನ್ನು ಅಲ್ಲಿ ಏಕಾಗಿ ಕಾಯಬೇಕು? ಹಳ್ಳಿಗಾದರೂ ಹೋಗಿ ಅಲ್ಲಿಯ ನಂಜುಂಡಪ್ಪನ ಸಹಾಯ ಪಡೆದು ಅವಳನ್ನು ಹುಡುಕಿಸಬೇಕು...ಪೋಲೀಸ್ ಕಂಪ್ಲೇಂಟ್ ಬೇಕಾದರೂ ಕೊಡಬಹುದು–ನನ್ನ ವ್ಯವಹಾರ ಬುದ್ಧಿ ಜಾಗೃತವಾಯಿತು...ಮೇಲೆದ್ದು ಹಳ್ಳಿಯತ್ತ ಹೆಜ್ಜೆ ಹಾಕತೊಡಗಿದೆ. ಉತ್ಸಾಹವೆಲ್ಲ ಉಡುಗಿ ಹೋದುದಾಗಿ ಹೆಜ್ಜೆಗಳು ನೇರವಾಗಿ ಬೀಳುತ್ತಿರಲಿಲ್ಲ. ನಾನು ಆ ಕೆಟ್ಟ ಹಳ್ಳದ ಸುದ್ದಿ ಹಲವಾರು ಬಾರಿ ಕೇಳಿದ್ದೆ ಆದರೆ ಪ್ರತ್ಯಕ್ಷ ಕಂಡಾಗ ಅದಕ್ಕೆ ಬಹು ದೊಡ್ಡ ಬೆಲೆಯನ್ನು ತೆತ್ತ ಹಾಗಾಗಿತ್ತು.

ನಿಧಾನವಾಗಿ ಹೆಜ್ಜೆ ಹಾಕುತ್ತಾ ಸಾಗಿದ ನಾನು ಸುಮಾರು ಅರ್ಧ ಮೈಲಿಯಷ್ಟು ನಡೆದಿದ್ದೆ. ನಕ್ಷತ್ರಗಳ ಬೆಳಕೂ ಚೆನ್ನಾಗಿ ಒಗ್ಗಿ ಹೋಯಿತು. ಹಳ್ಳದ ಆಚೆಯ ಬದಿಯವರೆಗೂ ನನ್ನನ್ನು ಬಿಡಲು ಅವಳು ಬಂದ ಹಾಗಾಯಿತು...ಅವಳನ್ನು ಶಾಶ್ವತವಾಗಿಯೇ ಕಳೆದುಕೊಂಡೆ ಎನ್ನಿಸಿತು. ಏಕೆ? ಮನೆದೇವರಿಗೆ ಅವಳನ್ನು ನಾನು ಲಗ್ನವಾದುದು ಇಷ್ಟವಿರಲಿಲ್ಲವೇ? ನನ್ನ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಸುರಿಯತೊಡಗಿತ್ತು... ದುಃಖದ ಕಟ್ಟೆಯೊಡೆದಂತೆ, ಆ ಏಕಾಂತ ಪ್ರದೇಶದಲ್ಲಿ ಗಟ್ಟಿಯಾಗಿ "ಹೋ..." ಎಂದು ಅಳತೊಡಗಿದೆ. ಇನ್ನು ಮನೆ ದೇವರಿಗಾಗಿ ನಾನು ಅಲ್ಲಿಗೆ ಹೋಗುತ್ತಿಲ್ಲ...ನಂಜುಂಡಪ್ಪನ ಸಹಕಾರಕ್ಕಾಗಿ......ಅವಳ ಮುಖವನ್ನು ಮತ್ತೊಮ್ಮೆ, ಒಂದೇ ಒಂದು ಬಾರಿ ನೋಡುವ ಅವಕಾಶ ಸಿಕ್ಕರೆ ಸಾಕು...ಆ ನೀಚರು ಅವಳನ್ನು ಹೇಗೆ ಹೇಗೆ ಉಪಯೋಗಿಸಿಕೊಳ್ಳುವರೋ, ಅವಳು ಎಷ್ಟೆಲ್ಲ ನೊಂದುಕೊಳ್ಳುವಳೋ...ಅಥವಾ ಅವಳು ಪ್ರಾಣ ಸಮೇತ ಉಳಿಯುವಳೋ ಇಲ್ಲವೋ— ಮುಂತಾದ ಶಂಕೆಗಳು ಸುತ್ತುವರಿದು ನನ್ನ ಅಳಲು ನಭೋಮಂಡಲವನ್ನು ಮುಟ್ಟಿತು.

ಪಕ್ಕದ ಹೊಲದಲ್ಲಿ ಏನೋ ಸಪ್ಪಳವಾದಂತಾಗಿ, ಬೆಚ್ಚಿ ತಿರುಗಿ ನೋಡಿದಾಗ ನನ್ನ ಅಂತ್ಯ ಸಮೀಪವಾಯಿತೆಂದುಕೊಂಡೆ. ಇಪ್ಪತ್ತು ಮೂವತ್ತು ಗಜ ದೂರದಲ್ಲಿ ಮೂರು ಜನ ಬರುತ್ತಿದ್ದುದು ಕಾಣಿಸಿತು. ಇಬ್ಬರಂತೂ ಆಗ ಕಂಡಿದ್ದ ಧಾಂಡಿಗರ ಹಾಗೇ ಇದ್ದರು. ನನಗೆ ಓಡಿ ಹೋಗಲೇ ಎನ್ನಿಸಿತು. ಆದರೆ ತಕ್ಷಣವೇ–ಇನ್ನು ಓಡಿ ಹೋಗುವುದೇಕೆ? ಅವಳನ್ನು ಕಳೆದುಕೊಂಡು ಬದುಕುವುದಾದರೂ ಏಕೆ? ಈ ನೀಚರನ್ನು ಎದುರಿಸಿಯೇ ಸಾಯಬೇಕೆಂದುಕೊಂಡು ನಡಿಗೆಯನ್ನು ನಿಲ್ಲಿಸಿ ಅವರನ್ನೇ ನೋಡುತ್ತಾ ನಿಂತುಬಿಟ್ಟೆ. ಮೂವರೂ ಬೇಗ ಬೇಗ ನನ್ನತ್ತಲೇ ಬರುತ್ತಿದ್ದರು. ಕತ್ತಲಲ್ಲಿ ಮುಖಗಳು ಸ್ಪಷ್ಟವಾಗಲಿಲ್ಲ–ಅದನ್ನು ಕಟ್ಟಿಕೊಂಡು ನನಗೇನು? ಬರಲಿ...ಬೇಕಾದವರು ಬರಲಿ...ನನ್ನ ಪ್ರಾಣ ತೆಗೆಯಲಿ...

ಮೂವರೂ ಹೊಲದ ಬದುವಿನಿಂದ ಜಿಗಿದು ನನ್ನತ್ತಲೇ ಬಂದರು– "ಯಾರದು?" ಎಂದು ಶಕ್ತಿಯನ್ನೆಲ್ಲ ಬಿಟ್ಟು ಚೀರಿದೆ. ಇಬ್ಬರು ಧಾಂಡಿಗರೂ ದೂರ ನಿಂತು ಏನನ್ನೋ ಹೇಳುತ್ತಿದ್ದರು, ಮೂರನೆಯ ವ್ಯಕ್ತಿ ನನ್ನನ್ನು ತಬ್ಬಿದುದರಿಂದ ಅವರಿಬ್ಬರ ಮಾತು ನನಗೆ ಕೇಳಿಸಲಿಲ್ಲ. ✡



ಹೋರಾಡಿಯಾದರೂ ನಾವು ಶಾಂತಿಯನ್ನು ಸಂಪಾದಿಸಿಯೇ ತೀರುತ್ತೇವೆ.

—ಜನರಲ್ ಡ್ವೈಟ್ ಐಸೆನ್‌ಹಾವರ್







# ಕೇವಲ ಸಿಗ್ನಲ್ ಫ್ಲೋರೈಡ್ ದಂತಕ್ಷಯವನ್ನೂ ಶ್ವಾಸದ ದುರ್ಗಂಧವನ್ನೂ ನಿಲ್ಲಿಸುವುದಾಗಿ ಸಿದ್ಧಪಡಿಸುತ್ತದೆ.

-ಒಂದು ವಿಶಿಷ್ಟ ದಂತಧಾವನ ಮೂಲವಸ್ತುವಿನ ಮೂಲಕ.




**ಕೇವಲ ಸಿಗ್ನಲ್ ಫ್ಲೋರೈಡ್ ಬಗ್ಗೆ ಪುರಾವೆ ಸಿಕ್ಕುತ್ತದೆ-ನಿಮ್ಮ ದಂತವೈದ್ಯರನ್ನು ಕೇಳಿನೋಡಿ**

ಲಿಂಟಾಸ್.SGF. 63-75 KN

ಪ್ರೊ. ಸಿ. ಕೆ. ರಾಮಚಂದ್ರನ್

# ವೃಕ್ಷಾಯುರ್ವೇದ

ಕ್ರಿ. ಪೂ. ಆರನೆಯ ಶತಮಾನದಲ್ಲಿ ಆಯುರ್ವೇದವು ಹಿಂದೆಂದೂ ಕಾಣದಷ್ಟು ಪ್ರಗತಿಯನ್ನು ಸಾಧಿಸಿದ್ದರೂ ವೃಕ್ಷ ಚಿಕಿತ್ಸೆಯ ಬಗೆಗೆ ಒಂದು ಸ್ವತಂತ್ರ ಶಾಸ್ತ್ರ ರೂಪುಗೊಳ್ಳಲೇ ಇಲ್ಲ. ಆದರೆ ಆಯುರ್ವೇದದ ಗ್ರಂಥಗಳಲ್ಲಿ ವೃಕ್ಷಗಳ ಲಾಲನೆ, ಪಾಲನೆ ಕುರಿತು, ಅವುಗಳ ಗುಣ ಲಕ್ಷಣಗಳನ್ನು ಕುರಿತು ಅನೇಕ ಉಲ್ಲೇಖಗಳು ಬರುತ್ತವೆ. ಕ್ರಿ. ಪೂ. ನಾಲ್ಕನೆಯ ಶತಮಾನದ ಸುಮಾರಿಗೆ ಶಾಲಿಹೋತ್ರನು "ಮೃಗ ಚಿಕಿತ್ಸೆ" ಯನ್ನು ಬರೆದ. ಅನಂತರದ ಅವಧಿಯಲ್ಲಿ ಅದು ಪಾರಸಿ, ಅರಬ್ಬಿ ಹಾಗೂ ತಿಬೇಟಿ ಭಾಷೆಗಳಿಗೆ ತರ್ಜುಮೆಗೊಂಡಿತು. ಅವನು ಮುಖ್ಯವಾಗಿ ಬರೆದದ್ದು ಅಶ್ವಗಳಿಗೆ ಸಂಬಂಧಿಸಿದ ರೋಗಗಳ ಬಗೆಗೆ. ರಾಜಾ ನಳನಿಗೆ 'ಅಶ್ವಜ್ಞಾನಿ'ಯೆಂಬ ಪದವಿ ದೊರೆತಿತ್ತೆಂದೂ ಹೇಳಲಾಗುತ್ತಿದೆ. ನಕುಲನು 'ಅಶ್ವಚಿಕಿತ್ಸೆ' ಯೆಂಬ ಪುಸ್ತಕ ಬರೆದಿದ್ದನೆಂದು ಒಂದು ಪ್ರತೀತಿಯಿದೆ. ಆನೆಗಳಿಗೆ ಬರುವ ರೋಗಗಳನ್ನೂ, ಆ ರೋಗಗಳನ್ನು ಹೇಗೆ ನಿವಾರಿಸಬೇಕೆಂಬುದನ್ನು ಕುರಿತು "ಗಜಾಯುರ್ವೇದ" ವೆಂಬ ಪುಸ್ತಕವೊಂದಿದೆ. ಇದರ ಕರ್ತನಾರೆಂಬುದು ನಿಶ್ಚಿತವಾಗಿ ಗೊತ್ತಿಲ್ಲವಾದರೂ ದಶರಥ ಮಹಾರಾಜನ ಸಮಕಾಲೀನನಾದ ರಾಜಾ ರೋಮಪಾದನು ಈ ಗ್ರಂಥವನ್ನು ರಚಿಸಿರಬಹುದೆಂದು ಸಾರ್ವತ್ರಿಕವಾಗಿ ಭಾವಿಸಲಾಗುತ್ತಿದೆ.

ಹೀಗೆಯೇ ವೃಕ್ಷಾಯುರ್ವೇದದ ಜೊತೆಗೆ ಪೌರಾಣಿಕ ಹೆಸರುಗಳೂ ಹೆಣೆದುಕೊಂಡಿವೆ. ವೃಕ್ಷಾಯುರ್ವೇದವು ವಿಜ್ಞಾನದ ಸ್ವತಂತ್ರ ಶಾಖೆಯಾಗಿ ಎಂದು ರೂಪುಗೊಂಡಿತೆಂದು ಹೇಳುವುದು ಕಠಿಣವೇ ಸರಿ. ಶಾರ್ಙ್ಗಧರ 'ವೃಕ್ಷಾಯುರ್ವೇದ'ವನ್ನು ರಚಿಸಿದನೆಂಬ ಬಗ್ಗೆ ಎರಡು ಮಾತಿಲ್ಲ. ಆದರೆ ಈ ಶಾರ್ಙ್ಗಧರನು ಯಾರೆಂಬುದೆ ಪಂಡಿತರಿಗೆ ಒಂದು ಜಿಜ್ಞಾಸೆಯ ಪ್ರಶ್ನೆಯಾಗಿದೆ. 'ಶಾರ್ಙ್ಗಧರ ಸಂಹಿತೆ' ಹಾಗೂ 'ಶಾರ್ಙ್ಗಧರ ಪದ್ಧತಿ'ಯನ್ನು ಬರೆದ ಶಾರ್ಙ್ಗಧರನು ಹದಿನಾಲ್ಕನೆಯ ಶತಮಾನದಲ್ಲಿ ಗುಜರಾತಿನಲ್ಲಿ ಜೀವಿಸಿದ್ದ. ಅವನು ಬರೆದ ಗ್ರಂಥಗಳಲ್ಲಿ ವೃಕ್ಷಗಳ ಚಿಕಿತ್ಸೆಯ ಬಗೆಗೆ ಯಾವುದೇ ಉಲ್ಲೇಖ ದೊರೆಯುವುದಿಲ್ಲವಾದ್ದರಿಂದ 'ವೃಕ್ಷಾಯುರ್ವೇದ'ವನ್ನು ಬರೆದ ಶಾರ್ಙ್ಗಧರನು ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಲ್ಲಿ ಜೀವಿಸಿದ ಯಾವುದೋ ವ್ಯಕ್ತಿಯಾಗಿರಬಹುದು. 'ವೃಕ್ಷಾಯುರ್ವೇದ'ದ ಹೊರತು 'ಬೃಹತ್ಸಂಹಿತೆ,' 'ಅಗ್ನಿ ಪುರಾಣ'ಗಳಲ್ಲಿಯೂ ವೃಕ್ಷಗಳಿಗೆ ತಗುಲಬಹುದಾದ ರೋಗಗಳ ಬಗೆಗೆ ಹಾಗೂ ರೋಗಗಳನ್ನು ನಿವಾರಿಸುವ ಬಗೆಗೆ ಸಾಕಷ್ಟು ವಿವರಗಳಿವೆ.

('ನವನೀತ' ಹಿಂದೀ ಮೈಜೆಸ್ಟಿಯಿಂದ)

ವೃಕ್ಷಾಯುರ್ವೇದವನ್ನು ಹನ್ನೆರಡು ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ ೧. ಭೂಮಿ ನಿರೂಪಣ ೨. ಬೀಜೋಪ್ತಿವಿಧಿ ೩. ಪಾದಪ ವಿವಕ್ಷೆ ೪. ರೋಪಣ ವಿಧಾನ ೫. ಸಿಷೇಚನವಿಧಿ ೬. ಪೋಷಣವಿಧಿ ೭. ದ್ರುಮರಕ್ಷಾ ೮. ತರುಚಿಕಿತ್ಸಾ ೯. ಉಪವನಕ್ರಿಯಾ ೧೦. ನಿವಾಸಾಸನ್ನತರು ಶುಭಾಶುಭ ಲಕ್ಷಣ ೧೧. ತರುಮಹಿಮಾ ೧೨. ಚಿತ್ರೀಕರಣ.

ಭೂಮಿ ಎಷ್ಟು ಫಲವತ್ತಾಗಿದೆ ಹಾಗೂ ಭೂಮಿಗೆ ಯಾವ ಪ್ರಮಾಣದಲ್ಲಿ ನೀರು ದೊರೆಯುತ್ತದೆ ಎಂಬುದರ ಆಧಾರದ ಮೇಲೆ ಭೂಮಿಯನ್ನು ಹೇಗೆ ವರ್ಗೀಕರಿಸ ಬೇಕೆಂಬುದನ್ನು 'ಭೂಮಿ ನಿರೂಪಣ'ದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಜಮೀನನ್ನು ಆರಿಸಿಕೊಳ್ಳುವ ಹಾಗೂ ವೃಕ್ಷ ಹಾಗೂ ಗಿಡಬಳ್ಳಿಗಳನ್ನು ಬೆಳೆಸುವ ಬಗೆಗಿನ ಇಂದಿನ ವಿಧಾನಕ್ಕೂ ಅಂದಿನ ವಿಧಾನಕ್ಕೂ ಅಷ್ಟಾಗಿ ಅಂತರ ಕಾಣಬರು ವುದಿಲ್ಲ. ವರಾಹಮಿಹಿರನ "ಉದಕಾರ್ಗಲ" ಹಾಗೂ ಈ ಪುಸ್ತಕದ ಪರಿಶಿಷ್ಟವಾದ ಕೂಪ ಷಷ್ಠಗಳನ್ನು ನಾವು ಅವಲೋಕಿಸಿದರೆ ಭೂಮಿ ಯಾಳದಲ್ಲಿರುವ ನೀರನ್ನು ಹೇಗೆ ಪತ್ತೆ ಮಾಡ ಬೇಕೆಂಬ ಬಗೆಗೆ ಸ್ಥೂಲ ನಿರೂಪಣೆಯಿರು ವುದನ್ನು ಕಾಣುತ್ತೇವೆ. ಇಲ್ಲಿ ಭೂಮಿಯನ್ನು ಮಾನವ ಶರೀರಕ್ಕೆ ಹೋಲಿಸಲಾಗಿದೆ. ರಕ್ತವು ಚರ್ಮದ ಕೆಳಪದರದಲ್ಲೂ ದೇಹದ ಆಂತರಿಕ ಭಾಗದಲ್ಲೂ ಹರಡಿಕೊಂಡ ರಕ್ತವಾಹಿನಿಗಳ ಮೂಲಕ ಹರಿಯುವ ಹಾಗೆ ಭೂಮಿಯ ಮೇಲ್ಭಾಗದಲ್ಲೂ ಕೆಳ ಭಾಗದಲ್ಲಿ ಇರುವ ಜಲ ಸ್ರೋತಗಳ ಮೂಲಕ ನೀರು ವಿಭಿನ್ನ ಧಾರೆ ಗಳಲ್ಲಿ ಪ್ರವಹಿಸುತ್ತದೆ ಎಂದು ಅಲ್ಲಿ ಹೇಳ-ಲಾಗಿದೆ. ಭೂಮಿಯ ಸ್ವಲ್ಪ ಭಾಗವನ್ನೂ ನಿರುಪಯೋಗಿಯಾಗಿ ಬಿಡಬಾರದು; ಸ್ವಂತ ಪರಿಶ್ರಮ, ಸರಕಾರದ ಸಹಾಯ ಹಾಗೂ ಭಗವಂತನ ಆಶೀರ್ವಾದಗಳಿಂದ ಎಂತಹ ಬರಡು ಭೂಮಿಯನ್ನೂ ಕೃಷಿ ಯೋಗ್ಯವಾಗಿ ಮಾಡಬಹುದು ಎಂದು ಪುಸ್ತಕದ ಕೊನೆಯಲ್ಲಿ ಹೇಳಲಾಗಿದೆ.

ಬೀಜಗಳನ್ನು ಹೇಗೆ ವರ್ಗೀಕರಿಸಬೇಕೆಂಬು ದನ್ನೂ ಹೀಗೆ ವರ್ಗೀಕರಿಸಿದ ಬೀಜಗಳನ್ನು ಹೇಗೆ ಸಂರಕ್ಷಿಸಬೇಕೆಂಬುದನ್ನೂ 'ಬೀಜೋ ಪ್ತಿವಿಧಿ' ಅಧ್ಯಾಯದಲ್ಲಿ ಹೇಳಲಾಗಿದೆ. ಬೀಜಗಳನ್ನು ಬಿತ್ತುವ ಮೊದಲು ಅವುಗಳನ್ನು ಬೂದಿಯಲ್ಲಿಡಬೇಕು. ಅನಂತರ ಕೆಲ ಔಷಧಿಯ ಪದಾರ್ಥಗಳ ಹೊಗೆಯನ್ನು ಆ ಬೀಜಗಳ ಮೇಲೆ ಹಾಯಿಸಬೇಕು. ಅಂದರೆ ಅದರಿಂದ ಹುಟ್ಟುವ ಸಸ್ಯ ಆರೋಗ್ಯಕರವಾಗಿರುತ್ತದೆ. ಅಲ್ಲದೆ ಬೆಳೆಯೂ ಸಮೃದ್ಧವಾಗಿ ಬರುತ್ತದೆ ಎಂದು ಆ ಅಧ್ಯಾಯದಲ್ಲಿ ಹೇಳಲಾಗಿದೆ.

ಹೆಚ್ಚು ಬೆಳೆಯನ್ನು ಹೇಗೆ ಬೆಳೆಯಬೇಕೆಂಬ ಬಗ್ಗೆ ಈಗಿನ ಕೃಷಿ ನಿಪುಣರು ಹೇಳುವುದಕ್ಕೂ ವೃಕ್ಷಾಯುರ್ವೇದದ ಆಗಿನ ಚಿಕಿತ್ಸಾ ಪಟು ಗಳು ಹೇಳುವುದಕ್ಕೂ ಸಾಕಷ್ಟು ಸಾಮ್ಯವಿದೆ. ಕಡಲೆಯಂತಹ ದ್ವಿದಳ ಧಾನ್ಯಗಳ ಬೇರುಗಳ ಬಳಿ ಬ್ಯಾಕ್ಟೀರಿಯಗಳಿಂದ ಯುಕ್ತವಾದ ಗ್ರಂಥಿಗಳಿರುತ್ತವೆ. ಇವು ವಾತಾವರಣದಿಂದ ನೈಟ್ರೋಜನನ್ನು ನೈಟ್ರೋಜನ್ನಿನ ಲವಣ ಗಳಾಗಿ ಪರಿವರ್ತಿಸುತ್ತವೆ. ಇದು ಸಸಿಗಳಿಗೆ ಅತ್ಯಂತ ಆರೋಗ್ಯಕರ. ಬೆಳೆಗಳನ್ನು ಕಡಿದ ನಂತರ ಸಸಿಗಳ ಬೇರುಗಳನ್ನು ಕೂಡಲೇ ಕಿತ್ತೆಸೆಯದೆ ಸ್ವಲ್ಪ ಕಾಲ ಅಲ್ಲಿಯೇ ಬಿಡ ಬೇಕೆಂದು ವೃಕ್ಷಾಯುರ್ವೇದದಲ್ಲಿ ಹೇಳ-ಲಾಗಿದೆ.

'ಪಾದಪವಿವಕ್ಷಾ' ಅಧ್ಯಾಯದಲ್ಲಿ ವೃಕ್ಷಗಳ ಜೀವಶಾಸ್ತ್ರವನ್ನು ಕುರಿತಾದ ಸ್ಪಷ್ಟ ವಿವರ ಗಳಿವೆ. ವನಸ್ಪತಿಗಳಿಗೆ ಜೀವವಿರುತ್ತದೋ ಇಲ್ಲವೋ ಎಂಬ ಬಗ್ಗೆ ಭೃಗು ಹಾಗೂ ಭಾರದ್ವಾಜ ಮಹರ್ಷಿಗಳಲ್ಲಿ ಚರ್ಚೆಯಾದದ್ದು ಮಹಾಭಾರತದ ಶಾಂತಿಪರ್ವದಲ್ಲಿ ಬರುತ್ತದೆ. ಅವುಗಳಿಗೂ ಜೀವವಿದೆಯೆಂದು ಕೊನೆಗೆ ಇಬ್ಬರೂ ಮಹರ್ಷಿಗಳು ತೀರ್ಮಾನಕ್ಕೆ ಬರು ತ್ತಾರೆ. ವನಸ್ಪತಿಗಳ ಸಿರ (ಬೇರು) ಭೂಮಿಯ ಲ್ಲಿದ್ದರೆ ಮಾನವನ ಶಿರ ಭೂಮಿಯ ಹೊರಗಿರು ತ್ತದೆ. ವನಸ್ಪತಿಯ ಶಾಖೆಗಳು ಭೂಮಿಯ ಹೊರಗಿದ್ದರೆ ಮಾನವನು ತನ್ನ ಶಾಖೆಗಳಿಂದ (ಪಾದ) ನಡೆಯುತ್ತಾನೆ. ವನಸ್ಪತಿ ಹಾಗೂ

ಮಾನವನಲ್ಲಿರುವ ಭೇದ ಇಷ್ಟೇ ಎಂದು ಮಹಾಭಾರತದ 'ಶಾಂತಿಪರ್ವ'ದಲ್ಲಿ, ಹೇಳಲಾಗಿದೆ. ನಮ್ಮ ಹಾಗೆಯೆ ಸಸ್ಯಗಳಿಗೂ ಹಸಿವೆಯಾಗುತ್ತದೆ, ನೀರಡಿಕೆಯಾಗುತ್ತದೆ. ನಿದ್ದೆ ಬರುತ್ತದೆ. ಸೂರ್ಯಾಸ್ತದ ನಂತರ ನಿದ್ದೆ ಹೋಗುವ ಗಿಡಮರಗಳ ಹೆಸರುಗಳನ್ನು ಅಲ್ಲಿ ಉಲ್ಲೇಖಿಸಲಾಗಿದೆ.

ಸಸ್ಯಗಳಿಗೆ ಹೇಗೆ ನೀರುಣ್ಣಿಸಬೇಕು ಹಾಗೂ ಯಾವ ಯಾವ ಸಮಸ್ಯೆಗಳಿಗೆ ಯಾವ ಯಾವ ಗೊಬ್ಬರ ಶ್ರೇಷ್ಠ ಎಂಬ ಬಗೆಗೆ 'ನಿಷೇಚನ ವಿಧಿ"ಯಲ್ಲಿ ವಿಸ್ತೃತವಾದ ವಿವರಣೆ ದೊರೆಯುತ್ತದೆ. ಅಲ್ಪ ವಿಕಸಿತ ಹಾಗೂ ಪೂರ್ಣ ವಿಕಸಿತ ಸಸ್ಯಗಳಿಗೆ ಬೇಕಾಗುವ ಗೊಬ್ಬರಗಳನ್ನು ಕುರಿತು ಅಲ್ಲಿ ಚರ್ಚಿಸಲಾಗಿದೆ. ವೃಕ್ಷಾಯುರ್ವೇದದಲ್ಲಷ್ಟೇ ಅಲ್ಲ, 'ಬೃಹತ್ಸಂಹಿತೆ'ಯಲ್ಲಿಯೂ ಕಣಪಜಲವೆಂಬ ಗೊಬ್ಬರದ ಉಲ್ಲೇಖ ಆಗಾಗ ಬರುತ್ತದೆ. ಇದನ್ನು ಮುಖ್ಯವಾಗಿ ಜಿಂಕೆ, ಮೇಕೆ ಹಾಗೂ ಹಂದಿಗಳ ಶವದಿಂದ ತಯಾರಿಸಲಾಗುತ್ತಿತ್ತು. ಎಲ್ಲ ಪ್ರಾಣಿಗಳ ಶವ, ಮಲಮೂತ್ರಾದಿಗಳೂ ಅಲ್ಲದೆ ಮೀನು ಸಹ ಗೊಬ್ಬರಕ್ಕೆ ಉಪಯುಕ್ತ ವಸ್ತುವಾಗಬಹುದೆಂದು ನಮ್ಮ ಪೂರ್ವಜರ ಗ್ರಂಥಗಳು ಹೇಳುತ್ತವೆ. ಗಿಡಗಳನ್ನು ಹೇಗೆ ನೆಡಬೇಕು ? ಹಾಗೂ ಮಳೆಗಾಳಿಗಳಿಂದ ಅವುಗಳನ್ನು ಹೇಗೆ ರಕ್ಷಿಸಬೇಕು ಎನ್ನುವುದನ್ನು 'ದ್ರುಮರಕ್ಷಾ' ಅಧ್ಯಾಯವು ಹೇಳುತ್ತದೆ,

ಮನೆಯ ಆಸುಪಾಸಿನಲ್ಲಿ ಗಿಡಗಳನ್ನು ನೆಟ್ಟು ಬೆಳೆಸುವವರಿಗಾಗಿ 'ನಿವಾಸಾಸನ್ನ ತರು ಶುಭಾಶುಭ ಲಕ್ಷಣ' ಅಧ್ಯಾಯದಲ್ಲಿ ಅನೇಕ ಮನೋರಂಜಕ ಸೂಚನೆಗಳಿವೆ. ಆ ಪ್ರಕಾರ ಅಶ್ವತ್ಥವೃಕ್ಷವನ್ನು ಮನೆಯ ಪೂರ್ವದಿಕ್ಕಿನಲ್ಲಿ ಮಾತ್ರ ನೆಡಬೇಕಂತೆ. ಪಶ್ಚಿಮ, ದಕ್ಷಿಣ ಹಾಗೂ ಉತ್ತರ ದಿಕ್ಕಿನಲ್ಲಿ ಯಾವ ಜಾತಿಯ ಗಿಡಗಳನ್ನು ನೆಡಬೇಕೆಂಬುದನ್ನೂ ಅಲ್ಲಿ ಬರೆಯಲಾಗಿದೆ. ಆದರೆ ಈ ಗಿಡಗಳು ಮನೆಯಿಂದ ಸಾಕಷ್ಟು ದೂರವಿರಬೇಕು. ಅವುಗಳ ಟೊಂಗೆಗಳು ಮನೆಗೆ ಬಡಿಯುವಂತಿರಬಾರದು ಎಂಬುದನ್ನು ಹೇಳಲಿಕ್ಕೆ ಗ್ರಂಥಕರ್ತರು ಮರೆತಿಲ್ಲ. ರಾತ್ರಿಕಾಲದಲ್ಲಿ ವೃಕ್ಷದ ಕೆಳಗೆ ಯಾರೂ ನಿದ್ರಿಸಲೇ ಬಾರದು ಎಂದು ಶತಮಾನಗಳ ಹಿಂದೆ ವಾಗ್ಭಟನು ವಿಧಿಸಿದ್ದರ ವೈಜ್ಞಾನಿಕ ಕಾರಣ ಸವುಗಿಂದು ಸ್ಪಷ್ಟವಾಗಿದೆ,

ಹೆಸರೇ ಸೂಚಿಸುವ ಹಾಗೆ 'ತರುಮಹಿಮೆ'ಯು ಗಿಡಮರಗಳ ಮಹತ್ವವನ್ನು ಎತ್ತಿ ಹೇಳುತ್ತದೆ. ಅದು ಗಿಡಗಳ ಮಹತ್ವವನ್ನು ಹೇಳಿರುವುದು ಹೀಗೆ :

"ದಶಕೂಪ ಸಮಾ ವಾಪೀ
ದಶವಾಪೀ ಸಮೋಹ್ರದಃ :
ದಶ ಹ್ರದಸಮಃ ಪುತ್ರೋ
ದಶಪುತ್ರಸಮೋ ದ್ರುಮಃ॥"

(-ಒಂದು ಕೆರೆ ಹತ್ತು ಭಾವಿಗಳಿಗೆ ಸಮಾನ. ಒಂದು ಸರೋವರ ಹತ್ತು ಕೆರೆಗಳಿಗೆ ಸಮಾನ. ಒಬ್ಬ ಪುತ್ರ ಹತ್ತು ಸರೋವರಗಳಿಗೆ ಸಮಾನ. ಹಾಗೂ ಒಂದು ವೃಕ್ಷ ಹತ್ತು ಪುತ್ರರಿಗೆ ಸಮಾನ.)

ವೃಕ್ಷಗಳ ಬಗೆಗಿನ ಪ್ರೇಮವನ್ನೂ ಅವುಗಳ ಮಹತ್ವವನ್ನೂ ಇದಕ್ಕಿಂತ ಸುಂದರವಾಗಿ ಬಣ್ಣಿಸಲು ಯಾರಿಗಾದರೂ ಸಾಧ್ಯವೆ ?

ವೃಕ್ಷಗಳನ್ನು ನೆಡುವುದರಿಂದ ಮನುಷ್ಯ ಪೂರ್ಣತ್ವವನ್ನು ಪಡೆಯುತ್ತಾನೆ. ಫಲಗಳನ್ನು ಕೊಡುವ ವೃಕ್ಷಗಳನ್ನು ನೆಟ್ಟವನಲ್ಲಿ ಪರಮಾತ್ಮ ನೆಲಸುತ್ತಾನೆ. ಒಂದು ವೇಳೆ ಆತನ ಪೂರ್ವಜರು ನರಕದಲ್ಲಿ ಬಿದ್ದಿದ್ದರೆ ಹಾಗೂ ಆತ ತೋಟದಲ್ಲಾಗಲಿ ದಾರಿಯ ಬದಿಯಲ್ಲಾಗಲಿ ಐದು ಮಾವಿನ ಮರಗಳನ್ನು ನೆಟ್ಟರೆ ಅವನ ಪೂರ್ವಜರ ಪೈಕಿ ಕನಿಷ್ಟಪಕ್ಷ ಹದಿನಾಲ್ಕು ಜನರಿಗಾದರೂ ಮುಕ್ತಿ ಲಭಿಸುತ್ತದೆ ಎಂದು ಈ ಅಧ್ಯಾಯ ಹೇಳುತ್ತದೆ.

'ಉಪವನಕ್ರಿಯೆ'ಯಲ್ಲಿ ಉದ್ಯಾನವನಗಳನ್ನು ಹೇಗೆ ನಿರ್ಮಿಸಬೇಕೆಂಬ ಬಗ್ಗೆ ವಿವರಗಳಿವೆ. ಸಸಿಗಳನ್ನು ಹಚ್ಚಿ ಅವುಗಳನ್ನು ಹೇಗೆ ಸಂರಕ್ಷಿಸಬೇಕೆನ್ನುವುದನ್ನು ಆ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಆ ಪ್ರಕಾರ ಸೂಕ್ತ ಸ್ಥಳವನ್ನು ನೋಡಿ ಅಲ್ಲಿ ಮೊದಲು ಲತಾ-

ಗೃಹವನ್ನು ನಿರ್ಮಿಸಬೇಕು. ಅದಕ್ಕಾಗಿ ಹೆಚ್ಚು ಸಂಖ್ಯೆಯಲ್ಲಿ ಸುಗಂಧಿತ ಪುಷ್ಪಗಳನ್ನು ಬಿಡುವ ಸಸ್ಯಗಳನ್ನು ಮಾತ್ರ ಆರಿಸಿಕೊಳ್ಳಬೇಕು. ಬಳ್ಳಿಗಳು ಗೃಹದ ತುಂಬ ಹಬ್ಬಿದಾಗ ಅವುಗಳನ್ನು ಜೋಕಾಲಿಯಂತೆಯೂ ಉಪಯೋಗಿಸಬಹುದು.

ಅನಂತರ ಅಲ್ಲಿ ಕ್ರೀಡಾಪರ್ವತಗಳನ್ನು ನಿರ್ಮಿಸಬೇಕು. ಅದರಲ್ಲಿ ಗುಹೆಗಳನ್ನು ಸರೋವರಗಳನ್ನು ನಿರ್ಮಿಸಬೇಕು. ಸರೋವರದಲ್ಲಿ ಹಂಸಗಳನ್ನು ಸಾಕಬೇಕು. ಅಲ್ಲದೆ ಈ ಸರೋವರದ ಮಧ್ಯದಲ್ಲಿ ನಯನಮನೋಹರವಾದ ಕದಲೀಗೃಹವನ್ನು ನಿರ್ಮಿಸಬೇಕು.

'ಚಿತ್ರೀಕರಣ' ಅಧ್ಯಾಯದಲ್ಲಿ ಹೇಳಲಾದ ಕೆಲವು ವಿಧಾನಗಳು ಇಂದಿನ ವಿಜ್ಞಾನಿಗಳಿಗೂ ಅಚ್ಚರಿಯನ್ನುಂಟುಮಾಡಬಹುದು. ಸುವಾಸನೆಯಿಲ್ಲದ ಹೂಗಳು ಸುವಾಸನೆಯುಳ್ಳವಾಗುವಂತೆ ಮಾಡುವ, ಬಿಳಿ ಬಣ್ಣದ ಹೂಗಳು ರಂಗಮಯವಾಗುವಂತೆ ಮಾಡುವ, ಕೇವಲ ನಿರ್ದಿಷ್ಟ ಕಾಲದಲ್ಲಿ ಮಾತ್ರ ಹೂವು ಹಣ್ಣುಗಳನ್ನು ಬಿಡುವ ಸಸ್ಯಗಳು ಸರ್ವ ಋತುಗಳಲ್ಲಿಯೂ ಫಲಭರಿತವಾಗುವಂತೆ ಮಾಡುವ ವಿಧಾನಗಳು ನಮ್ಮ ಪೂರ್ವಜರಿಗೆ ಗೊತ್ತಿತ್ತು ಎನ್ನುವುದು ಈ ಅಧ್ಯಾಯದಿಂದ ಸ್ಪಷ್ಟವಾಗುತ್ತದೆ.

'ವೃಕ್ಷಾಯುರ್ವೇದ'ದಲ್ಲಿ ಬರೆದುದೆಲ್ಲವೂ ತಾನು ಸಂಶೋಧಿಸಿ ಬರೆದುದಲ್ಲ; ನಾನಾ ಮುನಿಗಳ ಗ್ರಂಥಗಳಿಂದ ಆರಿಸಿದ್ದು ಮಾತ್ರ ತನ್ನ ಕೆಲಸ ಎಂದು ಶಾರ್ಙ್ಗಧರನು ವಿನಮ್ರನಾಗಿ ಹೇಳಿಕೊಂಡಿದ್ದಾನೆ:

**"ಶಾಸ್ತ್ರಾಣಿ ತಾವದವಲೋಕ್ಯ**
**ಮಯಾ ಮುನೀನಾ**
**ಮರ್ಥಃ ಸ ಏವ ಗದಿತ:**
**ಪರಮಾರ್ಥಯುಕ್ತ್ಯಾ ।**
**ಏವಂ ವಿಲೋಕ್ಯ ನಿಖಿಲಂ ಚ**
**ವಿಚಾರಯಂತಃ**
**ಸಂತಃ ಸ್ವಭಾವತರಲಾ**
**ಮುದಮಾಪ್ನುವಂತು ॥"**



## ವಿಚಿತ್ರ ನ್ಯಾಯ

'ಕಣ್ಣಿಗೆ ಕಣ್ಣು, ಕಿವಿಗೆ ಕಿವಿ, ಜೀವಕ್ಕೆ ಜೀವ'ವೆಂಬ ಹಮ್ಮುರಾಬಿಯ ಕಠೋರ ನಿಯಮದ ಬಗ್ಗೆ ಇತಿಹಾಸದ ಪುಸ್ತಕಗಳಲ್ಲಿ ನಾವು ಸಾಕಷ್ಟು ಓದಿದ್ದೇವೆ. ಆದರೆ ಆಫ್ರಿಕದ ಕೆಲವು ಜನಾಂಗಗಳು ಈ ನಿಯಮವನ್ನು ಬೇರೆ ರೀತಿಯಲ್ಲಿ ಜಾರಿಗೆ ತಂದಿವೆಯೆಂಬುದು ಬಹುಶಃ ಅನೇಕರಿಗೆ ಗೊತ್ತಿರಲಿಕ್ಕಿಲ್ಲ.

ಈ ಜನಾಂಗಗಳಲ್ಲಿ ಕೊಲೆಯಾದರೆ ಕೊಲೆಪಾತಕಿಯನ್ನು ಕಂಡುಹಿಡಿದು ಅವನಿಗೆ ಜೀವಾವಧಿ ಸೆರೆಮನೆವಾಸವನ್ನು ವಿಧಿಸಲಾಗುತ್ತದೆ. ಆದರೆ ಆತ ಸೆರೆಮನೆಗೆ ಹೋಗುವ ಮೊದಲು ತಾನು ಕೊಲೆಮಾಡಿದವನ ಹೆಂಡತಿಯ ಬಳಿಯೋ ಅಕ್ಕತಂಗಿಯರ ಬಳಿಯೋ ಇರಬೇಕು. ಅಲ್ಲದೆ ಒಂದು ನಿರ್ದಿಷ್ಟ ಅವಧಿಯಲ್ಲಿ ಅವನಿಂದ ಮಕ್ಕಳಾಗಬೇಕು.

ಜೀವ ತೆಗೆದುಕೊಂಡವನು 'ಜೀವ ಕೊಟ್ಟರೇನೇ' ಅನ್ಯಾಯದ ಪರಿಮಾರ್ಜನೆ ಮಾಡಿದಂತಾಗುವುದೆಂಬುದು ಆ ಜನಾಂಗದವರ ಭಾವನೆ.

# ೫೦೦, ೬೦೦ ಏಕೆ?

ಬಿ. ಸುಬ್ರಾಯ ಅಡಿಗ

ಡಾ. ಭೀ. ಲಾ. ಅತ್ರೇ ತಮ್ಮ ಭಾಷಣ ಯಾತ್ರೆ ಮುಗಿಸಿ ಅಮೇರಿಕೆಯಿಂದ ಮರಳಿದಾಗ ನಾನು ಅವರಿಗೆ ಹಲವು ಪ್ರಶ್ನೆ ಹಾಕಿದೆ. 'ನೀವು ಸ್ವತಃ ವಿದ್ವಾಂಸರು; ಅಲ್ಲದೆ, ಭಾರತೀಯ ವಿದ್ವಾಂಸರ ಸಂಪರ್ಕದಲ್ಲೇ ಸದಾ ಇರುವವರು. ಅಮೇರಿಕೆಯಲ್ಲೂ ನೀವು ಹಲವಾರು ವಿದ್ವಾಂಸರನ್ನು ಭೆಟ್ಟಿಯಾಗಿರಬಹುದು. ಅವರಿಗೂ ನಮ್ಮ ದೇಶದ ವಿದ್ವಾಂಸರಿಗೂ ಏನಾದರೂ ಅಂತರ ಇದೆಯೆ!'— ಎಂದೆ ನಾನು.

'ಅಲ್ಲಿಯ ವಿದ್ವಾಂಸರು ತುಂಬ exact ಆಗಿದ್ದು ಎಂದೂ ತಮ್ಮ ಅನುಭವ ಮೀರಿ ಹೋಗುವುದಿಲ್ಲ'.

'exact = ಎಂದರೆ... ?'

'ನಮ್ಮ ವಿದ್ವಾಂಸರು ಮೊದಲು ನಿರ್ಣಯ ಮಾಡಿಕೊಂಡು, ಆ ಮೇಲೆ ಅಧ್ಯಯನದಿಂದ ಆ ನಿರ್ಣಯವನ್ನು ಕಂಡುಕೊಳ್ಳುತ್ತಾರೆ. ನಾವು ಮೇಲಿನಿಂದ ಕೆಳಗೆ ಹೋಗುತ್ತಿದ್ದರೆ, ಅವರು ಕೆಳಗಿನಿಂದ ಮೇಲೆ ಹೋಗುತ್ತಾರೆ. ತಮ್ಮ ಅನುಭವ ಹಾಗೂ ಅಧ್ಯಯನದಿಂದ ನಿಶ್ಚಯವಾದುದನ್ನಷ್ಟೇ ಅವರು ಮಾತುಕತೆಯ ವೇಳೆ ಹೇಳುತ್ತಾರೆ. ಆದ್ದರಿಂದ ಅವರನ್ನು ಭೇಟಿಯಾಗಿ ಒಂದು ಸ್ಥಿರತೆಗೆ ನಾವು ತಲುಪುತ್ತೇವೆ; ಮತ್ತು ನಿಶ್ಚಿತ ಪರಿಣಾಮವನ್ನು ಪಡೆಯುತ್ತೇವೆ.'

ಸಾಧಾರಣವಾಗಿ ಅವರ ಅಭಿಪ್ರಾಯ ನನಗೆ ಅರ್ಥವಾದರೂ, 'exact'ದ ಪೂರ್ಣ ಭಾವಸ್ಪರ್ಶ ನನಗಾಗಲಿಲ್ಲ. ಆಗಾಗ್ಗೆ ಈ ಶಬ್ದ ನನಗೆ ನೆನಪಾಗುತ್ತಿತ್ತು. ಆಗಲೇ ನಾನು ಒಮ್ಮೆ ಚೀನೀ ದಾರ್ಶನಿಕ 'ಲಿನ್ ಯೂ ತಾಂಗ'ನ ಒಂದು ಉದ್ಧರಣ ಓದಿದೆ. ಅದು ಹೀಗಿತ್ತು:— "ಅಮೇರಿಕನ್ ಹಾಗೂ ಏಷ್ಯನ್ ಮನೋವೃತ್ತಿಯಲ್ಲಿರುವ ಅಂತರ ಇಷ್ಟೇ. ಅಮೇರಿಕನ್ ಇಂಜಿನೀಯರನಿಗೆ ಒಂದು ಸುರಂಗ ತೋಡುವ ಕೆಲಸ ವಹಿಸಿಕೊಟ್ಟರೆ ಆತ ಬಲು ಜಾಗ್ರತೆಯಿಂದ ಅದರ ಚಿತ್ರಬಿಡಿಸಿ ಎರಡೂ ಕಡೆಗಳಿಂದ ತೋಡಲ್ಪಟ್ಟ ಸುರಂಗಗಳು ನಡುವೆ ನೇರಾಗಿ ಸೇರಿಸಿಕೊಳ್ಳುವಂತೆಯೂ ಸ್ವಲ್ಪ ಕೂಡ ಅಂತರ ಇರದಂತೆಯೂ ನೋಡಿಕೊಳ್ಳುವ. ಆದರೆ ಏಷ್ಯನ್ ಇಂಜಿನೀಯರನ ಚಿತ್ರದಂತೆ ಎರಡೂ ಕಡೆಗಳಿಂದ ತೋಡಲ್ಪಟ್ಟ ಸುರಂಗಗಳು ನಡುವೆ ಸೇರಿಕೊಳ್ಳದೆಯೇ ಅಕ್ಕಪಕ್ಕದಲ್ಲಿ ಹಾದು ಹೋಗುವ ಸಂಭವವೂ ಇದೆ. ತಮಾಷೆಯ ಸಂಗತಿಯೇನೆಂದರೆ ಅಮೇರಿಕನ್ ಇಂಜಿನೀಯರನ ಸುರಂಗದಲ್ಲಿ ೨–೩ ಇಂಚಿನ

ಅಂತರ ಬಂದರೂ, ಅದು ತನ್ನ ಸೋಲೆಂದೇ ಆತ ಭಾವಿಸಬಹುದು. ಆದರೆ ಏಪ್ಯನ್ ಇಂಜಿನೀಯರನ ಸುರಂಗಗಳು ಎಲ್ಲಿಯೂ ಸೇರದಿದ್ದರೂ— 'ಓ ಅದರಲ್ಲೇನು! ಒಂದಕ್ಕೆ ಬದಲು ಎರಡು ದಾರಿಗಳಾದಂತಾದವು! ಎಂದು ಆತ ತನ್ನಲ್ಲೇ ಸಮಾಧಾನ ತಿಳಿಯುವ!'

ಓದಿ ತುಂಬಾ ನಗು ಬಂತು; ಆದರೆ exact ಪದದ ಅರ್ಥ ಚನ್ನಾಗಿ ಅರಿವಾಯಿತು. exact ಎಂದರೆ ಸಂಪೂರ್ಣ ನಿಶ್ಚಿತ! ಒಂದು ಕೂದಲಿನಷ್ಟೂ ಅಂತರ ಬರಬಾರದು.

ನಾವು ಆ ವೇಳೆ ನಮ್ಮ ಜಿಲ್ಲೆಯ ಶಾರೀರಿಕ ಪ್ರದರ್ಶನ ಸಮಾರಂಭದ ಸಿದ್ಧತೆ ನಡೆಸಿದ್ದೆವು. ರೂರ್ಕಿಯ ಸೈನಿಕ ಮೈದಾನವನ್ನು ಇದಕ್ಕಾಗಿ ಆರಿಸಲಾಯಿತು. ಒಂದು ದಿನ ಪ್ರದರ್ಶನದ ಮುಖ್ಯ ವ್ಯವಸ್ಥಾಪಕರಾದ ಗಂಗಾಧರ ಸಿಂಹರು ಅಲ್ಲಿಯ ಸೈನಿಕ್ ಅಧಿಕಾರಿಯ ಭೆಟ್ಟಿಯಾದಾಗ, ಮಾತುಕತೆಯ ವೇಳೆ. ಪ್ರಮುಖ ಪ್ರದರ್ಶಕರಿಗಾಗಿ ನಿಮಗೆಷ್ಟು ಕುರ್ಚಿಗಳು ಬೇಕು! ಎಂದು ಅಧಿಕಾರಿ ಪ್ರಶ್ನಿಸಿದ. "ಸುಮಾರು ೫೦೦—೬೦೦ ಕುರ್ಚಿಗಳು ಸಾಕಾಗಬಹುದು" ಬಹು ಸರಳವಾಗಿ ಅವರೆಂದರು. 'ಈ೫೦೦—೬೦೦ ಏನು! ೫೯೯, ೫೧೨, ೫೨೫, ೫೭೦, ೫೮೫... ಅಥವಾ ೬೦೦, ಎಂದೇ ಹೇಳಿ'— ತಕ್ಷಣ ಅಧಿಕಾರಿ ಮಾರ್ನುಡಿದ.

ವಿಚಾರ, ಮಾತುಕತೆ ಹಾಗೂ ವ್ಯವಹಾರ ದಲ್ಲಿ exact ಆಗಿರುವುದು ಜೀವನದ ಉಚ್ಚ ಮಟ್ಟದ ಹೆಗ್ಗುರುತು. ಆ ದಿನ ನಾನು ಶ್ರೀ ಓಂಪ್ರಕಾಶ ಮಿತ್ತಲರೊಡನೆ ಎಲ್ಲೊ ಹೋಗುತ್ತಿದ್ದಾಗ, ಗೆಳೆಯರೊಬ್ಬರು ಭೆಟ್ಟಿ ಯಾಗಿ— ನಾಳೆ ಎಷ್ಟು ಹೊತ್ತಿಗಾದರೂ ನಿಮ್ಮನ್ನು ಕಾಣುವೆ' ಎಂದರು. 'ಯಾವುದೊ ಹೊತ್ತಿನಲ್ಲಿ ಯಾವ ಹೊತ್ತಿನಲ್ಲಿ ಎಂದು ಸ್ಪಷ್ಟ ವಾಗಿ ಹೇಳಿರಿ'— ಮಿತ್ತಲರೆಂದರು.

ನಕ್ಕು ಹೇಳಿದ ಮಾತಾದರೂ ಸರಿಯಾಗಿ ತ್ತಷ್ಟೆ? ಏಕೆಂದರೆ ನಾಳೆ ಎಷ್ಟು ಹೊತ್ತಿ ಗಾದರೂ ಎಂದರೆ ಹಗಲಿನ ೧೨ ತಾಸುಗಳಷ್ಟೇ ಅಲ್ಲ— ರಾತ್ರಿಯ ೪-೫ ತಾಸುಗಳೂ ಸೇರಿ- ಕೊಳ್ಳಬಹುದು. ಈ ಸ್ಥಿತಿಯಲ್ಲಿ ಯಾರಾ- ದರೂ ಯಾರನ್ನಾದರೂ ಎಷ್ಟು ಹೊತ್ತಿನ ವರೆಗೆ ಕಾದು ಕುಳಿತಿರಬಹುದು? ಅದೂ— ಅವರ ಬರುವಿಕೆಯೇ ಅನಿಶ್ಚಿತವಾಗಿರುವಾಗ!

'ಮಧ್ಯಾಹ್ನದ ಮೇಲೆ ಬರುವೆ'— ಅವರೆಂದರು.

ಇಷ್ಟಾದರೂ ಅವರು ತಮ್ಮ ಕಾರ್ಯ ಕ್ರಮದಲ್ಲಿ exact ಆಗಿಲ್ಲವೆಂಬುದು ತಿಳಿಯು- ವುದಲ್ಲವೇ ೧೨ರಿಂದ ೫ರವರೆಗೆ ಯಾವ ಹೊತ್ತಿಗೂ ಅವರು ಬರಬಹುದು. ನಿಶ್ಚಿತ ಸಮಯ ತಿಳಿಸದೆ ಬರೇ ಮಧ್ಯಾಹ್ನದ ಮೇಲೆ ಎಂದರೆ !

ಇಲ್ಲಿಯೇ ಗಾಂಧೀಜಿ ಹಾಗೂ ಸರದಾರ ಪಟೇಲರ ಒಂದು ಮನೋರಂಜಕ ಸಂಸ್ಮರಣೆ ನೆನಪಾಯಿತು. ಯಾವುದೋ ವಿಚಾರ ಕುರಿತು ಇಬ್ಬರೂ ಮಾತಾಡುತ್ತಿದ್ದರು. ಆಗ ಸರದಾರರು ಗಾಂಧೀಜಿಯನ್ನು ತಡೆದು— 'ಹೋಗಲಿ ಬಿಡಿ; ಎಷ್ಟು ಖರ್ಜೂರ ನೆನೆಯಿಸಲಿ' ಎಂದರು.

'೧೫ ಖರ್ಜೂರ ನೆನೆಯಿಸು'— ಎಂದರು ಗಾಂಧೀಜಿ.

'೧೫ ಏಕೆ! ೨೦ ನೆನೆಯಿಸುವೆ. ೧೫—೨೦ ರೊಳಗೆ ಅಂತಹ ಅಂತರವಾದರೂ ಏನಿದೆ!

'ಒಳ್ಳೇದು; ಹಾಗಿದ್ದರೆ ಹತ್ತೇ ನೆನೆಯಿಸಿ ಬಿಡು'— ಗಾಂಧೀಜಿ ಉತ್ತರಿಸಿದರು:—

'ಆಂ! ಹತ್ತೆ?'— ಸರದಾರರು ಬೆಚ್ಚಿ ಕೇಳಿ ದಾಗ ಗಾಂಧೀಜಿ ಉತ್ತರಿಸಿದರು:— 'ಬೆಚ್ಚಿದೆಯೇಕೆ? ೧೫-೨೦ರಲ್ಲಿ ಅಂತಹ ಅಂತರ ವಿಲ್ಲದ ಮೇಲೆ ೧೦-೧೫ರಲ್ಲಿ ಅಂತರವಿದೆಯೆ?'

೧೦—೧೫ರಲ್ಲಿ ಅಂತರ ಇದ್ದೆ ಇದೆ. ಆದರೆ ೭, ೮ ರಲ್ಲೂ ಅಂತರವಿದೆಯೆಂದು ಆ ದಿನ ನನಗೆ ತಿಳಿಯಿತು.

'ಯಾವ ಗಾಡಿಯಿಂದ ಹೋಗುವಿ?'— ಮಿತ್ರನೊಬ್ಬನನ್ನು ಓಂಪ್ರಕಾಶ ಮಿತ್ತಲ್ ಕೇಳಿದರು.

'೭—೮ ಗಂಟೆಯ ಗಾಡಿಯಿಂದ ಹೋಗುವೆ'— ಮಿತ್ರ ಉತ್ತರಿಸಿದ.

'ನಿನಗೆ ಗಾಡಿ ಖಂಡಿತ ಸಿಗುವುದು'— ನಗುತ್ತಾ ನುಡಿದರು. ಮಿತ್ತಲ್.

'ಅದೇಕೆ? ಏನಾಯಿತು?'— ಎಂದು ಆತ ಪ್ರಶ್ನಿಸಿದಾಗ ಅವರೆಂದರು— 'ಅಂತಹ ವಿಶೇಷವೇನೂ ಇಲ್ಲ; ನೀನು ೭ ಗಂಟೆಗೆ ಸ್ಟೇಶನಿಗೆ ಹೋದರೆ, ನಿಮಗೆ ದಿಲ್ಲಿಗೆ ಹೋಗುವ ಗಾಡಿ ಸಿಗುವುದು; ೮ಕ್ಕೆ ಹೋದರೆ ಅಂಬಾಲಾಕ್ಕೆ ಹೋಗುವ ಗಾಡಿ ತಪ್ಪದೆ ಸಿಗುವುದು!'

ಓ! ಒಂದು ತಾಸಿಗೆ ಎಷ್ಟು ಬೆಲೆ ಬಂತೆಂದರೆ ಪೂರ್ವಕ್ಕೆ ಹೋಗುವ ಪ್ರವಾಸಿ ಪಶ್ಚಿಮಕ್ಕೆ ಹೋಗಬೇಕಾದೀತು. ಈ ತಾಸೇ ಅತಿ ಸಣ್ಣ ಕಾಲಮಾನವಲ್ಲ. ಇದರ ೬೦ನೇ ಒಂದು ಭಾಗ ಮಿನಿಟು; ಅದರ ೬೦ ರಲ್ಲೊಂದು ಭಾಗ ಸೆಕಂಡು. ನೀವು ಸೆಕಂಡಿನ ಮುಳ್ಳು ನೋಡಿರಬಹುದು... ಕ್ಷಣ ಮಾತ್ರದಲ್ಲಿ ಒಂದು ಸುತ್ತು ಸುತ್ತಿ ಬರುತ್ತದೆ.

ಈ ಮಿನಿಟು ಹಾಗೂ ಸೆಕೆಂಡುಗಳು ಬಲು ಶಕ್ತಿ ಶಾಲೀ ತತ್ವಗಳಾಗಿದ್ದು ಮನುಷ್ಯನ ಭಾಗ್ಯವನ್ನೇ ಬದಲಾಯಿಸಬಲ್ಲವು. ಏಕೆಂದರೆ ನಿಮ್ಮ ಜನ್ಮದ ಸಮಯವನ್ನು ಗುರುತಿಸಿಕೊಳ್ಳಲು ಮಾತಾಪಿತರು ಸ್ವಲ್ಪ ಅಸಡ್ಡೆ ಮಾಡಿದರೆಂದರೆ ಫಲಿತ ಜ್ಯೋತಿಷದಂತೆ ನಿಮ್ಮ ಜನ್ಮ ಲಗ್ನವೇ ಬದಲಾಗಬಹುದು. ಮತ್ತು ಅದರಿಂದಾಗಿ ನಿಮ್ಮ ಭಾಗ್ಯ ಫಲವೇ ಬೇರಾಗಬಹುದು. ಈ ಸ್ಥಿತಿಯಲ್ಲಿ 'ನೀವು ಯೋಗ್ಯ ವಧುವನ್ನು ಪಡೆಯಲಾರದೆ ಹೋಗಬಹುದು. ಏಕೆಂದರೆ ನಿಮ್ಮ ಜಾತಕ ಆಕೆಯ ಜಾತಕಕ್ಕೆ ಸರಿ ಹೊಂದದೇ ಹೋಗಬಹುದು.

ಈ ಮಿನಿಟು ಸೆಕೆಂಡುಗಳ ಸಂಗತಿ ಪುರಾಣಾದಿಗಳ ವಿಚಾರ ಅಷ್ಟೇ ಅಲ್ಲ—ವೈಜ್ಞಾನಿಕ ಪ್ರಶ್ನೆಯೂ ಹೌದು. ಹೀಗಾಗಿ ನಾವದನ್ನು ಹೀಗೆಯೇ ಬಿಟ್ಟು ಬಿಡುವಂತಿಲ್ಲ. ಅಂತರರಾಷ್ಟ್ರೀಯ ಜ್ಯೋತಿಷ್ಯ ಸಮ್ಮೇಳನವು ತನ್ನ ಡಬ್ಲಿನ್ ಅಧಿವೇಶನದಲ್ಲಿ ಇಂದಿನ ಸೆಕಂಡನ್ನು ಬಹು ದೊಡ್ಡದೆಂದು ಲೆಕ್ಕಿಸಿ ಒಂದು ಹೊಸ ಸೆಕೆಂಡನ್ನು ಅಂಗೀಕರಿಸಿತು. ಇದರ ವೇಳೆಗೆ ೬೬½ ದಿನಗಳಲ್ಲಿ ಮನುಷ್ಯನಿಗೆ ಒಂದು ಸೆಕೆಂಡಿನಂತೆ ಪ್ರತಿವರ್ಷ ೫½ ಸೆಕೆಂಡು ಹಾಗೂ ೧೧ ವರ್ಷಗಳಲ್ಲಿ ಒಂದು ನಿಮಿಷ ಲಾಭವಾಗುವುದು. ಹೀಗೆಯೇ ಮುಂದಾದರೆ ೬೫೫ ವರ್ಷಗಳಲ್ಲಿ ಸುಮಾರು ಒಂದು ತಾಸು ಲಾಭವಾದಂತಾಗುವುದು!

ನಾವಿದನ್ನು ವೈಜ್ಞಾನಿಕ ತಿಳಿಗೇಡಿತನ ಎನ್ನೋಣವೆ? ತೇನಸಿಂಗ್ ಮತ್ತು ಹಿಲೇರಿ ಒಟ್ಟಿಗೆ ಎವರೆಸ್ಟ್ ಶಿಖರವನ್ನೇರಿದರು. ಆದರೆ ಇಬ್ಬರಲ್ಲಿ ಯಾರು ಮೊದಲು ಶಿಖರದ ಮೇಲೆ ಹೆಜ್ಜೆಯಿಟ್ಟರೆನ್ನುವುದು ಇಂದಿಗೂ ಮಹತ್ವದ ಪ್ರಶ್ನೆಯಾಗಿಯೇ ಉಳಿದಿದೆ. ಇಬ್ಬರಲ್ಲೂ ಹೆಚ್ಚು ಅಂತರವಿಲ್ಲವೆನ್ನುವುದು ನಿಜ. ಆದರೆ ಈ ಅತ್ಯಲ್ಪ ಅಂತರದಲ್ಲೇ ಪ್ರಪಂಚದ ಮಹಾ ಪ್ರಶ್ನೆಯೊಂದು ಅಡಗಿದೆ. ಅದೂ ಪ್ರಪಂಚದ ಅತ್ಯುಚ್ಚ ಶಿಖರವನ್ನು



ಮನೆಯೇ ಗುಡಿಯಮ್ಮ

ಪತಿಯೇ ದೇವರಮ್ಮ

ಜಯಿಸಿದವನು ಪೌರಸ್ತ್ಯನೆ! ಪಾಶ್ಚಾತ್ಯನೆ? ಇಷ್ಟು ದೊಡ್ಡ ಪ್ರಶ್ನೆಗೆ ಇನ್ನೊಂದು ಕಾಲ್ಪನಿಕ ಪ್ರಶ್ನೆ ಕೇಳುವುದಾದರೆ ಅಮೇರಿಕೆ ಹಾಗೂ ಭಾರತದಿಂದ ಎರಡು ವಿಮಾನಗಳು ಒಂದೆ ಹೊತ್ತಿಗೆ ಹೊರಟು ೨-೩೫ಕ್ಕೆ ಸರಿಯಾಗಿ ಮಂಗಳ ಲೋಕವನ್ನು ಪ್ರವೇಶಿಸಿದರೆ, ಮಂಗಳ ಲೋಕದಲ್ಲಿ ಪ್ರಥಮ ಪ್ರವೇಶಿಸಿದ ಗೌರವ ಯಾರಿಗೆ ದೊರೆಯಬೇಕು. ಈ ಹೊಸ ಕಿರು ಸೆಕೆಂಡಿನ ಸಮರ್ಥನೆ ದೊರೆತವನೇ ಅದನ್ನು ಪಡೆಯುತ್ತಾನೆಂಬುದು ನಿರ್ವಿವಾದ.

ಜೀವನದಲ್ಲಿ exact ಆಗಲು ಸೆಕೆಂಡು, ಮಿನಿಟು, ಗಂಟೆ ಅಥವಾ ದಿನಗಳ ಪ್ರಶ್ನೆಯಷ್ಟೆ ಅಲ್ಲ!– ಒಂದು ಶಬ್ದ, ಒಂದು ಸ್ಪರ್ಶ ಇವುಗಳ ಮಹತ್ವವೂ ಇದೆ. ಈ ಎರಡೂ ಬಗೆಯ ಉದಾಹರಣೆಗಳು ಮಹಾದೇವ ದೇಸಾಯಿಯವರ ದಿನಚರಿಯಲ್ಲಿ ಸುರಕ್ಷಿತವಾಗಿವೆ.

ಗಾಂಧೀಜಿ ಆಗಿನ ಭಾರತದ ಕಾರ್ಯದರ್ಶಿ ಸ್ಯಾಮ್ಯುವಲ್ ಹೋರ್‌ರಿಗೆ ಜೈಲಿನಿಂದ ಒಂದು ಪತ್ರ ಬರೆದರು. ಅದರಲ್ಲಿ ಒಂದು ವಾಕ್ಯ ಹೀಗಿತ್ತು... "ನಾನು ನಿಮಗೆ ತುಂಬಾ ಕೃತಜ್ಞನಾಗಿದ್ದೇನೆ.' ಆದರೆ ಆ ಬಳಿಕ ಅವರು 'ತುಂಬಾ' ಎಂಬ ಶಬ್ದವನ್ನು ತೆಗೆಯಿಸಿಬಿಟ್ಟರು.

ಅದೇ ಜೇಲಿನಲ್ಲಿ ಒಂದು ದಿನ ಸರದಾರ ಪಟೇಲರು ಗಾಂಧೀಜಿಗಾಗಿ ಸೋಡಾ ಹಾಗೂ ನಿಂಬೆ ರಸವನ್ನು ಬೆರಸುತ್ತಿದ್ದರು. ಆಗಲೇ ಗಾಂಧೀಜಿ ಅವರನ್ನು ಗದರಸಿ ಹೀಗೆಂದರು. "ನಿಮಗೆ ನರ್ಸಿಂಗ್ ತರಬೇತಿ ಅಗತ್ಯ. ನೀವು ಚಮಚೆಯನ್ನು ತುದಿಯಿಂದ ಹಿಡಿದುಕೊಳ್ಳುವ ಬದಲು ಬುಡದಲ್ಲಿ ಹಿಡಿಯುತ್ತೀರಿ. ಇಡೀ ಚಮಚೆಯೇ ನೀರಲ್ಲಿ ಮುಳುಗುವುದು. ಹೀಗಾಗಿ ಅದನ್ನು ಕೈಯಿಂದ ಮತ್ತೆ ಮುಟ್ಟಬಾರದು. ಅಲ್ಲದೆ ನೀವು ನಿಮ್ಮ ಮುಖ ಉಜ್ಜುವ ಕರವಸ್ತ್ರದಿಂದಲೇ ಈ ಚಮಚೆಯನ್ನು ಉಜ್ಜಿದ್ದೀರಿ. ಯಾವಳಾದರೂ ನರ್ಸ್ ಆಪರೇಶನ್ ಕೋಣೆಯಲ್ಲಿ ಹೀಗೆ ಮಾಡಿದಳೆಂದರೆ ಅವಳನ್ನು ತಕ್ಷಣ ಡಿಸ್‌ಮಿಸ್ ಮಾಡಲಾಗುವುದೆಂದು ನಿಮಗೆ ತಿಳಿದಿದೆಯೇ?"

ಆದ್ದರಿಂದ ಜೀವನವನ್ನು ಹಾಳು ಮಾಡುವಂತಹ ದೋಷ ಪ್ರಮಾದಗಳನ್ನು ತಪ್ಪಿಸಿಕೊಳ್ಳಬೇಕು. ವ್ಯವಸ್ಥೆ ಹಾಗೂ ನಿಯಮಿತತನದ ಕ್ರಮಗಳನ್ನು ಪರಿಪಾಲಿಸಿರಿ. ಸಂಕ್ಷೇಪವಾಗಿ ಹೇಳುವುದಾದರೆ ಸರಿಯಾಗಿ ಕೆಲಸ ಮಾಡಿರಿ. ಕಲಸ ಮಾಡಿರಿ ಸರಿಯಾದ ಮತ್ತು ವೇಳೆಯಲ್ಲಿ ಸರಿಯಾದ ಕೆಲಸ ಮಾಡಿರಿ... ಅಂದರೆ exact ಆಗಿಬಿಡಿರಿ ! ✡

(ಆಧಾರದಿಂದ)



## ಮಹತ್ವದ ವರ್ಷಗಳು

ಯಾವದೇ ವ್ಯಕ್ತಿಯು ಜೀವನದಲ್ಲಿ ಮೊದಲಿನ ಮೂವತ್ತು ವರ್ಷಗಳೇ ಮಹತ್ವಪೂರ್ಣವಾದವುಗಳು. ಈ ಮೂವತ್ತು ವರ್ಷಗಳಲ್ಲಿ ಆತ ತನ್ನ ವಿದ್ಯಾಭ್ಯಾಸ, ಕ್ರೀಡಾಕೌಶಲ್ಯ, ಉಪಜೀವನಕ್ಕಾಗಿ ವೃತ್ತಿಶೋಧ ಮುಂತಾದ ಗುರಿಗಳನ್ನೆಲ್ಲ ಈಡೇರಿಸಿಕೊಳ್ಳುತ್ತಾನೆ. ಮೂವತ್ತರ ನಂತರದ ಆಯುಷ್ಯ ಕೇವಲ ಚರ್ವಿತ ಚರ್ವಣವಾಗುತ್ತ ಹೋಗುತ್ತದೆ. ನಂತರದ ಬಾಳು ನೀರಸವೆನಿಸಿದರೇನೂ ಅಚ್ಚರಿ ಪಡಬೇಕಾಗಿಲ್ಲ ಎಂದು ಕ್ಲೀವಲ್ಯಾಂಡ್ ವಿಶ್ವವಿದ್ಯಾಲಯದ ಡಾ. ಕೆನ್ ರೋಜರ್ಸ್‌ರ ಸಂಶೋಧನ.

# ಡಯನೆಟಿಕ್ಸ್

ವಿ. ಎಸ್. ಶೂರಿ

ಮನುಷ್ಯನನ್ನು ಸೃಷ್ಟಿಯ ಸಾಸಿರ ಪ್ರಾಣಿವರ್ಗಗಳಿಂದ ಪ್ರತ್ಯೇಕವಾಗಿ, ಅವುಗಳಿಗಿಂತ ಉಚ್ಚಮಟ್ಟದಲ್ಲಿ ಪ್ರತಿಷ್ಠಿತವಾಗಿ ಮಾಡಿರುವುದು ಅದ್ಭುತವಾದ ಅವನ ಮನಸ್ಸು. ನದಿಯಂತೆ ನಿರಂತರವಾಗಿ ಹರಿಯುತ್ತಿರುವ, ಸಾಗರದಂತೆ ಅಗಾಧವಾಗಿರುವ, ಚಿಟ್ಟೆಯಂತೆ, ಮಿಂಚಿನಂತೆ ಮಿನುಗುತ್ತಿರುವ, ಗಾಳಿಯಂತೆ ಚಂಚಲವಾಗಿರುವ ಮನಸ್ಸಿನ ನೂರು ನೂರು ಚಲನೆಗಳನ್ನು ಕವಿ, ಕಲಾವಿದ, ಜ್ಞಾನಿ, ವಿಜ್ಞಾನಿಗಳು ಅನಾದಿ ಕಾಲದಿಂದ ಈಕ್ಷಿಸಿ, ವೀಕ್ಷಿಸಿ, ವಿಶ್ಲೇಷಿಸಿ ಅದನ್ನು ಪರಿಪೂರ್ಣವಾಗಿ ಗ್ರಹಿಸಲಾರದೆ ಅಚ್ಚರಿಯ ಉದ್ಗಾರಗಳನ್ನು ಎಳೆಯುತ್ತಲೇ ಇದ್ದಾರೆ.

ಆದರೆ ಇಲ್ಲಿ ಜ್ಞಾನಿ. ವಿಜ್ಞಾನಿಗಳ ದೃಷ್ಟಿಗಳಲ್ಲಿ ಸರ್ವೇಸಾಮಾನ್ಯವಾಗಿ ಕಾಣ ಬರುವ ವ್ಯತ್ಯಾಸವನ್ನು ಗಮನಿಸಬಹುದು. ಕವಿ ದೃಷ್ಟಾರರು ಮನಸ್ಸು ಮನುಷ್ಯನನ್ನು ಉನ್ಮುಖವಾಗಿ ಒಯ್ಯುವ ಒಂದು ಸಾಧನವೆಂಬ ದೃಷ್ಟಿಯಿಂದ ನೋಡುತ್ತಾರೆ, ಅದರ ಊಹಾಶಕ್ತಿ, ಕಲ್ಪನಾಶಕ್ತಿ, ಸ್ಮರಣಶಕ್ತಿಗಳನ್ನು ಹೊಗಳುತ್ತಾರೆ. ವಿಜ್ಞಾನದ ದೃಷ್ಟಿಯಲ್ಲಿ ಮನಸ್ಸು ಒಂದು ಯಂತ್ರದಂತೆ ಕಾಣಿಸುತ್ತದೆ. ಫ್ರಾಯ್ಡನ ತತ್ವಗಳನ್ನಾಗಲೀ, ಪಾವ್ಲೋವನ ಪ್ರೇರಿತ ಪರಾವರ್ತಿತ ಪ್ರತಿಕ್ರಿಯೆಗಳನ್ನಾಗಲಿ, ಚರ್ಯಾ ತತ್ವವನ್ನಾಗಲೀ (Behaviorism) ಅಭ್ಯಸಿಸಿದಾಗ ಮನಸ್ಸಿನ ಅಸಹಾಯಕತೆ ನಕಾರ ವರ್ತನೆ ಯಾಂತ್ರಿಕತೆ ಮುಂತಾದ ವರ್ತನಗಳೇ ನಮ್ಮ ಗಮನಕ್ಕೆ ಪ್ರಮುಖವಾಗಿ ಬರುತ್ತವೆ. ಇತ್ತೀಚೆಗೆ ಕಂಪ್ಯೂಟರ್‌ಗಳು ಬಂದ ಮೇಲಂತೂ ಈ ಸಾಮ್ಯ ಬಹುತೇಕವಾಗಿ ಎತ್ತಿ ಕಾಣಿಸಿಕೊಳ್ಳುತ್ತಿದೆ.

ಮಾನಸಶಾಸ್ತ್ರಗಳಲ್ಲಿ ಒಂದು ಪ್ರಭೇದವಾದ, ಡಯೇನೆಟಿಕ್ಸ್ (dianatics) ಎಂಬ ಶಾಸ್ತ್ರದಲ್ಲಿ ಮನಸ್ಸು ಒಂದು ರಿಕಾರ್ಡ್ ಪ್ಲೇಯರ್ ಏನೋ ಎಂಬ ಭಾವನೆ ಬರುವಂತೆ ವರ್ಣಿಸಲಾಗಿದೆ.

ಡಯೇನೆಟಿಕ್ಸ್ ಶಾಸ್ತ್ರವನ್ನು ಪ್ರಥಮವಾಗಿ ಆರ್. ಎಲ್. ಹಬ್ಬರ್ಡ ಎಂಬಾತನು ಪ್ರತಿಪಾದಿಸಿದನು, ಪೂರ್ವ, ಪಶ್ಚಿಮಗಳೆಲ್ಲವನ್ನೂ ಅಲೆದು ಬಂದು ಅಲ್ಲಲ್ಲಿ ಬೇರೆ ಬೇರೆ ವಿಜ್ಞಾನಿಗಳು, ಜ್ಞಾನಿಗಳು ಕಂಡುಕೊಂಡಿದ್ದ ತತ್ವಗಳನ್ನು ಶೋಧಿಸಿ ಪಾಕಗೊಳಿಸಿ ತನ್ನ ಡಯೇನೆಟಿಕ್ಸ್ ಶಾಸ್ತ್ರವನ್ನು ತಯಾರಿಸಲಾಗಿದೆಯೆಂದು ಆತ ಹೇಳಿಕೊಂಡಿದ್ದಾನೆ. "ಡಯೇನೆಟಿಕ್ಸ್" ಎಂದರೆ ಮಾನಸಿಕ ಆರೋಗ್ಯ ಶಾಸ್ತ್ರವೆಂದರ್ಥ. ಅದನ್ನು ಅಭ್ಯಸಿಸಿ ದೈನಂದಿನ ಕಾರ್ಯದಲ್ಲಿ ಅಳವಡಿಸಿಕೊಳ್ಳುವುದರಿಂದ ಮನುಷ್ಯನು ಉದ್ಧಾರವಾಗಬಲ್ಲನೆಂದು ಆತ ನಂಬುತ್ತಾನೆ.

ಡಯೇನೆಟಿಕ್ಸ್‌ನ ಮೂಲಭೂತ ಸಿದ್ಧಾಂತವೇನು? ಡಯೇನೆಟಿಕ್ಸ್ ಪ್ರಕಾರ ಮನುಷ್ಯ ಅಪಸರಣಗೊಂಡಿದ್ದಾನೆ. (Aberrated) ಅವನ ಬುದ್ಧಿ ಶಕ್ತಿ ಎಷ್ಟೇ ಇರಲಿ, ಅವನು ಕೆಲಸಗಾರನಾಗಿರಲಿ, ಕಲಾವಿದನಾಗಿರಲಿ, ವಿಜ್ಞಾನಿಯಾಗಿರಲಿ, ಸರ್ವೇಸಾಧಾರಣವಾಗಿ ಮನುಷ್ಯನ ವ್ಯಕ್ತಿತ್ವ "ಕರ್ದಮಮಯವಾಗಿದೆ." ಇದಕ್ಕೆ ವಿರುದ್ಧವಾಗಿ, ಬಗ್ಗಡವಿಲ್ಲದ "ಸ್ವಚ್ಛ" ವ್ಯಕ್ತಿಯನ್ನು ಪ್ರತಿಪಾದಿಸಲಾಗಿದೆ. ಕರ್ದಮಮಯ ವ್ಯಕ್ತಿಯನ್ನು ಸ್ವಚ್ಛಕ್ಕೆ ಒಯ್ಯುವುದೇ ಡಯೇನೆಟಿಕ್ಸ್‌ನ ಉದ್ದೇಶ.

ನಾಗರಿಕತೆಯಲ್ಲಿ ಇಂದು ಯಾವ ವ್ಯಕ್ತಿಯನ್ನು ಸಾಮಾನ್ಯನೆಂದು ಭಾವಿಸುತ್ತೇವೆಯೋಅವನು ಕೂಡ ಡಯೇನೆಟಿಕ್ಸ್‌ನ ದೃಷ್ಟಿಯಲ್ಲಿ ಕರ್ದಮಮಯ ವ್ಯಕ್ತಿ. ಸಾಮಾನ್ಯ ವ್ಯಕ್ತಿಗೂ ಡಯೇನೆಟಿಕ್ಸ್‌ನ ಸ್ವಚ್ಛ ವ್ಯಕ್ತಿಗೂ ಎಷ್ಟು ಅಂತರವಿದೆಯೆಂದರೆ ಸಮಾಜದ ಅದೇ ಸಾಮಾನ್ಯ ವ್ಯಕ್ತಿಗೂ ಹುಚ್ಚನಿಗೂ ಇರುವಷ್ಟು ಅಂತರ! ಸ್ವಚ್ಛ ವ್ಯಕ್ತಿಗೂ ಕರ್ದಮ ವ್ಯಕ್ತಿಗೂ ಇರುವ ಅಂತರವನ್ನು ಹೀಗೆ ವರ್ಣಿಸಬಹುದು. ಸ್ವಚ್ಛ ವ್ಯಕ್ತಿಯ ಮನಃಪಟಲದಲ್ಲಿ ಕಾಲಗತಿ (Time track) ಅಂಕುಡೊಂಕುಗಳಿಲ್ಲದೆ ಸರಳವಾಗಿ ಮುಂದ್ರಿತವಾಗಿರುತ್ತದೆ. ಆತನ ಸ್ಮರಣಶಕ್ತಿ ತ್ರಿಗಾತ್ರವಾಗಿರುತ್ತದೆ. ಸಾಧಾರಣ ವ್ಯಕ್ತಿಯೊಬ್ಬನನ್ನು ಗತಿಸಿದ ಘಟನೆಯನ್ನು ನೆನೆಸಿಕೋ ಎಂದು ಕೇಳಿ. ಒಬ್ಬಾತನಿಗೆ ಘಟನೆ ದೃಶ್ಯ ರೂಪದಲ್ಲಿ ಸ್ಮರಣೆಯಾಗುತ್ತದೆ. ಇನ್ನೊಬ್ಬನಿಗೆ ದೃಶ್ಯ ಸ್ಮರಣೆಯಿರುವುದಿಲ್ಲ, ಆತನಿಗೆ ಕೇವಲ ಶಬ್ದರೂಪ ಸ್ಮರಣೆಯಿರುತ್ತದೆ. ಘಟನೆಯಲ್ಲಿ ಜರುಗಿದ ಸಂಭಾಷಣೆ ಮಾತ್ರ ಆತನಿಗೆ ನೆನಪಾಗುತ್ತದೆ. ಅಷ್ಟೇ ಅಲ್ಲ, ದೃಶ್ಯರೂಪದಲ್ಲಿ ನೆನಪಾದವರಿಗೆ ದೃಶ್ಯ ಸ್ಮೃತಿ ಪಟಲದ ಮೇಲೆ ವರ್ಣರಹಿತವಾಗಿ, ಅಸ್ಪಷ್ಟವಾಗಿ ನೆನಪಿಗೆ ಕನಿಷ್ಠ ಮಾತ್ರ ಸಾಕಾಗುವಷ್ಟು ವಿವರಣೆಗಳು ಕಾಣಿಸಿಕೊಳ್ಳುತ್ತವೆ. ದೃಶ್ಯದ ಮೂಲವರ್ಣಗಳಾಗುವುವೂ ನೆನಪಿನ ಸಂದರ್ಭದಲ್ಲಿ ಅವನಿಗೆ ಕಾಣಿಸುವುದಿಲ್ಲ. ಅಂದರೆ ಒಂದು ಘಟನೆಯ ಪೂರ್ಣ ಸ್ವರೂಪದ ನೆನಪು– ಬಣ್ಣ, ಶಬ್ದ, ಸ್ಪರ್ಶಗಳು– ಆತನಿಗೆ ಆಗುವುದಿಲ್ಲವೆಂದರ್ಥ. "ಸ್ವಚ್ಛವ್ಯಕ್ತಿ" ಯಾವ ಘಟನೆಯನ್ನಾದರೂ ಈ ಮೂರನ್ನೂ ಒಳಗೊಂಡ ಪೂರ್ಣರೂಪದಲ್ಲಿ ಸ್ಮರಿಸಿಕೊಳ್ಳಬಲ್ಲನು. ಹಿಂದಿನ ಅವನ ಜೀವನದ ಕಾಲಗತಿಯಲ್ಲಿ ಯಾವ ಕ್ಷಣಕ್ಕಾದರೂ ಆತನು ಕ್ರಮಬದ್ಧವಾಗಿ, ಸುಸ್ಪಷ್ಟವಾಗಿ ಹೋಗಿ ಬರಬಲ್ಲನು.

ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ಒಬ್ಬಾತ ಒಮ್ಮೆ ರಸ್ತೆಯಲ್ಲಿ ಹೋಗುತ್ತಿದ್ದಾಗ, ಹಠಾತ್ತನೆ ಎಲ್ಲಿಂದಲೋ ಒಂದು ಹುಚ್ಚು ನಾಯಿ ಹಾರಿ ಬಂದು ಅವನನ್ನು ಕಚ್ಚಿ ಬೀಳಿಸಿ ಓಡಿಹೋಯಿತು. ನಂತರ ಆತನಿಗೆ ವೈದ್ಯರು ಸೂಕ್ತವಾದ ಔಷಧಿಯನ್ನು ಕೊಟ್ಟರು. ಎಲ್ಲವೂ ಸರಿಹೋಯಿತು. ಆದರೆ ಆತನಿಗೆ ಈಗ ನಾಯಿಗಳನ್ನು ಕಂಡರೆ ಭಯ. ರಸ್ತೆಯಲ್ಲಿ ನಾಯಿಯನ್ನು ಕಂಡರೆ ಆತ ಇನ್ನೊಂದು ಬದಿಗೆ ಹೋಗುತ್ತಾನೆ. "ಎಲ್ಲಾ ನಾಯಿಗಳೂ ಹುಚ್ಚಲ್ಲ. ಎಲ್ಲಾ ನಾಯಿಗಳೂ ಕಚ್ಚುವುದಿಲ್ಲ." ಎಂದು ತರ್ಕಬದ್ಧವಾಗಿ ತನಗೆ ತಾನೇ ಆತ ನೂರು ಬಾರಿ ಹೇಳಿಕೊಂಡರೂ ನಾಯಿಯನ್ನು ಕಂಡ ಕ್ಷಣವಲ್ಲೇ ಆತ ಹಿಂದಿನ ಪ್ರತಿಕ್ರಿಯೆಯನ್ನೆ ತೋರಿಸುತ್ತಾನೆ. ಅನೇಕ ವೇಳೆ, "ನೀನೇಕೆ ಹೀಗೆ ಹೆದರುತ್ತೀಯೇ?" ಎಂದು ಕೇಳಿದಾಗ ಆತನಿಗೆ ಉತ್ತರ ಕೊಡಲು ಸಾಧ್ಯವಾಗದು. ಆತನು ನಾಯಿ ಕಚ್ಚಿದ್ದ ವಿಷಯವನ್ನು ಮರೆತೇ ಹೋಗಿರಬಹುದು. ಇದಕ್ಕೆ ವಿರುದ್ಧವಾಗಿ ಸ್ವಚ್ಛ ವ್ಯಕ್ತಿಯನ್ನು ತೆಗೆದುಕೊಳ್ಳೋಣ. ಆತನಿಗೆ ಆ ಘಟನೆಯ ತ್ರಿಗಾತ್ರ ಸ್ಮರಣೆ ಇರುತ್ತದೆ. ಅಷ್ಟೇ ಅಲ್ಲ, ಆ ಘಟನೆಯನ್ನು ನೆನೆಸಿಕೊಂಡಾಗ ಆತನಿಗೆ ಯಾವ ವಿಧವಾದ ಮನೋವಿಕಾರವು ಆಗುವುದಿಲ್ಲ. ರಸ್ತೆಯಲ್ಲಿ ನಾಯಿಯನ್ನು ಕಂಡರೆ ಆತನು ಬೇರೆ ಬದಿಗೆ ಹೋಗುವುದಿಲ್ಲ. ನಾಯಿಗಳನ್ನು ಅವನು ದ್ವೇಷಿಸುವುದೂ ಇಲ್ಲ.

ಇದೇ ಜಾಡನ್ನು ಹಿಡಿದು ಹೋದರೆ ಡಯೇ-

ನೆಟಿಕ್ಸ್‌ನ ಮಂತ್ರೊಂದು ಮೂಲ ತತ್ವಕ್ಕೆ ಬರಬಹುದು. ಮನುಷ್ಯ ಜೀವನದ ನೋವಿನ ನಿಮಿಷಗಳನ್ನು ಆದಷ್ಟು ಮರೆಯಲು ಯತ್ನಿಸುತ್ತಾನೆ. ಮತ್ತು ಸುಖದ ನಿಮಿಷಗಳನ್ನು ನೆನೆಸಿಕೊಳ್ಳಲು ಹವಣಿಸುತ್ತಿರುತ್ತಾನೆ.

ಮನುಷ್ಯನ ಜೀವನಾವಸ್ಥೆಯನ್ನು ಎರಡು ಧ್ರುವಗಳತ್ತ ಓಲಾಡುತ್ತಿರುವಂತೆ ವರ್ಣಿಸಬಹುದು ಬದುಕು ಮತ್ತು ಸಾವು, ಸುಖ ದುಃಖಗಳೇ ಅವುಗಳ ರೂಪಕಗಳು. ದುಃಖ, ಕೋಪ, ವ್ಯಾಕುಲ, ದೈಹಿಕ ನೋವು, ಇವುಗಳು ಅಳಿಯುವಿಕೆಯ ಸಂಕೇತಗಳು. ಸುಖ ಸಂತೋಷಗಳು ಉಳಿಯುವಿಕೆಯ ಸಂಕೇತಗಳು. ಜೀವನದ ಮೂಲ ಮಂತ್ರವೆಂದರೆ ಉಳಿ, ಉಳಿ, ಉಳಿ, ಎಂದು. ಸುಖ ಹೆಚ್ಚಿದಷ್ಟೂ ಜೀವನಾವಸ್ಥೆಯು ಪಂತ ಏರುತ್ತಿದೆಯೆಂದರ್ಥ. ಅನಂತ ಸುಖವೆಂದರೆ ಅಮರತ್ವವೇ ಸರಿ! (ಇಲ್ಲಿ, ಉಪನಿಷತ್ತುಗಳ ಮಾನವ, ಗಂಧರ್ವ, ದೇವ–ಮಾನವ ಆನಂದಗಳ ಗಂಧ ಬರುತ್ತಿಲ್ಲವೇ?) ಕರ್ದಮ ವ್ಯಕ್ತಿ ಒಂದು ದಿನದಲ್ಲಿ ಈ ಅವಸ್ಥೆಗಳ ಮೆಟ್ಟಿಲುಗಳನ್ನು ಏನೆಷ್ಟು ಬಾರಿ ಏರಿ ಇಳಿಯುತ್ತಾನೆ!

ಮನುಷ್ಯನ ಮೂಲಭೂತ ಹಕ್ಕು ಸುಖವೇ ಆದರೆ ಅದು ಏಕೆ ಎಲ್ಲರಿಗೂ ದಕ್ಕುವುದಿಲ್ಲ? ಅವನು ಏಕೆ ದುಃಖಗಳ ಪಂಜರದಲ್ಲಿ ಬಂಧಿತನಾಗಿರುತ್ತಾನೆ? ಅವನು ಏಕೆ ಮನಸ್ಸಿನ ಸಂಕೀರ್ಣವಾದ, ಚಿತ್ರ ವಿಚಿತ್ರವಾದ ಜಾಲಗಳಲ್ಲಿ ಸಿಲುಕಿಕೊಂಡು ತೊಳಲಾಡುತ್ತಾನೆ? ಹಾಗಾದರೆ ಅವನಿಗೆ ನಿಜವಾಗಿಯೂ ಸುಖ ಬೇಡವೋ?–ಈ ಒಗಟುಗಳನ್ನು ಡಯೇನೆಟಿಕ್ಸ್ ಉತ್ತರಿಸುವ ರೀತಿಯಂತೂ ಬಹು ಆಶ್ಚರ್ಯಕರವಾಗಿದೆ.

ಇದನ್ನು ತಿಳಿಯಬೇಕಾದರೆ ನಾವು ಮನಸ್ಸಿನ ಎರಡು ಸ್ಥಿತಿಗಳನ್ನು ಅರಿತುಕೊಳ್ಳಬೇಕು. ಮನಸ್ಸು ವ್ಯಕ್ತ (Conscious) ಮತ್ತು ಅವ್ಯಕ್ತ (Unconscious) ಎಂಬ ಎರಡು ಸ್ಥಿತಿಗಳಲ್ಲಿರಬಲ್ಲುದು. ಮನಸ್ಸಿನ ಚಟುವಟಿಕೆಗಳು ಸದಾ ಈ ಎರಡು ಸ್ಥಿತಿಗಳಲ್ಲಿ ನಡೆಯುತ್ತಲೇ ಇರುತ್ತವೆ. ಡಯೇನೆಟಿಕ್ಸ್‌ನಲ್ಲಿ ಇವನ್ನು ಜಾಗೃತ ಮನಸ್ಸು (analytical mind) ಮತ್ತು ಪರಾವರ್ತಿತ ಮನಸ್ಸು (Reactive mind) ಎಂದು ಕರೆಯಲಾಗಿದೆ. ಹೊಸ ಭಾಷೆಯನ್ನು ಕಲಿಯಬೇಕಾದರೆ, ಹೊಸ ಕುಶಲತೆಗಳನ್ನು ಸಾಧಿಸಬೇಕಾದರೆ ಅದು ಜಾಗೃತ ಮನಸ್ಸಿನಿಂದಲೇ. ಜಾಗೃತ ಮನಸ್ಸು ಒಮ್ಮೆ ಕಲಿತ ಪಾಠವನ್ನು ಬದಿಗೊತ್ತಿ, ತೊಡೆದು, ಹೊಸ ಪಾಠವನ್ನು ಕಲಿಯಬಲ್ಲದು. ಹೊಸ ಹೊಸ ವಾತಾವರಣಗಳಲ್ಲಿ ಹೊಸ ಹೊಸ ರೀತಿ ನಡೆಯಲು ಕಲಿಯಬಲ್ಲದು. ಯಂತ್ರಗಳನ್ನು ತಯಾರಿಸುವುದು, ಸೌಧಗಳನ್ನು ಕಟ್ಟುವುದು. ನಾಗರಿಕತೆಯನ್ನು ತಂದದ್ದು ಈ ಮನಸ್ಸೇ.

ಆದರೆ ಪರಾವರ್ತಿತ ಮನಸ್ಸಿನ ರೀತಿಯನ್ನು ನೋಡೋಣ. ಸೃಷ್ಟಿಯ ಆದಿಯಲ್ಲಿ, ಜೀವ ವಿಕಸನದ ಮೊಬ್ಬುಗಾಲದಲ್ಲಿ ಏಕಜೀವಾಣು ಬಹು ಜೀವಾಣುವಾಗಿ ವಿಕಸನದ ಹಾದಿಯಲ್ಲಿ ತಡವುತ್ತಾ ಎಡವುತ್ತಾ ಮುನ್ನಡೆದ ಕಾಲದಲ್ಲಿ ಉತ್ಪತ್ತಿಯಾದ ಮನಸ್ಸು ಇದು. ಸರಳವಾದ, ಸಂದಿಗ್ಧವಲ್ಲದ ಸಂದರ್ಭಗಳನ್ನೆದುರಿಸಲು, ಬಹುತೇಕವಾಗಿ ಯಂತ್ರದಂತೆ ಕ್ರಿಯೆ ನಡೆಸುವ ಕಾಲದಲ್ಲಿ ಜೀವ ಮುಂದೆ ಸಾಗಲು ತಯಾರಾದ ಮನಸ್ಸು ಇದು. ವಿಕಾಸ ಈಗ ಬಹು ದೂರ ನಡೆದು ಬಂದಿದೆ. ಆದರೂ ಅದರ ಪ್ರಥಮ ದಿನಗಳ ಪರಾವರ್ತಿತ ಮನಸ್ಸಿನ ಉಯಿಲನ್ನು ಅದು ಇನ್ನೂ ತ್ಯಜಿಸಿಲ್ಲ. ತರ್ಕಬದ್ಧವಾಗಿ ಯೋಚಿಸಿ ಒಂದು ತೀರ್ಮಾನಕ್ಕೆ ಬಂದು ನಂತರ ಕಾರ್ಯಗತವಾಗಲು ಸಾಕಷ್ಟು ವೇಳೆಯಿಲ್ಲದ, ತತ್‌ಕ್ಷಣದಲ್ಲೇ ಮಿಂಚಿನ ವೇಗದಲ್ಲಿ ಪ್ರತಿಕ್ರಿಯೆಯನ್ನು ತೋರಿಸಬೇಕಾದ ಸಂದರ್ಭಗಳನ್ನು ಎದುರಿಸಬೇಕಾದಾಗಲೆಲ್ಲಾ ಅದನ್ನು ಪರಾವರ್ತಿತ ಮನಸ್ಸೇ ನಿರ್ವಹಿಸುತ್ತದೆ.

ಈಗ ಸ್ಮರಣೆಯನ್ನು ತೆಗೆದುಕೊಳ್ಳೋಣ. ಪ್ರತಿಕ್ಷಣದಲ್ಲೂ ಎಲ್ಲಾ ಕಡೆಯಿಂದಲೂ ಮನುಷ್ಯನ ಪಂಚೇಂದ್ರಿಯಗಳ ಮೇಲೆ (Impressions) ಬೀಳುತ್ತಲೇ ಇರುತ್ತವೆ. ಅವುಗಳತ್ತ ಮನುಷ್ಯನಿಗೆ ಗಮನವಿರಲಿ,

ಇಲ್ಲದಿರಲಿ, ಅವು ಮೆದುಳಿನಲ್ಲಿ ಮುದ್ರಿತ ವಾಗುತ್ತಲೇ ಇರುತ್ತವೆ. ಇದರ ಸತ್ಯವನ್ನು ಸುಲಭವಾಗಿ ಪರೀಕ್ಷಿಸಬಹುದು. ಒಬ್ಬನನ್ನು ಅನೇಕ ವಸ್ತುಗಳಿರುವ ಒಂದು ಕೊಠಡಿಗೆ ಕರೆದುಕೊಂಡು ಹೋಗಿ, ಹಿಂದೆ ತಂದು ಅಲ್ಲಿ ಏನೇನು ವಸ್ತುಗಳಿದ್ದುವೆಂದು ಕೇಳಿ. ಆತ ಸುಮಾರು ಹದಿನೈದು ವಸ್ತುಗಳನ್ನು ನೆನೆಸಿ ಕೊಳ್ಳಬಲ್ಲನೆನ್ನೋಣ. ನಂತರ ಆತನನ್ನು ಸಮ್ಮೋಹಿತಗೊಳಿಸಿ ಅದೇ ಪ್ರಶ್ನೆಯನ್ನು ಕೇಳಿ. ಆಗ ಆತ ಐವತ್ತು ವಸ್ತುಗಳನ್ನು ಜ್ಞಾಪಿಸಿಕೊಳ್ಳುತ್ತಾನೆ! ಇದನ್ನೇ ಆಶ್ಚರ್ಯ ವೆಂದುಕೊಳ್ಳಬೇಡಿ. ಮನುಷ್ಯ ಜ್ಞಾನ ತಪ್ಪಿದ (ಮೂರ್ಛೆ) ಅವಸ್ಥೆಯಲ್ಲೂ ಅವನ ಮಿದುಳು ಸುತ್ತಲಿನ ಶಬ್ದ, ಸ್ಪರ್ಶ ಇತ್ಯಾದಿಗಳ ಮುದ್ರೆಯನ್ನು ತೆಗೆದುಕೊಳ್ಳುತ್ತಲೇ ಇರುತ್ತದೆ!! ಇದಕ್ಕೆ ಡಯೇನೆಟಿಕ್ಸ್‌ನಲ್ಲಿ ಸ್ಮರಣ ಕೋಠಿ (Standard Memory Bank) ಎನ್ನುತ್ತಾರೆ.

ಇದೀಗ ಒಂದು ವಿಚಿತ್ರವೆನಿಸುವ ಸಂಗತಿ ನಡೆಯುತ್ತದೆ. ಸಮ್ಮೋಹನಗೊಳಿಸಲ್ಪಟ್ಟ ಒಬ್ಬ ವ್ಯಕ್ತಿಯ ಸ್ಮರಣಕೋಠಿಯಲ್ಲಿ ಕೂಡ ಆತನ ಜೀವನದ ಕೆಲವು ಘಟನೆಗಳ ಸ್ಮರಣೆ ಸಿಗದೆ ನುಸುಳಿ ಹೋಗುತ್ತಿರುತ್ತದೆ. ಜೀವನದ ಪ್ರತಿಪ್ರತಿಘಟನೆಯೂ ಸ್ಮರಣಕೋಠಿಯಲ್ಲಿ ಸಿಗಬೇಕು. ಹಾಗಾದರೆ ಸ್ಮರಣೆಯಲ್ಲಿ ಸಿಗದಂಥವು ಎಲ್ಲಿಹೋಗುತ್ತವೆ? ಇಲ್ಲೇ ಪರಾವರ್ತಿತ ಮನಸ್ಸಿನ ಕೈವಾಡವಿರುವುದು. ಇಲ್ಲೇ ಮನುಷ್ಯನ ಜೀವನದ ಜಿಗುಪ್ಸೆ, ಗಜಿಬಿಜಿಗಳ ಅವಾಂತರದ ಮೂಲ ಸಸಿ ಬಿತ್ತಿರುವುದು.

ಡಯೇನೆಟಿಕ್ಸ್ ಪ್ರಕಾರ ಇಂಥ ಘಟನೆಗಳು ಜೀವಾಣುಗಳಲ್ಲಿ ಮುದ್ರಿತಗೊಂಡಿರುತ್ತವೆ. ಟೇಪ್ ರಿಕಾರ್ಡ್‌ನ ಮೇಲೆ ಧ್ವನಿ ಮುದ್ರಿತವಾಗಿರುವಷ್ಟೇ ಭದ್ರವಾಗಿ ಜಾಡುಗಳು ಅಚ್ಚಾಗಿರುತ್ತವೆ. ಪರಾವರ್ತಿತ ಮನಸ್ಸು ಕೆಲಸ ಮಾಡುವುದು ಇಂತಹ ಮುದ್ರೆಗಳ ಪ್ರಚೋದನದಿಂದಲೇ. ಈ ಮುದ್ರೆಗಳ ಲವಲೇಶ ಕೂಡ ಸ್ಮರಣಕೋಠಿಯಲ್ಲಿ ಇರುವುದಿಲ್ಲ. ಈ ರೀತಿಯಾಗಿ ಪ್ರತ್ಯೇಕವಾಗಿ ಎರಡು ವಾಸನಾ ಮುದ್ರೆಗಳು (Sense impressions) ಜರುಗಲು ಕಾರಣವೇನು? ಇದಕ್ಕೆ ಉತ್ತರವನ್ನು ಒಂದು ವಿಚಿತ್ರ ಅಂಶದಿಂದ ಊಹಿಸಬಹುದು. ಸ್ಮರಣಕೋಠಿಯಲ್ಲಿ ದೈಹಿಕ ಮತ್ತು ಮಾನಸಿಕ ನೋವಿನ ಘಟನೆಗಳ ಅಚ್ಚು ಇರುವುದಿಲ್ಲ! ನೋವುಂಟಾಯಿತು ಎಂಬ ಸುದ್ದಿಯ ಜ್ಞಾಪಕವಿರುತ್ತದೆ. ಆದರೆ ಸಾಕ್ಷಾತ್ ನೋವಿನ ಘಟನೆಯ ಮುದ್ರೆ ಇರುವುದಿಲ್ಲ. ಇದಕ್ಕೆ ಕಾರಣವೂ ಉಂಟು.

ಮಾನಸಿಕ, ದೈಹಿಕ ಆಘಾತವುಂಟಾದಾಗಲೆಲ್ಲಾ, ಜಾಗೃತ ಮನಸ್ಸು (Analytical mind) ಹಿನ್ನೆಲೆಯಲ್ಲಿ ಅಡಗಿಕೊಳ್ಳುತ್ತದೆ. ಪರಾವರ್ತಿತ ಮನಸ್ಸು ಕಾರ್ಯಭಾರವನ್ನು ವಹಿಸುತ್ತದೆ. ಇದು ಎಲ್ಲಾ ಬಗೆಯ ನೋವಿನ ಸಂದರ್ಭಗಳಿಗೂ ಅನ್ವಯಿಸುತ್ತದೆ. ರಸ್ತೆಯಲ್ಲಿ ಆಕಸ್ಮಿಕವುಂಟಾದಾಗ, ಹೃದಯಕ್ಕೆ ಹತ್ತಿರವಿದ್ದವರ ಮರಣದ ಸುದ್ದಿ ಕೇಳಿದಾಗ, ಆಸ್ಪತ್ರೆಯಲ್ಲಿ Anasthesia ತೆಗೆದುಕೊಂಡಾಗ, ಸರ್ಜನನು ಶಸ್ತ್ರಚಿಕಿತ್ಸೆ ಮಾಡಿದಾಗ ಈ ಎಲ್ಲಾ ಸಂದರ್ಭಗಳಲ್ಲೂ ಪರಾವರ್ತಿತ ಮನಸ್ಸು ಆತ್ಮ ರಕ್ಷಣೆಗೆ ಸೆಟೆದು ನಿಂತ ಪ್ರಾಣಿಯಂತೆ ಸಿದ್ಧವಾಗಿರುತ್ತದೆ. ಆ ಸಂದರ್ಭಗಳಲ್ಲಿ ನಡೆದ ಪ್ರತಿಯೊಂದು ವಾಸನಾ ಮುದ್ರೆಯೂ ಜೀವಾಣುಗಳಲ್ಲಿ ಸ್ಥಾಪಿತವಾಗುತ್ತದೆ. ಸರ್ಜನನ ಶಸ್ತ್ರಗಳ ಕ್ಲಿಂಕಾರ, ರಸ್ತೆಯಲ್ಲಿನ ಇತರ ವಾಹನಗಳ ಫೂಂಕಾರ ಎಲ್ಲವೂ ಚಾಚೂ ತಪ್ಪದೆ ಶೇಖರವಾಗುತ್ತದೆ.

ಇಲ್ಲಿ ನಾವು ಪರಾವರ್ತಿತ ಮನಸ್ಸಿನ ಅತಿ ಮುಖ್ಯವಾದ ಗುಣವನ್ನು ತಿಳಿದುಕೊಳ್ಳಬೇಕು. ಅದಕ್ಕೆ ಜಾಗೃತ ಮನಸ್ಸಿನಂತೆ ತರ್ಕಬದ್ಧವಾದ ವಿಚಾರಯುಕ್ತವಾದ ಕಾರ್ಯವನ್ನು ಮಾಡುವ ಶಕ್ತಿಯಿಲ್ಲ. ಜೀವಾಣು ಕೋಠಿಯಲ್ಲಿನ ಮುದ್ರೆಗಳಿಗೆ ತಕ್ಕಂತೆ ಅದು ತಟಕ್ಕನೆ ಗುಲಾಮನಂತೆ ಕ್ರಿಯೆ ನಡೆಸುತ್ತದೆ. ಈ ಮುದ್ರೆಗಳಿಗೆ ಎನ್‌ಗ್ರಾಮ್ (engram) ಎಂದು ಹೆಸರು. ಎನ್‌ಗ್ರಾಮ್‌ಗಳಿಂದ ಕರ್ದಮ ಮನುಷ್ಯ ತುಂಬಿ ತುಳುಕಾಡುತ್ತಿರುತ್ತಾನೆ. ಎನ್‌ಗ್ರಾಮ್‌ಗಳೇ ಅವನ

ಅಸಹಜ ವರ್ತನೆಗಳಿಗೆ, ಮಾನಸಿಕ ಅಂಕುಡೊಂಕುಗಳಿಗೆ ಕಾರಣ. ಎನ್‌ಗ್ರಾಮ್‌ಗಳು ಮನುಷ್ಯನನ್ನು ಸೂತ್ರದ ಗೊಂಬೆಯಂತೆ ಆಡಿಸುತ್ತವೆ. ಎನ್‌ಗ್ರಾಮ್‌ಗಳು ಬಾಲ್ಯಾವಸ್ಥೆ, ಶೈಶವಾವಸ್ಥೆಯಲ್ಲಿ ಮಾತ್ರವಲ್ಲ, ಭ್ರೂಣಾವಸ್ಥೆಯಲ್ಲಿ ಕೂಡ ಉತ್ಪತ್ತಿಯಾಗಬಲ್ಲವು!! ಡಯನೆಟಿಕ್ಸ್‌ನ ಮೂಲ ತತ್ವವೇ ಇಲ್ಲಿ ಅಡಗಿದೆ. ತಾಯಿಯ ಹೊಟ್ಟೆಯಲ್ಲಿರುವಾಗ ತಾಯಿಗುಂಟಾದ ನೋವು, ತಾಪಗಳು, ಸುತ್ತಲೂ ನಡೆದ ಶಬ್ದ, ಸ್ಪರ್ಶೇತ್ಯಾದಿಗಳು ಭ್ರೂಣದ ಜೀವಾಣುಗಳಲ್ಲಿ ಮುದ್ರಿತವಾಗುತ್ತಿರುತ್ತವೆ! (ಅಭಿಮನ್ಯುವಿನ ಜ್ಞಾಪಕ ಬರುತ್ತದಲ್ಲವೇ?!) ಮುಂದೆ ಭ್ರೂಣ ಶಿಶುವಾಗಿ ಯುವಕನಾಗಿ ಬಾಳುವೆ ನಡೆಸುವಾಗ ಈ ಎನ್‌ಗ್ರಾಮ್‌ಗಳು ಬಹುತೇಕವಾಗಿ ಆತನ ಜೀವನದ ಗತಿಯನ್ನು ರೂಪಿಸುತ್ತವೆ.

ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ತಾಯಿ ಗರ್ಭ ಧರಿಸಿದ್ದಾಳೆ. ಹೆಂಡ ಕುಡುಕನಾದ ತಂದೆ ಆಗ ತಾನೇ ಬಾಗಿಲನ್ನು ತಳ್ಳಿಕೊಂಡು ಬಂದು ಸುರೆಯ ನಶೆಯಲ್ಲಿ ರೊಚ್ಚೆಬ್ಬಿಸುತ್ತಿದ್ದಾನೆ. ಹೆಂಡತಿಯು ವಿಶ್ವಾಸಾರ್ಹಳಲ್ಲವೆಂದು ಅವಳನ್ನು ಬೈಯುತ್ತಾ ಹೊಡೆಯುತ್ತಾನೆ. ಹೊಟ್ಟೆಗೆ ಒದೆಯುತ್ತಾನೆ. ಆ ನೋವಿನ ನಿಮಿಷ ಭ್ರೂಣದ ಮೇಲೆ ಎನ್‌ಗ್ರಾಮ್ ಆಗಿ ಮುದ್ರಿತವಾಗುತ್ತದೆ. "ನೀನು ಅಪ್ರಯೋಜಕಳು. ನೇಣು ಹಾಕಿಕೊಂಡು ಸಾಯಿ, ಸಾಯಿ, ಸಾಯಿ," ಎಂದು ಬೈಗಳು ತಂದೆಯ ಬಾಯಿಂದ ಪದೇಪದೇ ಹೊರಬೀಳುತ್ತವೆ. ಭ್ರೂಣದ ಜೀವಾಣುಗಳಲ್ಲಿ ಆ ಪದಗಳು ಅಚ್ಚಳಿಯದೆ ಚಿರವಾಗಿ ಲಿಖಿತವಾಗುತ್ತವೆ. ಹೊರಗೆ ಜಡಿಮಳೆ, ಗುಡುಗು ಸಿಡಿಲುಗಳ ಆರ್ಭಟ ಇವೆಲ್ಲವೂ ಭ್ರೂಣದಲ್ಲಿ ಶೇಖರವಾಗಿರುತ್ತವೆ. ಮುಂದೆ ಸಾಕಷ್ಟು ಕಾಲದ ನಂತರ ತಾಯಿಯ ಹೊಟ್ಟೆಯಿಂದ ಹೊರಬಂದ ಮಗಳು ಒಳ್ಳೆಯ ಹುಡುಗಿಯಾಗಿ ಬುದ್ಧಿವಂತಳಾಗಿ ಬೆಳೆಯುತ್ತಾ ಉನ್ನತಿಗೇರುವ ಸೂಚನೆಗಳನ್ನು ತೋರಿಸುತ್ತಿರುತ್ತಾಳೆ. ಒಂದು ರಾತ್ರಿ ಮುಂಗಾರು ಮಳೆಗಳ ಝಂಝಾವಾತ ಎರಗುತ್ತದೆ. ಗುಡುಗು, ಸಿಡಿಲು; ರೊಯ್ಯನೆ ಸುರಿವ ಮಳೆ–ಇವೆಲ್ಲವನ್ನೂ ಕೇಳುತ್ತಾ ಹುಡುಗಿ ಎದ್ದಿದ್ದಾಳೆ. ಆಗ ಅವಳಿಗರಿವಿಲ್ಲದೆಯೇ ಕರುಳು ಕೀಳುವಂತಹ ವೇದನೆ ಅವಳ ಮನಸ್ಸಿನಲ್ಲಿ ಎದ್ದಿರುತ್ತದೆ. ಅದೇ ವೇಳೆಯಲ್ಲಿ ಬೀದಿಯಲ್ಲಿ ಯಾರದೋ ಜಗಳ, ಬಡಿದಾಟ, ಬೈಗಳು ಆರಂಭವಾಗುತ್ತವೆ. "ಹೋಗಿ ಸಾಯಿ" ಎಂಬ ಪದಗಳು ಆಗಾಗ ಕೇಳಿಬರುತ್ತವೆ. ಅಂದು ರಾತ್ರಿ ಅವಳಿಗೆ ನಿದ್ದೆ ಬರುವುದಿಲ್ಲ. ರಾತ್ರಿಯೆಲ್ಲಾ ಹೊಟ್ಟೆ ಬೇನೆ.

ಮುಂದೆ ಆಕಾಶದಲ್ಲಿ ಮೋಡ ಕವಿದಾಗಲೆಲ್ಲಾ ಅವಳಿಗೆ ಹೀಗೆಯೇ ಆಗುತ್ತದೆ. ಸದಾ ನಗುತ್ತಿದ್ದ ಅವಳು ಮ್ಲಾನವದನೆಯಾಗುತ್ತಾಳೆ. "ನಾನು ಅಪ್ರಯೋಜಕಳು, ಬದುಕಿ ಏನು ಮಾಡುವುದು, ಸಾಯುವುದೇ ಲೇಸು." ಇತ್ಯಾದಿ ಯೋಚನೆಗಳು ಸದಾ ಅವಳಲ್ಲಿ ಏಳುತ್ತಿರುತ್ತವೆ. ಜೀವನದಲ್ಲಿ ಅವಳು ಸೋಲುಗಳ ಸರಣಿಯನ್ನು ಅನುಭವಿಸುತ್ತಾಳೆ. ಮಾನಸಿಕ ಚೈತನ್ಯ ದಿನೇದಿನೇ ಕುಗ್ಗಿಹೋಗುತ್ತದೆ. ಒಂದು ದಿನ ಮುಂಗಾರು ಮಳೆಗಳ ಸಿಡಿಲು ಗುಡುಗು ತುಂಬಿದ ರಾತ್ರಿಯಲ್ಲಿ ನೇಣು ಹಾಕಿಕೊಂಡು ಅವಳು ಸಾಯುತ್ತಾಳೆ.

"ನೀನು ಅಪ್ರಯೋಜಕಳು, ನೇಣು ಹಾಕಿಕೊಂಡು ಸಾಯಿ," ಎಂದು ತಂದೆ ಹೇಳಿದ್ದ ಮಾತುಗಳು ಭ್ರೂಣದಲ್ಲಿ ಅಡಕವಾಗಿದ್ದುವು. ಎರಡನೆಯ ಸಂದರ್ಭದಲ್ಲಿ ಅದೇ ಬಗೆಯ ವಾತಾವರಣ ಮಳೆ, ಗುಡುಗು, ಬೈಯ್ದಾಟ–ಉಂಟಾದಾಗ ಮನದಲ್ಲಿ ಹುದುಗಿದ್ದ ಎನ್‌ಗ್ರಾಮ್‌ಗಳು ಮೇಲೆದ್ದು ಬಂದುವು. ಆ ಮಾತುಗಳು ತಾಯಿಯನ್ನು ಕುರಿತದ್ದು ಎಂದು ಪರಾವರ್ತಿತ ಮನಸ್ಸು ಅರ್ಥ ಮಾಡಿಕೊಳ್ಳುವುದಿಲ್ಲ. ತನಗೇ ಆ ಮಾತುಗಳು ಎಂದು ತಿಳಿದುಕೊಳ್ಳುತ್ತದೆ!

ಎನ್‌ಗ್ರಾಮ್‌ಗಳ ಸಂಖ್ಯೆ, ಅವುಗಳ ಅವಾಂತರವೆಷ್ಟೆಂದು ಇದರಿಂದ ಊಹಿಸ

ಬಹುದು. "ಬಾಯಿ ಮುಚ್ಚು!" ಎಂಬ ಉದ್ಗಾರದಿಂದ ಉತ್ಪತ್ತಿಯಾದ ಎನ್‌ಗ್ರಾಮ್ ತೊದಲು ಮಾತನಾಡುವವನನ್ನು ತಯಾರಿಸುತ್ತದೆ. "ಕೇಳಿಸುವುದಿಲ್ಲವೇ ಕಿವುಡ?" ಎಂಬ ಎನ್‌ಗ್ರಾಮ್ ಕಿವುಡನನ್ನು ತರಿಸುತ್ತದೆ. "ಆದದ್ದಾಯಿತು ಮರೆತುಬಿಡು", ಎಂಬುದು ಜ್ವರವನ್ನು ಉಂಟುಮಾಡುತ್ತದೆ. ಡಯೇ-ನೆಟಿಕ್ಸ್ ಪ್ರಕಾರ ಎಲ್ಲಾ ಬಗೆಯ ಮನೋದೈಹಿಕ ರೋಗಗಳೂ— ಅಂದರೆ ಮಾನ ಉಂಟಾದ ದೈಹಿಕ ರೋಗಗಳೂ ಇಂತಹ ಸಿಕವಾಗಿ ಎನ್‌ಗ್ರಾಮ್‌ಗಳಿಂದ ಆದುವೇ. ಅಲರ್ಜಿ, ಅಸ್ತಮಾ, ಸಂಧಿವಾತ, ತಲೆಶೂಲೆ, ಮೂರ್ಛೆರೋಗ, ದೃಷ್ಟಿ ಮಾಂದ್ಯ, ನೆಗಡಿ ರಕ್ತದ ಒತ್ತಡ, ಹೊಟ್ಟೆಯ ವ್ರಣ ಈ ಬಗೆಯ ನೂರಾರು ರೋಗಗಳು ಎನ್ ಗ್ರಾಮ್‌ಗಳಿಂದ ಉತ್ಪತ್ತಿಯಾದುವುವೆಂದು ಡಯೇನೆಟಿಕ್ಸ್‌ನ ತತ್ವ. ಈ ಬಗೆಯ ಮಾನಸಿಕ, ದೈಹಿಕ, ಪೀಡೆಗಳಿಂದ ತೊಳಲುತ್ತಿ[illegible] ಅದರ ಮೂಲ ಕಾರಣವೇನೆಂದು ತೊಳಲುವಾತನಿಗೆ ಅರ್ಥವಾಗುವುದಿಲ್ಲ. ಸಚೇತನವಾಗಿ ಅವು ಎಷ್ಟು ಪ್ರಯತ್ನ ಪಟ್ಟರೂ ಅವನ ಬೇರೂರಿದ ರೋಗಗಳು, ವೈಯಕ್ತಿಕ ವೈಚಿತ್ರ್ಯಗಳು ಮಾಯವಾಗುವುದಿಲ್ಲ.

ಮೇಲಿನ ವಿವರಣೆಯನ್ನು ಓದಿದಾಗ ಕರ್ದಮ ವ್ಯಕ್ತಿಯ ಮನಸ್ಸು ಒಂದು ಅಸಹಾಯಕ ಯಂತ್ರವೇನೋ ಎನಿಸಿಬಿಡಬಹುದು. ಆದರೆ ಇದಕ್ಕೆ ಸ್ಪಷ್ಟೀಕರಣ ಉಂಟು. ಕರ್ದಮ ವ್ಯಕ್ತಿಯಲ್ಲಿ ಎನ್-ಗ್ರಾಮ್‌ಗಳು ಉಂಟಾಗಲು ಕಾರಣ ಆತನ ಪರಾವರ್ತಿತ ಮನಸ್ಸು ಮತ್ತು ಜಾಗೃತ ಮನಸ್ಸಿಗೆ ಸಂಪರ್ಕವಿಲ್ಲದಿರುವುದು. ಎನ್ ಗ್ರಾಮ್ ಗಳನ್ನು ಒಡೆದು ಹಾಕಿದರೆ ಆಗ ಅವನು ಸ್ವಚ್ಛ ವ್ಯಕ್ತಿಯಾಗಿ ರೂಪುಗೊಳ್ಳುತ್ತಾನೆ.

ಡಯೇನೆಟಿಕ್ಸ್‌ನ ಚಿಕಿತ್ಸಾಕ್ರಮ ಸರಳವಾಗಿದೆ. ಇದಕ್ಕೆ ಮತ್ತೊಬ್ಬ ವ್ಯಕ್ತಿಯ ಸಹಾಯ ಬೇಕೇ ಬೇಕು. ಡಯೇನೆಟಿಕ್ಸ್‌ನಲ್ಲಿ ಅವನನ್ನು 'ಆಡಿಟರ್' ಎನ್ನುತ್ತಾರೆ. ಮಾನಸಶಾಸ್ತ್ರದ ಇತರ ಪ್ರಭೇದಗಳಲ್ಲಿರುವಂತೆ ಇಲ್ಲಿ ಆಡಿಟರ್ ತಾನಾಗಿ ಯಾವ "ಸಹಾಯ"ವನ್ನೂ ಕೊಡಲು ಹೋಗುವುದಿಲ್ಲ. ಆತನ ಕೆಲಸ ಕರ್ದಮ ವ್ಯಕ್ತಿ ಹೇಳಿದ್ದನ್ನೆಲ್ಲಾ ತಾಳ್ಮೆಯಿಂದ ಕೇಳಿಸಿಕೊಂಡು ದಾರಿ ತಪ್ಪಿದಾಗ ಅವನನ್ನು ಹಿಂದಿರುಗಿಸುವುದು ಅಷ್ಟೇ ಆ ಕೆಲಸ ಹೀಗೆ ಸಾಗುತ್ತದೆ.

ಹೆಚ್ಚು ಅಲಂಕಾರವಿಲ್ಲದ, ಗಮನ ಪಲ್ಲಟಕ್ಕೆ ಆಸ್ಪದವಿಲ್ಲದ ಕೋಣೆಯಲ್ಲಿ ಕರ್ದಮ ವ್ಯಕ್ತಿ ಮತ್ತು ಆಡಿಟರ್ ಆಸೀನರಾಗುತ್ತಾರೆ. ಆಡಿಟರ್ 'ರೋಗಿ'ಯನ್ನು ಆರಾಮವಾಗಿ ಮಲಗಿಸಿ ಆತನ ಮನಸ್ಸನ್ನು ಸಮತೋಲನಕ್ಕೆ ತರಿಸುತ್ತಾನೆ. ನಂತರ ಆತನ ಜೀವನದಲ್ಲಿ ನಡೆದ ನೋವು ತುಂಬಿದ ಘಟನೆಯೊಂದನ್ನು ನೆನೆಸಿಕೋ ಎನ್ನುತ್ತಾನೆ. ಹಾಗೆಯೇ ಸ್ಮರಣೆಯಿಂದ ಮುಂದೆ ಹೋಗಿ ಆತನು ಘಟನೆಯಲ್ಲಿ ಭಾಗಿಯಾಗುವಂತೆ ಮಾಡುತ್ತಾನೆ. ರೋಗಿ ನೋವು ತುಂಬಿದ ಘಟನೆಯನ್ನು ಪುನರ್ಜೀವಿಸಬೇಕು. ತಾನು ಕಂಡದುದು, ಕೇಳಿದುದು, ಅನುಭವಿಸಿದುದನ್ನು ವಿವರವಾಗಿ ಒಂದಂಶವನ್ನೂ ಬಿಡದೆ ಆಡಿಟರ್‌ಗೆ ಹೇಳಬೇಕು. ಘಟನೆಯ ನಿಜವಾದ, ನೋವು ಕೊಡುವ ಕೆಲವು ಅಂಶಗಳನ್ನು ರೋಗಿ "ಮರೆತು ಬಿಡುತ್ತಾನೆ." ಆಗ ಆಡಿಟರ್ ಆತನನ್ನು ಮತ್ತೆ ಮತ್ತೆ ಕೇಳಿ ಕೇಳಿ ಆ ಅಂಶವನ್ನು ಹೊರಗೆಡಹುತ್ತಾನೆ. ಅಂತಹ ಸಂದರ್ಭಗಳಲ್ಲಿ ಕರ್ದಮ ವ್ಯಕ್ತಿ ಅಳತೊಡಗುತ್ತಾನೆ. ದೈಹಿಕವಾಗಿ ಅವನಿಗೆ ಹೊಟ್ಟೆ ನೋವು, ತಲೆಶೂಲೆ ಇತ್ಯಾದಿಗಳು ಉಂಟಾಗಬಹುದು. ಚಿಕಿತ್ಸೆ ಮುನ್ನಡೆಯುತ್ತಿರುವುದಕ್ಕೆ ಇದೇ ಸೂಚನೆ. ಆಡಿಟರ್ ಆತನಿಂದ ಪುನಃ ಪುನಃ ಆ ಘಟನೆಯನ್ನು ಹೇಳಿಸುತ್ತಾನೆ. ಕಡೆಗೆ ರೋಗಿಗೆ ಆ ಘಟನೆಯಲ್ಲಿದ್ದ ನೋವು ಅಷ್ಟು ಕಾರಣವಿಲ್ಲದ್ದು, ಅನವಶ್ಯಕ ಎಂಬುದು ಅರಿವಾಗಿ ಆತ ನಾನು ಹೀಗೆ ನಡೆದುಕೊಂಡೆನೇ?", ಎಂದು ಅಚ್ಚರಿಪಟ್ಟು ನಗಲಾರಂಭಿಸು-ತ್ತಾನೆ!! ಅಲ್ಲಿಗೆ ಅವನ ಜೀವನದಲ್ಲಿ ಆ ನೋವಿನ ನಿಮಿಷದ ಎನ್‌ಗ್ರಾಮ್ ಅಳಿಸಿ ಹೋದಂತೆ. ಅವನ ಮೇಲೆ ಆದರ ಪ್ರಭಾವ

ಇನ್ನಿಲ್ಲ.

ಇದೇ ರೀತಿಯಾಗಿ ಆಡಿಟರ್ 'ರೋಗಿ' ಯನ್ನು ಕ್ರಮೇಣ ಕಾಲಗತಿಯಲ್ಲಿ ಹಿಂದೆ ಕಳಿಸುತ್ತಾ ಒಂದೊಂದೇ ನೋವಿನ ನಿಮಿಷವನ್ನು— ಅದರ ಎನ್‌ಗ್ರಾಮ್ ಅನ್ನು ಅಳಿಸಿಬಿಡುತ್ತಾನೆ. ಇದು ಹಲವೆರಡು ಗಂಟೆಗಳಲ್ಲಿ ಆಗುವ ಕಾರ್ಯವಲ್ಲ. ಕನಿಷ್ಠ ನೂರಿನ್ನೂರು ಘಂಟೆಗಳಾದರೂ ಹಿಡಿಯುತ್ತದೆ. ದುಃಖದ ನೆನಪು ಮನಸ್ಸಿಗಿದ್ದರೂ ಅದನ್ನು ಪುನರನುಭವಿಸಲು ಮನಸ್ಸಿಗೆ ಎಳ್ಳಷ್ಟೂ ತವಕವಿಲ್ಲ. (ಆದರೆ, ಆಶ್ಚರ್ಯ, ಸುಖದ ನಿಮಿಷಗಳನ್ನು ಅಳಿಸಿ ಹಾಕಲು ಆಗುವುದಿಲ್ಲವಂತೆ!) ಕಟ್ಟಕಡೆಗೆ ವ್ಯಕ್ತಿ ತನ್ನ ಪ್ರಥಮ ನೋವಿನ ನಿಮಿಷವನ್ನು ನೆನೆಸಿಕೊಳ್ಳುತ್ತಾನೆ. ಅದಾವುದು ಗೊತ್ತೇ?— ತಾನು ಹುಟ್ಟಿದ ನಿಮಿಷ!! ಇದೇನೂ ಉತ್ಪ್ರೇಕ್ಷೆಯಲ್ಲ. ಡಯೇನೆಟಿಕ್ಸ್ ಪ್ರಕಾರ ಸ್ವಚ್ಛ ವ್ಯಕ್ತಿಯ ನಿರ್ಮಾಣದಲ್ಲಿ ಇದು ಆಗಲೇಬೇಕಾದ ಕೆಲಸ.

ಆದರೆ ಆಡಿಟರ್ ಅಷ್ಟಕ್ಕೇ ನಿಲ್ಲುವುದಿಲ್ಲ. ವ್ಯಕ್ತಿಯನ್ನು ಮತ್ತೆ ಮತ್ತೆ ಕಾಲಗತಿಯಲ್ಲಿ ಹಿಂದೆ ಕಳಿಸುತ್ತಾನೆ. ಅಂತಿಮವಾಗಿ ವ್ಯಕ್ತಿ ತನ್ನ ಜೀವನದ ಪ್ರಪ್ರಥಮ ನೋವಿನ ಕ್ಷಣವನ್ನು ನೆನೆಸಿಕೊಳ್ಳುತ್ತಾನೆ. ಇದಕ್ಕೆ Basic-basic ಎನ್ನುತ್ತಾರೆ. ಇದು ತಾಯಿಯ ಗರ್ಭದಲ್ಲಿದ್ದ ಭ್ರೂಣಕ್ಕೆ ಉಂಟಾದ ಪ್ರಥಮ ನೋವಿನ ಕ್ಷಣ!! ನೆನೆಸಿಕೊಳ್ಳುವುದು ಎಂದರೆ, ಆತನಿಗೆ ತಂದೆ ತಾಯಿಯರಲ್ಲಿ ನಡೆದ ಸಂವಾದ, ಸುತ್ತಲಿನ ಶಬ್ದ ಸ್ಪರ್ಶ್ಯಾದಿಗಳೆಲ್ಲದರ ಪೂರ್ಣ ನೆನಪು ಬರುತ್ತದೆ! ಆಡಿಟರ್ ಆತನು ಆ ನೋವನ್ನು ಮತ್ತೆ ಮತ್ತೆ ಅನುಭವಿಸುವಂತೆ ಮಾಡಿ ಅದನ್ನೂ ಅಳಿಸಿಬಿಡುತ್ತಾನೆ. 'ರೋಗಿ' ಸ್ವಚ್ಛ ವ್ಯಕ್ತಿಯಾದ.

ಹೀಗಿದೆ ಸ್ವಚ್ಛ ವ್ಯಕ್ತಿಯ ಜನನ. ಚಿಕಿತ್ಸೆ ನಡೆಯುತ್ತಿದ್ದಂತೆ ಕರ್ದಮ ವ್ಯಕ್ತಿಯಲ್ಲಿ ಅನೇಕ ದೈಹಿಕ ನೋವುಗಳು ಕಾಣಿಸಿಕೊಳ್ಳುತ್ತವೆ. ಆದರೆ ನಂತರ ಅವು ಪೂರ್ಣವಾಗಿ ತೊಡೆದು ಹೋಗುತ್ತವೆ. ಆತನ ವ್ಯಕ್ತಿತ್ವ ಮಾರ್ಪಾಡಾಗುತ್ತದೆ. ಆತನ ಬುದ್ಧಿಶಕ್ತಿಯಂತೂ (I. Q.) ಬಹುಮಟ್ಟಿಗೆ ಹೆಚ್ಚುತ್ತದೆ. ತನ್ನ ಮನಶ್ಶಕ್ತಿಯನ್ನು ಆತ ಮೊದಲಿಗಿಂತ ನೂರು ಪಾಲು ಹೆಚ್ಚು ದಕ್ಷತೆಯಿಂದ ಉಪಯೋಗಿಸಬಲ್ಲನು. ಜೀವನದಲ್ಲಿ ಆತನಿಗೆ ಹೆಚ್ಚು ಆಸ್ಥೆ ಇರುತ್ತದೆ. ಆತನ ಸುಖಾನುಭವಶಕ್ತಿ ನೂರ್ಮಡಿಯಾಗುತ್ತದೆ. ಇತರರ ಕಷ್ಟಗಳನ್ನು ಅರಿತು ಕ್ಷಮಿಸಬಲ್ಲವನಾಗುತ್ತಾನೆ. ಆತನ ವಿವೇಚನಾ ಶಕ್ತಿ ಆವೇಶಗಳಿಂದ ಕುಂಠಿತವಾಗುವುದಿಲ್ಲ.

ಸಮಾಜದ ಪ್ರತಿ ಕರ್ದಮ ವ್ಯಕ್ತಿಯನ್ನೂ ಸ್ವಚ್ಛತೆಗೆ ಒಯ್ಯುವುದೇ ಡಯೇನೆಟಿಕ್ಸ್‌ನ ಧೋರಣೆ. ಎಲ್ಲಾ ಕಾಲದಲ್ಲೂ ಸಮಾಜ ಸುಧಾರಕರು, ಜ್ಞಾನಿಗಳು, ದೃಷ್ಟಾರರು ಇದನ್ನು ಮಾಡಲು ಯತ್ನಿಸುತ್ತಲೇ ಇದ್ದಾರೆ. ಇದರಲ್ಲಿ ತಿರುಳಿನ ಅಂಶವೆಂದರೆ, ಕರ್ದಮ ವ್ಯಕ್ತಿಗೆ ಮೊದಲು ಸ್ವಚ್ಛತೆ ಎಂಬ ವಸ್ತುವೊಂದಿದೆ, ಅದನ್ನು ತಾನು ಪಡೆಯಬೇಕು ಎಂಬ ಆಕಾಂಕ್ಷೆ ಬರಬೇಕು. ಅದು ಎನಿತು ಬರುವುದೋ, ಎಂದು ಬರುವುದೋ ? ✿



ಇಂದು ನಮಗೆಲ್ಲ ಸುಪರಿಚಿತವಾದ ಬೀರ ಹೊಸದಾದ ಪಾನೀಯವೇನಲ್ಲ. ನಾಲ್ಕತ್ತು ಐವತ್ತು ಬ್ರ್ಯಾಂಡುಗಳ ಬೀರ್ ಬಾಟಲಿಗಳ ಸಂಗ್ರಹ ಪುರಾತನ ಕಾಲದಲ್ಲೇ ಈಜಿಪ್ತವನ್ನಾಳಿದ ಕ್ಲಿಯೋಪಾತ್ರಾಳ ಹತ್ತಿರ ಇತ್ತಂತೆ.

ದೇಶವು ಮುಂದುವರಿಯುತ್ತಿದೆ.

# ಹೆಚ್ಚು...ಇನ್ನೂ ಹೆಚ್ಚು ಜನತೆಗೆ ಹೆಚ್ಚು ಬಟ್ಟೆ

ಧೋತರ ಹಾಗು ಸೀರೆಗಳ ಉತ್ಪತ್ತಿಯು 160 ದಶಲಕ್ಷ ಚದುರು ಮೀಟರುಗಳಷ್ಟು ಹೆಚ್ಚಾಗಿದೆ; ಕೇವಲ ಒಂದೇ ವರ್ಷದ ಹಿಂದೆ, ದೇಶದಲ್ಲಿ ಧೋತರ-ಸೀರೆಗಳ ಒಟ್ಟು ಉತ್ಪತ್ತಿಯು 100 ದಶಲಕ್ಷ ಚದುರು ಮೀಟರಿನಷ್ಟು ಇದ್ದಿತು.

ನಿಯಂತ್ರಿತ ಬಟ್ಟೆಯ ಶೇಕಡ 90ರಷ್ಟು ಭಾಗದ ಬಟ್ಟೆಯನ್ನು ಸಹಕಾರಿ ವಲಯದ 28,000 ರಿಟೇಲ್ ಅಂಗಡಿಗಳ ಮೂಲಕ ವಿತರಣೆ ಮಾಡಲಾಗಿದೆ; ಈ ರಿಟೇಲ್ ಅಂಗಡಿಗಳ ಪೈಕಿ ಬಹಳಷ್ಟು ಅಂಗಡಿಗಳು ಗ್ರಾಮಾಂತರ ಪ್ರದೇಶಗಳಲ್ಲೇ ಇವೆ.



ದೃಢ ಸಂಕಲ್ಪ ಮತ್ತು ಕಠಿಣ
ಪರಿಶ್ರಮಗಳೇ
ನಮ್ಮನ್ನು ಎತ್ತಿಹಿಡಿಯುವವು.

davp 75/451

ಕೆ. ತಿ, ರಾಮಕೃಷ್ಣ (ಹರಿಯಬ್ಬ)

# ಜಾನಪದ ಸಾಹಿತ್ಯದಲ್ಲಿ ಸತಿ-ಪತಿ ಪ್ರೇಮ

ಕನ್ನಡ ಹಾಡುಗಳಲ್ಲಿ ಕುರಿತೋದದೆಯೇ ರಚಿಸಿದ ಹಾಡುಗಳೆಂದರೆ ಜಾನಪದ ಹಾಡುಗಳು. ಇಂಥ ಜಾನಪದ ಹಾಡುಗಳನ್ನು ಹಾಡಿದವರು ಪಂಡಿತರಲ್ಲದ ಸಾಮಾನ್ಯ ಜನ. ನಿಸರ್ಗದತ್ತವಾಗಿ ಹಳ್ಳಿಯ ಜನರಿಗೆ ಬಂದ ಪ್ರತಿಭೆಯಲ್ಲಿ, ತಮ್ಮ ಜೀವನರಂಗವೇ ಒಂದು ಅನುಭವರಂಗವಾಗಿ ಬಾಯಿ ಮಾತಿನ ಮಾಧ್ಯಮದಲ್ಲಿ ಕ್ರಿಯೆಯಲ್ಲಿಯ ಒಂದು ಭಾಗವಾಗಿ ಹಾಡುಗಳನ್ನು ಕಟ್ಟಿ ಹಾಡಿದರು. ತಮ್ಮ ಸುತ್ತಮುತ್ತಣ ನಿಸರ್ಗ ವಸ್ತುಗಳಿಗೆ ಮಾರುಹೋಗಿ ಹಾಡುಗಳನ್ನು ರಚಿಸಿ ಹಾಡಿದರು. ಹಾಗೆಯೇ ಕೌಟುಂಬಿಕ ಜೀವನದ ಜೀವಾಳವನ್ನು ಕವಿತೆಯ ವಸ್ತುವನ್ನಾಗಿ ಬಳಸಿಕೊಂಡರು. ಜಾನಪದ ಗೀತೆಗಳಲ್ಲಿ ಅದರಲ್ಲೂ ತ್ರಿಪದಿಯಲ್ಲಿ ಬಹುಮಟ್ಟಿಗೆ ಮಿಡಿದಿರುವುದು ಹೆಣ್ಣಿನ ಪಾಡು. ಇಂಥ ಹೆಣ್ಣಿನ ಪಾಡುಗಳನ್ನು ಹಾಡಿನ ರೂಪಗಳಲ್ಲಿ ತೋಡಿಕೊಂಡರು. ಸಂಸಾರದ ವಿವಿಧ ಮುಖಗಳಲ್ಲಿ ಸತಿಪತಿಯರ ಪ್ರೇಮವೂ ಒಂದಾಗಿದೆ. ಜನಪದ ಜೀವಿಗಳಿಗೆ ಆದ ಅನುಭವಗಳನ್ನು ಮನಮುಟ್ಟುವಂತೆ, ಶಿಷ್ಟ ಸಾಹಿತ್ಯಕ್ಕೆ ಕಡಿಮೆ ಇಲ್ಲದಂತೆ ವರ್ಣಿಸಿರುವುದು ಕಂಡುಬರುತ್ತದೆ.

'ಗಂಡ ಹೆಂಡಿರ ನಂಟು ದೇವಲೋಕದಲ್ಲಿ ಬಿಗಿದ ಗಂಟು' ಎಂಬ ಹಿರಿಯರ ಮಾತಿದೆ. 'ಹೆತ್ತವರಿಗೆ ಹೆಗ್ಗಣ ಮುದ್ದು, ಕೂಡಿದವಳಿಗೆ ಕೋಡಗ ಮುದ್ದು,' 'ಕಂತೆಗೆ ತಕ್ಕಂತೆ ಬೊಂತೆ' ಎಂಬ ಸತಿಪತಿಯರ ಬಗ್ಗೆ ವಿವಿಧ ಗಾದೆ ಮಾತುಗಳಿವೆ. ತನ್ನ ಪತಿ ಹೇಗಿದ್ದರೂ ಸತಿಗೆ ಚಂದವೆ; ಅವನೇ ಅವಳಿಗೆ ಸರ್ವಸ್ವ:-

" ಕೂಲಿ ಮಾಡಿದರೇನ
ಕೋರಿ ಹೊತ್ತರೇನ।
ನಮಗ ನಮ್ಮರಾಯ
ಬಡವೇನ। ಬಂಗಾರ
ಮಾಲ ಇದ್ದಾಂಗ ಮನಿಯಾಗ॥ "

ಕೂಲಿ ಮಾಡಿದರೂ, ಚಿಂದಿ ಬಟ್ಟೆ ಹಾಕಿಕೊಂಡರೂ ಗರತಿಗೆ ತನ್ನ ಪತಿಯ ಮೇಲಣ ಪ್ರೀತಿಗೆ ಬಡತನವಿಲ್ಲ; ಅವಳ ಮನೆಯಲ್ಲಿ 'ಪತಿಯೇ ಬಂಗಾರ' ಸರ ಇದ್ದಷ್ಟು ಶ್ರೀಮಂತಿಕೆ. ಅಷ್ಟೇ ಅಲ್ಲ.

" ಅರಸರ ದಯದಿಂದ
ಅರಶೀಣ ಕುಂಕೂಮ।
ನೋದ ಮಲ್ಲೀಗಿ ನೆನೆದಂಡಿ। ಕಟ್ಟ್ಯಾಳು।
ಅರಸ ಮಾರಾಯ್ರ ದಯದಿಂದ॥ "

ತಾನು ಹಣೆಗೆ ಹಚ್ಚಿಕೊಳ್ಳುವ ಅರಶಿಣ-ಕುಂಕುಮ, ಮುಡಿಯುವ ಮಲ್ಲಿಗೆಯ ಮುತ್ತೈದೆತನದ ಭಾಗ್ಯ ಯಾರಿಂದ? ಎಲ್ಲವೂ ತನ್ನ ಪತಿರಾಯನಿಂದ ಎಂಬ ಅಮೂಲ್ಯ ಪ್ರೇಮ, ಸುಸಂಸ್ಕೃತಿಯ ಹೆಣ್ಣಿನಲ್ಲಿಯ ಸಂಸ್ಕೃತಿ ವ್ಯಕ್ತಗೊಂಡಿದೆ.

ಜಾನಪದ ಗರತಿ ಗಂಡನ ಊಟವೇ ತನ್ನ ಊಟವೆಂದು ಭಾವಿಸಿಕೊಂಬ ಮನೋಧರ್ಮ

ವುಳ್ಳವಳು. ಗಂಡನಿಲ್ಲದಾಗ ಬಗೆಬಗೆಯ ಭಕ್ಷಭೋಜ್ಯಗಳನ್ನು ಮಾಡಿ ಫಲವೇನು ? ರಾಯನಿಲ್ಲದೆ ಊಟ ಅವಳ ಮನಸ್ಸಿಗೆ ಸಲ್ಲದು. ಅದನ್ನು ಕುರಿತು ಸ್ವಾರಸ್ಯ ಈ ಪದ್ಯದಲ್ಲಿ ವರ್ಣಿತವಾಗಿದೆ.—

**" ಯಾಲಕ್ಕಿ ಕಾಯ್ ಕುಲಿದು**
**ಯಾವಡಿಗೆ ಮಾಡಲಿ ।**
**ಊರಿಗ್ಹೋಗ್ಯಾರ ರಾಯರು । ಬಾರದೆ ।**
**ಯಾವಡಗಿ ಮಾಡಿ ಫಲವೇನು ॥ "**

ಪತಿಯ ಸದಾ ನೋಟವೇ ಸತಿಗೆ ಊಟ. ಮನಕ್ಕೆ ತಂಪಿಂಪು.

ಸುದೈವದ ಸುಕೃತದ ಫಲದಿಂದ ಸುಗುಣ ಪತಿ ದೊರಕಿದಾಗ ಗರತಿ ತೌವರೂರನ್ನೇ ಮರೆಯಲು ಸಿದ್ಧಳಾಗಿದ್ದಾಳೆ. ಹಡೆದವ್ವ ಮಗಳನ್ನು ಊರಿಗೆ ಕರೆಯಲು ಬಂದಾಗ ಹೇಳಿದ ಉತ್ತರವಿದು—

**ಹಚ್ಚಡದ ಸೆರಗಾಗ**
**ಅಚ್ಚಮಲ್ಲಿಗೆ ಹೂವ ।**
**ಬಿಚ್ಚಿ ನನ ಮ್ಯಾಲ ಒಗೆವಂಥ। ರಾಯನ ।**
**ಬಿಟ್ಹ್ಯಾಂಗ ಬರಲಿ ಹಡೆದವ್ವ ॥ "**

ಮಮತೆಯ ಗಂಡ ಮನೆಗೆ ಬರುವಾಗ ಬರಿಗೈಲಿ ಬರಲಿಲ್ಲ; ಬಟ್ಟೆಯ ಪದರಿನಲ್ಲಿ ಅಚ್ಚ ಮಲ್ಲಿಗೆ ಹೂವನ್ನು ತಂದು ಹೆಂಡತಿಗೆ ಮುಡಿಸುವಾಗ ಆಗುವ ಆನಂದ ತೌರಿನ ಹಂಬಲವೇ ಮರೆಸಿಬಿಡುವಷ್ಟು ಪ್ರೀತಿ. ಅಷ್ಟೆ ಏಕೆ; 'ಆಕಳದಂತಹ ಅತ್ತೆ, ಗೋಕುಲದಂತಹ ಮಾವ, ಶ್ರೀಕೃಷ್ಣನಂತಹ ಪತಿರಾಯನಿದ್ದರೆ' ಸಾಕಿದ ತವರನ್ನು ಮರೆಯಲು ಆಶ್ಚರ್ಯ ವಿಲ್ಲ. ಹೆಣ್ಣಿಗೆ ಗಂಡಿನ ಮನೆಯಲ್ಲಿ ಸುಖವೇ ಇರಲಿ, ದುಃಖವೇ ಇರಲಿ ಅದು ಅವಳಿಗೆ 'ಗಂಜೀಯ ಕುಡಿದರೂ ಗಂಡನ ಮನಿ ಲೇಸು' ಹಂಗಿನ ತವರು ಬೇಕಾಗಿಲ್ಲ ಎಂಬ ಹೆಣ್ಣಿನ ಹಿರಿಮೆ ಅಗಾಧವಾದುದು; ಅಮೋಘವಾದುದು.

ಪತಿ ಇನ್ನೊಬ್ಬಳನ್ನು ಲಗ್ನ ಮಾಡಿಕೊಳ್ಳಲು ಹೊರಟಿದ್ದಾನೆ ಎಂದರೆ ಸತಿಯಾದವಳು ಮಾರಿಯಾಗಿ ಬಿಡುತ್ತಾಳೆ. ಆದರೆ ಜಾನಪದ ಗರತಿ ಅದನ್ನು ಸ್ವಾಗತಿಸುತ್ತಾಳೆ. ಪತಿ ಇನ್ನೊಂದು ಸತಿಯನ್ನು ತರಲು ಹೊರಟಿರುವುದು ಮಕ್ಕಳಾಗಲಿಲ್ಲವೆಂಬ ಶಂಕೆಯೋ ? ಅಥವಾ ನಾನು ಚೆಲುವೆಯಲ್ಲವೆಂದು



ಇನ್ನೊಬ್ಬಳೊಡನೆ ವಿವಾಹವೇ ? ನಾನಿದ್ದ ಮನೆಗೆ ಸವತಿ ಬೇರೆ ಬೇಕೆ? ಈ ಪ್ರಶ್ನೆಗಳಿಗೆ ಗರತಿಯ ತ್ಯಾಗವೇ ಉತ್ತರ. ಅದನ್ನ ಕೇರಿತು—

"ಅಂಗೀಯ ಮ್ಯಾಲಂಗಿ ಛಂದೇನೊ
ನಸರಾಯಾ ।
ರಂಬಿ ಮ್ಯಾಲ ರಂಬಿ ಪ್ರತಿ ರಂಬಿ ।
ಬಂದರ ।
ಛಂದೇನೊ ರಾಯ ಪ್ರಾಣಿಯಾಗ ॥"

ಇಲ್ಲಿಯ ಅಂಗಿ ಅರ್ಧಾಂಗಿಗೆ ಎಂದು ಉಪಮಾನವಾಗಿ ಬಂದಿದೆ. ಪತಿಯ ಹೇಪಪ ಆಲಿಂಗನ ಅಂಗಿ. ಗಂಡನೊಬ್ಬನಿಗೆ ಇಬ್ಬರು ಅರ್ಧಾಂಗಿಯರು. ಮುಂದುವರಿದು ಎರಡನೇಯ ಹೆಂಡತಿಯನ್ನು ತರುವ ಕಾರಣಗಳಿಗೆ ಸಮಾಧಾನವನ್ನು ಕೊಡುತ್ತಾಳೆ. ಮಕ್ಕಳಾಗದಿದ್ದಕ್ಕೆ ಕಾರಣ ತಾನು ಬಂಜೆಯಲ್ಲ; ತಾನಿನ್ನೂ ಸಣ್ಣವಳು. ತಾನು ಕುರೂಪಿಯಲ್ಲ! ಸುಂದರಿಯರ ಮೇಲೆ ಸುಂದರಿಯರು ಬರುವಾಗ ಛಂದವಲ್ಲ. ಅದು ಬೇರೊಬ್ಬಳ ಅವಶ್ಯಕತೆ ನಿಮಗಿದ್ದರೆ ಅದಕ್ಕೆ ತನ್ನ 'ಸಮ್ಮತಿ' ಎಂದು ನಯವಾಗಿ ಸೂಚಿಸುತ್ತಾಳೆ. ಇಲ್ಲಿಯ ಗರತಿಗೆ ಗಂಡನ ಮೇಲೆ ಕೋಪವಿಲ್ಲ; ಸವತಿ ಎಂಬ ಮಾತ್ಸರ್ಯವಿಲ್ಲ. ಇಲ್ಲಿಯ ಗಂಡನು ತನ್ನ ಅರ್ಧಾಂಗಿಯ ಹೃದಯವನ್ನು ಅರ್ಥಮಾಡಿಕೊಳ್ಳದ ಮೂರ್ಖನಾಗಿದ್ದಾನೆ. ಇಲ್ಲಿ ಗರತಿಯ ತ್ಯಾಗ, ದುಃಖದ ಅದುಮುವಿಕೆ, ಅವಳ ಸಂಸ್ಕೃತಿ ವ್ಯಕ್ತಗೊಳ್ಳುತ್ತದೆ.

ಸತಿಯ ಸಲುಗೆ, ಔದಾರ್ಯಗಳನ್ನು ದುರುಪಯೋಗಿಸಿಕೊಂಡ ಗಂಡನು ಸೂಳೆ ಮನೆಯಲ್ಲಿ ಚಕ್ಕಂದ ಮಾಡುತ್ತ ಕುಳಿತಿದ್ದಾನೆ. ಯಾರೋ ಚಾಡಿಕೋರರು ಅಥವಾ ಹಿತಚಿಂತಕರು ಆಕೆಗೆ ಬಂದು ತಿಳಿಸಿದರು. ಗರತಿಗೆ ಬೇರೆಯವರಿಗೆ ತನ್ನ ಗಂಡನ ಸ್ತ್ರೈಣ ಪ್ರವೃತ್ತಿ ಟೀಕಿಸಬಾರದೆಂಬ ಗೌರವದಿಂದಾಗಿ—

"ಸಕ್ಕರೆ ನಗಲಪ್ಪ ನಗೆ ಮುಖದ
[illegible]

ನಾ ಮೆಚ್ಚಿ ಮಡಿದ ಪರಿಮಳ।
ದಾ ಹೂವ।
ಅವಳೊಂದು ಗಳಿಗೆ ಮುಡಿಯಲಿ॥"

ಎಂಬಲ್ಲಿ ಆದರ್ಶವನ್ನು ಕಾಣಬಹುದಾಗಿದೆ. ಬಾಳಿನ ಸಾಮರಸ್ಯವನ್ನು ಕಾಪಾಡಿಕೊಂಡು ಹೋಗುವುದಕ್ಕೆ ಹೆಣ್ಣು ತೋರಿಸುವ ಗುಣ ಮೆಚ್ಚತಕ್ಕದ್ದು.

ಪರಸ್ತ್ರೀಯೊಡನೆ ಸರಸ–ಸಲ್ಲಾಪ ನಡೆಸಿ ಮನೆಗೆ ಬಂದವನನ್ನು ವಿಚಾರಿಸಿಕೊಳ್ಳದವಳು ಹೆಂಡತಿಯೇ ? ಅದಕ್ಕೇ—

"ಎಲ್ಲಿ ಹೋಗಿದ್ದಿ ರಾಯ ಸೆಲ್ಲ್ಯಾಕ
ಮಸಾಸ್ಯಾದ ।
ಅಲ್ಲೊಬ್ಬಳ ಕೂಡ ಸಲಿಗೆಯ ।
ನೀವ್ ಮಾಡಿ।
ಇಲ್ಲೆಂಬಂದೇನ ನನ ಮುಂದೆ ॥"

ಹೀಗೆ ವಿನಯದಿಂದ ಗಂಡನನ್ನು ತಿದ್ದುವ ಗರತಿಯ ಪಾತ್ರ ವಿಶಿಷ್ಟವಾದಂತಹದು.

ಇಷ್ಟು ಗಾಢವಾಗಿ ಪ್ರೀತಿಸುವ ಹೆಂಡತಿಯ ಮೇಲಣ ಪ್ರೇಮ ಗಂಡನದೇನು ಕಡಿಮೆಯೇ? ಪತಿಯ ಅಪ್ಪಣೆಯಿಂದಾಗಿ ಸತಿ ತವರೂರಿಗೆ ಹೋಗಿದ್ದಾಳೆ. ಗಂಡನ ಮನಸ್ಸು ಬೆಂಬೆನ್ನುತ್ತಿದೆ. ಅಡಿಗೆ ಮನೆಯಲ್ಲಿ ಬಳೆಗಳ ಸದ್ದಿಲ್ಲ. ಹಡೆದವಳ ಊಟದ ರುಚಿಗಿಂತ ಹೆಂಡತಿಯ ಊಟದ ರುಚಿಯೇ ಹೆಚ್ಚು !

ಅಡಗೀಯ ಮನೆಯಾಗ ಮಡದೀಯ
ಸುಳಿವಿಲ್ಲ ।
ಅಡಗಿ ಬಾಯಿಗೆ ರುಚಿಯಿಲ್ಲ ।
ಹಡೆದವ್ವ ।
ಮಡದಿ ತವರಿಗೆ ಹೋಗ್ಯಾಳ ॥

ಹಿಂದೆ ನೋಡಿದ ಪದ್ಯದಲ್ಲಿ ಗಂಡನಿಲ್ಲದ ಊಟ ಹೆಂಡತಿಗೆ ರುಚಿ ಇರಲಿಲ್ಲ; ಇಲ್ಲಿ ಹೆಂಡತಿ ಇಲ್ಲದ ಊಟ ಗಂಡನಿಗೆ ರುಚಿ ಇಲ್ಲ. ಇದಲ್ಲವೇ ಗಂಡ ಹೆಂಡಿರ ಪ್ರೇಮ ಎನ್ನುವುದು ?

ಹೆಂಡತಿ ಅಪರೂಪಕ್ಕೆ ತವರೂರಿಗೆ ಹೋಗ [illegible]

ಅವನೂ ಹೆಂಡತಿಯನ್ನು ಬಿಟ್ಟು ಕ್ಷಣ ಹೊತ್ತು ಇರಲಾರ; ಕಳಿಸಲು ಮನಸ್ಸಿಲ್ಲ; ಕೋಪದ ಭರದಲ್ಲಿ ಗಂಡ ಹೆಂಡತಿಯನ್ನು ಬಡಿಯುತ್ತಾನೆ. ನಂತರ ತಾನು ಮಾಡಿದ ತಪ್ಪಿಗಾಗಿಯೋ ಅಥವಾ ಹೆಂಡತಿಯ ಮೇಲಿನ ಪ್ರೇಮದಿಂದಲೊ ಏನೊ—

ಮಡದೀನ ಬಡಿದಾನ ಮನದಾಗ
ಮರುಗ್ಯಾನ।
ಒಳಗ್ಹೋಗಿ ಸೆರಗ ಹಿಡಿಯೂತ।
ಕೇಳ್ಯಾನ।
ನಾ ಹೆಚ್ಚೋ ನಿನ್ನ ತವರ್ಹೆಚ್ಚೋ॥

ಎಂದು ಕೇಳುತ್ತಾನೆ. ತನ್ನ ಹೆಂಡತಿ ತೌರಿಗೆ ತಾನೇ ಏಕೆ ಹೋಗಬೇಕು. ಅಲ್ಲಿಗಿಂತ ಹೆಚ್ಚಿನ ಸುಖ ಇಲ್ಲಿದೆಯಲ್ಲಾ! ಮುನಿಸಿಕೊಂಡ ಹೆಂಡತಿಗೆ ಹೀಗೆ ಸಮಾಧಾನ ಮಾಡುತ್ತಾನೆ—

"ಹಾಸೀಗಿ ಹಾಸೆಂದ ಮಲ್ಲೀಗಿ
ಮುಡಿಯೆಂದ।
ಹ್ಯಾಸತ್ತರೆ ಮಡದಿ ಮಲಗೆಂದ।
ನನರಾಯ।
ತನ ನೋಡಿ ತೌರ ಮರೆಯೆಂದ॥"

ಜನ್ಮ ಕೊಟ್ಟಂತಹ ಊರನ್ನು ನನ್ನನ್ನು ನೋಡಿ ಮರೆ ಎಂದು ಹೇಳುತ್ತಿದ್ದಾನೆ ಪತಿ; ಅವನ ಒಲವಿನ ಬೆಂಬಲದಿಂದ ಅದನ್ನು ಮರೆಯಲು ಪ್ರಯತ್ನಿಸುತ್ತಿದ್ದಾಳೆ ಸತಿ. ಇಲ್ಲಿ ಕಾಣುವ ಗಂಡನ ಪ್ರೇಮ, ಹೆಂಡತಿಯ ಹಟ, ವಿರಹ, ಮುನಿಸು, ಕೊನೆಗೆ 'ಮಲಗೆಂದು' ಹೇಳುವುದರಲ್ಲಿ ಕಾಣುವ ಸೌಂದರ್ಯ ಅನಂತವಾದುದು; ಪವಿತ್ರವಾದುದು.

ಗಂಡ–ಹೆಂಡಿರ ತುಂಬು ಪ್ರೇಮ ಜಗಳಕ್ಕೆ ಮೂಲ. ಇಲ್ಲಿಯ ಜಗಳ ನಾಯಿಯ ಜಗಳವಲ್ಲ; ಅದು ಪ್ರೇಮದ ಜಗಳ.

"ಗಂಡ ಹೆಂಡಿರ ಜಗಳ ಗಂಧ ತೀಡಿದ
ಹಾಂಗ।
ಲಿಂಗಕ್ಕೆ ನೀರು ಎರೆದ್ಹಾಂಗ। ಹಿರಿ ಹೊಳಿ।
ಗಂಗವ್ವನ ಕೂಡಿ ನಲಿದ್ಹಾಂಗ॥"

ಇಲ್ಲಿ ಕವಿ ಕೊಟ್ಟಿರುವ ಹೋಲಿಕೆಗಳು ವಿಶಿಷ್ಟ ಹಾಗೂ ನೂತನವಾದುದು. ಗಂಡ ಹೆಂಡಿರ ಗಂಧದ ಜಗಳ ಶಿವನಿಗೆ ಪ್ರೀತಿ. ಲಿಂಗದ ನೈವೇದ್ಯದಷ್ಟು ದೈವೀಕತೆಯನ್ನು ಪಡೆದಿದೆ. ಸತಿ ಪತಿಯರ ಜಗಳ ಶಾಶ್ವತವಾದುದಲ್ಲ; ಅದು ಕೇವಲ ಉಂಡು ಮಲಗುವ ತನಕವಷ್ಟೆ!

ಹೀಗೆ ಸತಿ–ಪತಿಯರ ಒಂದೊಂದು ಭಾವಗಳನ್ನು ಸುಂದರವಾಗಿ ತ್ರಿಪದಿಯಲ್ಲಿ ಸೆರೆ ಹಿಡಿದರು. ಗಂಡ ಹೆಂಡಿರ ಪವಿತ್ರ ಬಂಧನ ಪರಿಪಕ್ವವೆನಿಸಿದೆ. ಸಂಸಾರ ಕೇವಲ ದೈಹಿಕ ಮಿಲನವಲ್ಲ; ಅದು ಆಂತರಿಕ ಮಧುರ ಮಿಲನ. ನಿಸರ್ಗದಲ್ಲಿ ವಿಶಿಷ್ಟವಾದಂತಹ ಸತಿ ಪತಿಯರ ಜೀವನದಲ್ಲಿಯ ಪ್ರೇಮ, ಸರಸ ಸಲ್ಲಾಪಗಳು, ಕಂದನ ಕೊಡುಗೆ, ಪೂಜೆ, ಕಲಹ, ವಿರಹ, ಇತ್ಯಾದಿ ದಾಂಪತ್ಯದ ಬೆಸುಗೆ ಗಾಢವಾಗಿ, ದೈವೀಕತೆಯನ್ನು ಪಡೆದು ಶಿವನಿಗೆ ಅರ್ಪಿತಗೊಳ್ಳುತ್ತದೆ. ✡



"ಡಾಕ್ಟ್ರೆ ರೋಗ ಗುಣವಾಗಲು ಬೇಕಾದ ಮದ್ದು ಮೊದಲು ಕೊಡಿ. ಫೀಸು ಏರಿಸಲು ಬೇಕಾದ ಮದ್ದು ಆ ಮೇಲೆ ನಿಧಾನವಾಗಿ ಕೊಡುವಿರಂತೆ"

# ಜನಸಂಖ್ಯಾ ನಿಯಂತ್ರಣಕ್ಕೆ ತಾಮ್ರದ ವಂಕಿ

"ಬಾದಲ"

ಎರಡು ಬೇಕು, ಮೂರು ಸಾಕು ಎಂಬ ಕುಟುಂಬ ಯೋಜನಾ ಮಂತ್ರ ಇಂದು ಎರಡೇ ಸಾಕು ಎಂಬುದಕ್ಕೆ ಬಂದು ನಿಂತಿದೆ. ಪ್ರಜೆಗಳ ಜೀವನಮಟ್ಟ ಏರದಿದ್ದರೂ ಜೀವನ ವೆಚ್ಚದ ಮಟ್ಟ ಮಾತ್ರ ಕಂಡಾಬಟ್ಟೆ ಹೆಚ್ಚಿಕೊಂಡಿರುವದರಿಂದ ಕುಟುಂಬ ಯೋಜನೆ ಕಾರ್ಯಕ್ರಮ ಸದ್ಯ ಸಕಲರಿಗೆ ಅತ್ಯಾವಶ್ಯಕವಾಗಿ ಪರಿಣಮಿಸಿದೆ. ಅದರಲ್ಲಿಯೂ ನವ ವಿವಾಹಿತರಿಗಂತೂ "ಕೀರ್ತಿಗೊಬ್ಬ ಮಗ ಆರತಿಗೊಬ್ಬ ಮಗಳು" ಎಂಬುದು ತಾರಕ ಮಂತ್ರವಾಗಿ ಪರಿಣಮಿಸಿದೆ. ಸಂತತಿ ನಿಯಂತ್ರಣಕ್ಕಾಗಿ ವಿಜ್ಞಾನವು ಅನೇಕ ಸಾಧನಗಳನ್ನು ಕಂಡುಹಿಡಿದಿದೆ, ಹೊಸ ಹೊಸ

ಪರಿಷ್ಕರಿಸುತ್ತಲೂ ಇದೆ.

ಔಷಧ ವಿಜ್ಞಾನದಲ್ಲಿ ಕೂಡ ತುಂಬ ಪ್ರಗತಿಯಾಗಿರುವದರಿಂದ ಶಿಶುಗಳ ಮರಣ ಪ್ರಮಾಣ ಸಾಕಷ್ಟು ತಗ್ಗಿದೆ. ಇದು ಒಂದು ದೃಷ್ಟಿಯಿಂದ ಸ್ವಾಗತಾರ್ಹವಾದರೂ ದೇಶದ ಜನಸಂಖ್ಯೆ ಹೆಚ್ಚುತ್ತ ಹೋಗುವದೇನೂ ಸುಳ್ಳಲ್ಲ. ಸಂತಾನ ನಿಯಂತ್ರಣದಿಂದ ಜನಸಂಖ್ಯಾ ಸ್ಫೋಟವನ್ನು ತಡೆಗಟ್ಟುವದಕ್ಕಾಗಿ ಮಹಿಳೆಯರು ಅವಲಂಬಿಸುತ್ತಿರುವ ನಾನಾ ವಿಧಾನಗಳಲ್ಲಿ ಮಾತ್ರೆ ಹಾಗೂ ವಂಕಿ ಇವುಗಳು ಪ್ರಧಾನವಾಗಿವೆ. ಮಾತ್ರೆ ಸೇವನೆ ಪದ್ಧತಿ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಬಳಕೆಯಲ್ಲಿದ್ದಷ್ಟು ಭಾರತದಲ್ಲಿ ಪ್ರಚಾರದಲ್ಲಿಲ್ಲ. ವಂಕಿಯ ಉಪಯೋಗ ಮಾತ್ರ ಭಾರತದಲ್ಲಿ ಸಾಕಷ್ಟು ಸುಪರಿಚಿತ. ಮಾತ್ರೆ ಸೇವನೆಯಿಂದ ಅನುಭವಿಸಬೇಕಾದ ಇನ್ನಿತರ ದೈಹಿಕ ತೊಂದರೆಗಳೂ ವಂಕಿಯ ಜನಪ್ರಿಯತೆಗೆ ಕಾರಣವಾಗಿರಬಹುದು.

ಕಳೆದ ಅನೇಕ ವರ್ಷಗಳಿಂದ ಪ್ರಚಾರದಲ್ಲಿರುವ ಪ್ಲಾಸ್ಟಿಕ್ ವಂಕಿ ಪ್ರಯೋಜನಕಾರಿಯಾಗಿರುವದಾದರೂ ಅನೇಕರಿಗೆ ಅದು ಒಗ್ಗುವದಿಲ್ಲ. ವಂಕಿಧರಿಸಿದ ನಂತರ ಮಾಸಿಕ ಪಾಳಿಯ ಕಾಲಕ್ಕೆ ವಿಶೇಷ ರಕ್ತಸ್ರಾವದಿಂದ ಕೆಲ ಮಹಿಳೆಯರು ದುರ್ಬಲತೆ, ನಿಶ್ಶಕ್ತತೆಗಳನ್ನು ಅನುಭವಿಸಬೇಕಾಗಿ ಬರುತ್ತದೆ. ಕೆಲವರಿಗೆ ಸೊಂಟನೋವು, ಬೆನ್ನುನೋವು ಮುಂತಾದವುಗಳೂ ಕಾಣಿಸಿಕೊಂಡು ವಂಕಿಯನ್ನು ತೆಗೆಸಬೇಕಾದ ಸಂದರ್ಭವೂ ಉಂಟಾಗುತ್ತದೆ. ಒಮ್ಮೆ ಕೂಡ ಹೆರಿಗೆ ಆಗದವರಿಗೆ ವಂಕಿ ಒಗ್ಗಲಾರದು ಎಂದೂ ಹೇಳಲಾಗುತ್ತದೆ. ಹೆರಿಗೆಯ ನಂತರ ಗರ್ಭಾಶಯದ ಆಕಾರವು ಮಾರ್ಪಡುವದರಿಂದ ವಂಕಿಗೆ ಸರಿಹೋಗುತ್ತದೆ.

ವಂಕಿಯನ್ನು ಅಳವಡಿಸುವಾಗ ಮತ್ತು ನಂತರ ಅದರಿಂದ ಮಹಿಳೆಯರಿಗೆ ಅಪಾಯ ಉಂಟಾಗಬಾರದೆಂಬ ದೃಷ್ಟಿಯಿಂದ ಅದರ ಆಕಾರಾದಿಗಳ ಕುರಿತು ಸಂಶೋಧನೆ ನಡೆದೇ ಇದೆ. ಈಗ ಈ ಪ್ಲಾಸ್ಟಿಕ್ ವಂಕಿಯ ಬದಲು

'ಗ್ರಾಫಿಗಾರ್ಡ್' ಅಥವಾ 'ಕಾಪರ್7' ಎಂಬ ಹೊಸ ತಾಮ್ರದ ವಂಕಿಯು ಹೆಚ್ಚು ಹೆಚ್ಚಾಗಿ ಬಳಕೆಯಲ್ಲಿ ಬರಹತ್ತಿದೆ. ಹಳೆಯ ವಂಕಿಯಂತೆ ಇದು ... ಅಪಾರ ದರ್ಶಕ ಪ್ಲಾಸ್ಟಿಕ್ ನಿಂದಲೇ ... ತಯಾರಿಸಲಾಗಿರುವದರಿಂದ ದೇಹ ದಲ್ಲಿ ಅದು ... ಸ್ಥಾನಾಂತರ ಹೊಂದಿದರೂ 'ಎಕ್ಸ್‌ರೇ' ಕಣ್ಣಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಇದು ಪ್ಲಾಸ್ಟಿಕ್ ವಂಕಿಗಿಂತ ಗಾತ್ರದಲ್ಲಿ ಚಿಕ್ಕದಾಗಿದ್ದು ಅತಿ ಜಿನಗು ತಾಮ್ರದ ತಂತಿಯನ್ನು ಮೇಲೆ ಹೆಣೆಯಲಾ ಗಿರುತ್ತದೆ.

ಈ 'ಕಾಪರ್7' ವಂಕಿಯು ಗಾತ್ರದಲ್ಲಿ ಚಿಕ್ಕದಾಗಿರುವದರಿಂದ ಧಾರಣೆಗೆ ಅಧಿಕ ಅನುಕೂಲ; ರಕ್ತಸ್ರಾವವೂ ಕಡಿಮೆಯಾಗುತ್ತದೆ. ವಂಕಿ ದೊಡ್ಡದಿದ್ದರೆ ರಕ್ತಸ್ರಾವ ಹೆಚ್ಚು. ಈ ಚಿಕ್ಕ ಗಾತ್ರದ ವಂಕಿಯನ್ನು ಹೆರಿಗೆ ಆಗದಿರುವವರಿಗೂ ಅನಾಯಾಸದಿಂದ ಅಳವಡಿಸಬಹುದು. ಹೀಗಾಗಿ ಈ ತಾಮ್ರದ ವಂಕಿಯು ಅಧಿಕ ಪ್ರಯೋಜನಕಾರಿ.

'ಕಾಪರ್7' ವಂಕಿಯಲ್ಲಿ 7 ಆಕಾರದ ಸುತ್ತಲೂ ಹಣೆದ ತಾಮ್ರದ ತಂತಿಯು ೨೦೦–೩೦೦ ಚದರ ಮಿಲಿ ಮೀಟರಿನಷ್ಟಿರುವದು. ಇದರಿಂದ ಮೂತ್ರನಾಳದಲ್ಲಿ ನಿತ್ಯ ತಾಮ್ರದ ಅಂಶ ಉಳಿದುಕೊಳ್ಳುವಂತಾಗುವದು. ಅದು ರಕ್ತದಲ್ಲಿ ಬೆರೆತು ಹೋಗುವದಿಲ್ಲ. ಹೀಗಾಗಿ ಮೂತ್ರನಾಳದಲ್ಲಿ ಉಳಿದುಕೊಳ್ಳುವ ತಾಮ್ರದ ಅಂಶವು ಗರ್ಭಧಾರಣೆಯನ್ನು ಪ್ರತಿಬಂಧಿಸುತ್ತದೆ. ಅಲ್ಲದೆ ಇದು ಪುರುಷನ ವೀರ್ಯಾಣುಗಳಿಗೂ ಮಾರಕವಾಗಿರುವದರಿಂದ ಗರ್ಭಧಾರಣೆಗೆ ಅವಕಾಶವೇ ಇಲ್ಲದಂತಾಗುತ್ತದೆ. ವಿದೇಶಗಳಲ್ಲಿ ಈ ಕುರಿತು ಅನೇಕಾನೇಕ ಪ್ರಯೋಗಗಳನ್ನು ನಡೆಸಿ ತೃಪ್ತಿಕರ ಪರಿಣಾಮ ಪಡೆದದ್ದಾಗಿದೆ.

ಮುಟ್ಟಾಗುವ ಒಂದೆರಡು ದಿನಗಳು ಮೊದಲು ವಂಕಿಯನ್ನು ಅಳವಡಿಸಲಾಗುತ್ತದೆ. ಈ ಕ್ರಿಯೆಗೆ ಅದುವೇ ಸಕಾಲ. ಈ ತಾಮ್ರದ ವಂಕಿಯಲ್ಲಿ ತಾಮ್ರದ ತಂತಿಯೆ ಗರ್ಭಧಾರಣೆ ತಡೆಗಟ್ಟುವ ಸಾಮರ್ಥ್ಯ ಹೊಂದಿದೆ. ಇದರಲ್ಲಿ ಬಳಸಲಾಗುವ ಪ್ಲಾಸ್ಟಿಕ್ ಆ ತಾಮ್ರದ ತಂತಿಗೊಂದು ಆಧಾರ ಮಾತ್ರ. ಹೀಗಾಗಿ ಈ ತಾಮ್ರದ ವಂಕಿಯಿಂದ ಇತರ ದುಷ್ಪರಿಣಾಮಗಳು ಮಹಿಳೆಯರಲ್ಲಿ ತಲೆದೋರಲಾರವು. ಈ ವಂಕಿಯ ಮಹತ್ವ ಇದೇ. ಈ ವಂಕಿಯ ಪರಿಣಾಮ ದೀರ್ಘಕಾಲದ ವರೆಗೂ ಕಂಡು ಬರುವದೂ ಮಹಿಳೆಯರಿಗೆ ಇಷ್ಟಕರವಾಗಿದೆ.

ವಂಕಿ ಧರಿಸಿದರೆ ಕ್ಯಾನ್ಸರ ಆಗುತ್ತದೆ ಎಂಬ ಭಾವನೆ ಕೆಲ ಮಹಿಳೆಯರಲ್ಲಿ ಇದೆ. ಪ್ಲಾಸ್ಟಿಕ್ ವಂಕಿಯನ್ನು ಕನಿಷ್ಠ ಮೂರುವರ್ಷಗಳಿಗೊಮ್ಮೆ ಬದಲಿಸಲೇಬೇಕೆಂದೂ ಹೇಳುತ್ತಾರೆ. ಆದರೆ ತಾಮ್ರದ ವಂಕಿಯಿಂದ ಇಂಥ ಯಾವ ದುಷ್ಪರಿಣಾಮ ಉಂಟಾಗುವದಿಲ್ಲ ಎಂಬುದು ಪರೀಕ್ಷೆಯಲ್ಲಿ ವ್ಯಕ್ತವಾಗಿದೆ. ಅಲ್ಲದೆ ತಾಮ್ರದ ತಂತಿಯ ವಂಕಿ ಅಳವಡಿಸಿ ಕೊಂಡಿದ್ದರೆ ಗನೋರಿಯದಂಥ ಗುಹ್ಯರೋಗಗಳ ಭೀತಿಯೂ ಇಲ್ಲ. ತಾಮ್ರದ ತಂತಿಯು ಆ ರೋಗ ಜಂತುಗಳನ್ನು ನಿರ್ಮೂಲಮಾಡಿ ಬಿಡುತ್ತದೆ. ಗುಹ್ಯರೋಗಗಳ ಹಬ್ಬುಗೆಯನ್ನು ತಡೆಗಟ್ಟುವಲ್ಲಿಯೂ ಈ ತಾಮ್ರದ ವಂಕಿಯು ಅಧಿಕಪ್ರಯೋಜನಕಾರಿ ಎಂದಾಯಿತು.

ತಾಮ್ರದ ವಂಕಿ ಅಳವಡಿಸಿಕೊಂಡ ನಂತರವೂ ದೈವವಶಾತ್ ಮಹಿಳೆಯು ಗರ್ಭಧರಿಸಿದರೆ ತಾಮ್ರದ ವಂಕಿಯಿಂದ ಅಪಾಯವೇನೂ ಇಲ್ಲ. ನಿಂತ ಗರ್ಭ ಬಿದ್ದುಹೋಗುವ ಸಂಭವವೇ ಹೆಚ್ಚು: ಹಾಗಾಗದೆ, ಒಂದು ವೇಳೆ ಆಕೆ ದಿನತುಂಬಿ ಹಡೆದರೂ ಕೂಸಿಗೆ, ಈ ವಂಕಿಯಿಂದ, ಯಾವ ಅಪಾಯವೂ ಆಗಲಾರದು.

ತಾಮ್ರದ ವಂಕಿ ಅತ್ಯಧಿಕ ಪ್ರಸಾರದಲ್ಲಿರುವದು ಬ್ರಿಟನ್ನಿನಲ್ಲಿ. ಅಮೇರಿಕ, ಕೆನಡಾ, ನ್ಯೂಝೀಲಂಡ್, ಆಸ್ಟ್ರೇಲಿಯಾಗಳಲ್ಲಿಯೂ ತಾಮ್ರದ ವಂಕಿಯ ಬಳಕೆಯ ಪ್ರಮಾಣ ಹೆಚ್ಚುತ್ತಲಿದೆ.

ಭಾರತದಲ್ಲಿ ಕೂಡ ತಾಮ್ರದ ವಂಕಿ ಉಪಯೋಗಿಸಲು ಭಾರತ ಸರಕಾರದ ಆರೋಗ್ಯ ಶಾಖೆಯು ಮನ್ನಣೆಯಿತ್ತಿದೆಯಲ್ಲದೆ ಅ

ವಂಕಿಗಳು ಭಾರತದಲ್ಲಿ ಲಭ್ಯವಾಗುತ್ತಲೂ ಇವೆ. ಅವುಗಳನ್ನು ಅಳವಡಿಸಲು ಯೋಗ್ಯವಾಗುವಂತೆ ಸಂಸ್ಕರಿಸಿ ಒದಗಿಸಲಾಗುವದರಿಂದ ಮಹಿಳೆಯರಿಗೆ ಅಪಾಯ ಒದಗುವ ಸಂದರ್ಭಗಳೂ ಕಡಿಮೆ.

ಐತಿಹಾಸಿಕ ಯುಗದಲ್ಲಿ ಜನಸಂಖ್ಯೆಯು ಪೆಚ್ಚಳ ಸಾವಿರ ವರ್ಷಕ್ಕೆ ಪ್ರತಿಶತ ೨ ರಷ್ಟು ಇದ್ದರೆ ಈಗ ವರ್ಷಂಪ್ರತಿ ಪ್ರತಿಶತ ೨ ರಂತೆ ಈ ಪೆಚ್ಚಳ ಕಂಡು ಬರುತ್ತಿದೆ ಎಂದು ಬ್ರಿಟಿಶ ವೈದ್ಯರ ವರದಿಯೊಂದು ಇತ್ತೀಚೆಗೆ ತಿಳಿಸಿದೆ. ಅಂದಿಗಿಂದಿಗೆ ಜನಸಂಖ್ಯೆಯು ಪೆಚ್ಚಳ ಸಾವಿರ ಪಟ್ಟು ಏರಿದೆ ಎಂದಾಯಿತು!

ಜನಸಂಖ್ಯಾ ಸ್ಫೋಟವನ್ನು ತಡೆಗಟ್ಟುವದು ಈಗ ಅನಿವಾರ್ಯ ಎಂದು ಪರಿಸ್ಥಿತಿ ಸಾರುತ್ತಿಲ್ಲವೇ? ನಮ್ಮ ವಿಜ್ಞಾನಿಗಳೂ ನಾಯಕರೂ ಇದೇ ಮಾತನ್ನೇ ಸಾರಿ ಸಾರಿ ಹೇಳುತ್ತಿದ್ದಾರೆ. ಪ್ರಪಂಚದ ಅರ್ಧಕ್ಕಿಂತ ಹೆಚ್ಚು ಜನಸಂಖ್ಯೆಗೆ ಕಾಯದೆಬದ್ಧ ಗರ್ಭಪಾತದ ಸೌಕರ್ಯ ಇದೆ ಎಂಬುದನ್ನೂ ಇಲ್ಲಿ ಸ್ಮರಿಸಬಹುದು. ಆದರೆ ರೋಗೋಪಚಾರಕ್ಕಿಂತ ಪ್ರತಿಬಂಧವೆ ಲೇಸಲ್ಲವೆ? ಆದ್ದರಿಂದ ಮಹಿಳೆಯರು ತಾವಾಗಿ ಮುಂದಾಗಿ ಸಂತತಿ ಪ್ರತಿಬಂಧಕ ಉಪಾಯಗಳನ್ನು ಅವಲಂಬಿಸುವದು ಕ್ಷೇಮಕರ. ತಾಮ್ರದ ವಂಕಿಯು ಭಾರತದಲ್ಲಿ ಪಲವಾರು ಕೇಂದ್ರಗಳಲ್ಲಿ ಲಭ್ಯವಿದ್ದು ಮಹಿಳೆಯರು ಡಾಕ್ಟರರ ಸಲಹೆಯ ಮೇರೆಗೆ ಅವನ್ನು ಪಡೆದು ಅಳವಡಿಸಿಕೊಳ್ಳಬಹುದಾಗಿದೆ.

ಆಚಾರ್ಯ ವಿನೋಬಾಜಿ ಹೇಳಿದಂತೆ ಕೇವಲ ೨೫ ರಿಂದ ೪೦ ವರ್ಷದವರೆಗೆ ಗಾರ್ಹಸ್ಥ್ಯ ಜೀವನ ನಡೆಸುವದು ಸಾಧ್ಯವಿದ್ದರೆ ಒಳ್ಳೆಯದೆ ಆದರೆ ಅದು ಅಸಾಧ್ಯಕೋಟಿಯೊಳಗಿನ ಮಾತೆಂದೇ ತೋರುತ್ತದೆ. ಅಲ್ಲದೆ ೧೫ ವರ್ಷಗಳ ದಾಂಪತ್ಯ ಜೀವನದಲ್ಲಿ ಎರಡಕ್ಕಿಂತ ಹೆಚ್ಚು ಮಕ್ಕಳಾಗುವದಿಲ್ಲವೆಂಬ ಭರವಸೆಯಾದರೂ ಎಲ್ಲಿದೆ? ಏನೇ ಆಗಲಿ, ಜನಸಂಖ್ಯಾ ನಿಯಂತ್ರಣ ಇಂದಿನ ಕಾಲದಲ್ಲಿ ಅನಿವಾರ್ಯವೆಂದಾದಾಗ ಬಾಹ್ಯಸಾಧನಗಳನ್ನು ಅಳವಡಿಸಿಕೊಳ್ಳುವದರಲ್ಲಿ ತಪ್ಪೇನಿಲ್ಲ. ಸಂಯಮದ ಬಾಳು ಅಶಕ್ಯವೆಂದಾಗ ಆವಶ್ಯಕ ನಿಯಂತ್ರಣವನ್ನು ತಾನಾಗಿಯೆ ಹಾಕಿಕೊಳ್ಳುವದೇ ಉಚಿತ. ತಾಮ್ರದ ವಂಕಿ ಈ ಕಾರ್ಯದಲ್ಲಿ ನೆರವಾದರೆ ಏಕೆಬೇಡ? ✡



ಶ್ರೀಮಂತನಾಗಿ ಸಾಯಬೇಕೆಂದು ಬಡವನಾಗಿ ಜೀವಿಸುವುದಕ್ಕಿಂತ ದೊಡ್ಡ ಮೂರ್ಖತನ ಇನ್ನೊಂದಿಲ್ಲ.

— ಇವ್ ದಿಕ್ಸ್

## ನಿಮ್ಮ ವಯಸ್ಸೆಷ್ಟು?

ನಿಮ್ಮ ಮನೆಯ ನಂಬರನ್ನು ಒಂದು ಹಾಳೆಯ ಮೇಲೆ ಬರೆದು ಅದನ್ನು ಇಮ್ಮಡಿಗೊಳಿಸಿರಿ. ಹೀಗೆ ಬಂದ ಸಂಖ್ಯೆಗೆ ಐದನ್ನು ಕೂಡಿಸಿ ಅದನ್ನು ಐವತ್ತರಿಂದ ಗುಣಿಸಿರಿ. ಈಗ ದೊರೆತ ಸಂಖ್ಯೆಗೆ ನಿಮ್ಮ ವಯಸ್ಸನ್ನು ಸೇರಿಸಿರಿ. ಬಳಿಕ ಈ ಹೊಸ ಸಂಖ್ಯೆಗೆ ३६५ ಅನ್ನು ಕೂಡಿಸಿ ಅನಂತರ ೬೧೫ ಅನ್ನು ಕಳೆಯಿರಿ. ಈಗ ನಿಮ್ಮ ಮನೆಯ ನಂಬರಿನ ಮುಂದೆ ನಿಮ್ಮ ವಯಸ್ಸಿನ ಅಂಕೆ ಬಂದಿರುತ್ತದೆ.

# ರಥ-ಚಕ್ರ

ಎಸ್. ವಿ. ಗೋವಿಂದರಾಜು

ಹಳದಿ ಬಿಸಿಲು ತಿಳಿಯಾಗುತ್ತಿದೆ. ಉದ್ದುದ್ದವಾಗಿ ಬೆಳೆದು ನಿಂತಿರುವ ತಾಳೇಮರಗಳು ಮತ್ತಷ್ಟು ಎತ್ತರವಾಗಿ ಕಾಣುತ್ತಿವೆ. ಮಂಜಿನ ಹೊದಿಕೆಯನ್ನು ಹೊದ್ದ ಪರ್ವತಗಳ ಶಿಖರಗಳು ದ್ರವಿಸುತ್ತಿರುವ ಬಂಗಾರದಂತೆ ಮಿಂಚುತ್ತಿವೆ. ಮುಸುಕು ಕವಿದ ಆ ಅಂಚಿನಲ್ಲಿ ನಾನು ಏನನ್ನೋ ಹುಡುಕುತ್ತಿದ್ದೇನೆ; ಆದರೆ ಸ್ಪಷ್ಟವಾಗಿ ಏನೂ ಕಾಣುತ್ತಿಲ್ಲ.

ಈಗ ಬಹಳ ದಿನಗಳ ಬಳಿಕ ಇಲ್ಲಿಗೆ ಬಂದಿದ್ದೇನೆ; ಮನೆಯೆಂದು ಕರೆಯುವ ಇಲ್ಲಿಗೆ. ಇಲ್ಲಿಯ ಕಣಕಣದಲ್ಲೂ ಅದೆಷ್ಟು ಬಿಂಬ-ಪ್ರತಿಬಿಂಬಗಳು ರೂಪ ವಿರೂಪಗೊಂಡಿರುವುದನ್ನು ನೋಡಿದ್ದೇನೆ? ಶೈಶವದ ಅಸಂಖ್ಯ ಹರ್ಷ, ವಿಷಾದ ಮಿಶ್ರಿತ ನೆನಪುಗಳು?

ಅಪ್ಪ ತೀರಿಕೊಂಡಾಗ ನಾವಿನ್ನೂ ಚಿಕ್ಕವರು. ಬಿಕ್ಕಳಿಸಿ ಅಳುತ್ತಿದ್ದ ಅಮ್ಮನ ರೋದನ, ಎಂದಿಗೂ ಆರದ ಅಕ್ಕನ ಕಣ್ಣೀರಿನ ಝರಿ, ಖಾಲಿ ಕಾಗದದಂತೆ ಬಿಳಿಚಿಕೊಂಡ ಅಜ್ಜನ ಮುಖ-ಇಂದಿಗೂ ಅನಾಯಾಸವಾಗಿ ನೆನಪಾಗಿ ಬಿಡುವ ಇವುಗಳನ್ನು ನೆನೆದು ತತ್ತರಿಸಿ ಹೋಗುತ್ತೇನೆ...ಎಚ್ಚರ ತಪ್ಪುತ್ತೇನೆ...

...ನಾನಾಗ ಕನುವಿನ ಸಮಕ್ಕೆ ಬೆಳೆದಿದ್ದೆ. ಹೊಸ್ತಿಲ ಬಳಿ ಕುಳಿತ ಅಮ್ಮ ಬಳೆಗಳನ್ನು ಒಡೆಯುತ್ತಿದ್ದರು. ಅಜ್ಜ ಕಲ್ಲಿನಂತೆ ಸ್ತಬ್ಧರಾಗಿದ್ದರು. ಒಂದೇ ಒಂದು ಮಾತನ್ನೂ ಆಡಲಾರದವರಾಗಿದ್ದರು; ಅಕ್ಕ ನನ್ನನ್ನು ತೊಡೆಯ ಮೇಲೇರಿಸಿಕೊಂಡು ತನ್ನಷ್ಟಕ್ಕೆ ತಾನೇ ಅಳುತ್ತಿದ್ದಳು-ಅಳುತ್ತಲೇ ಇದ್ದಳು?

ಅಪ್ಪನ ಅಕಾಲ ಮೃತ್ಯು ಅಜ್ಜನನ್ನು ಮತ್ತಷ್ಟು ದುರ್ಬಲನನ್ನಾಗಿಸಿತ್ತು. ಅವರ ಕೈ-ಕಾಲುಗಳ ಚಲನೆ ಈಗ ಹಿಂದೆಂದಿಗಿಂತಲೂ ಕುಗ್ಗಿತ್ತು. ನೆನಪು ಕೂಡ ಒಂದು ಗೊತ್ತಾದ ಗಾತ್ರದಲ್ಲಿ ಅಜ್ಜನಿಂದ ನುಸುಳಿಕೊಂಡಿತ್ತು. ಮಾತನಾಡುತ್ತಿರುವಂತೆಯೇ ಸಿಡಿದು ಬೀಳುತ್ತಾರೆ. ಮತ್ತೆ, ಮತ್ತೆ ಹೇಳಿದ ಮಾತುಗಳೂ ಒಮ್ಮೊಮ್ಮೆ ನೆನೆಪಿರುವುದಿಲ್ಲ.

ಅಂಗಡಿಗೆ ಬಾಕಿ ತೆರಬೇಕಾಗಿದ್ದವರೆಲ್ಲ ಸಮಾಧಾನದ ನಿಟ್ಟುಸಿರಿಟ್ಟು ಸುಮ್ಮನಾಗಿದ್ದರು. ಇನ್ನು ಸಂಬಂಧಿಕರ ಸಹಾಯದ ಮಾತಿರಲಿ, ಅವರೆಲ್ಲ ಅಪ್ಪನ ಆಕಸ್ಮಿಕ ಸಾವಿನ ಪೂರ್ಣ ಲಾಭ ಪಡೆಯುವಲ್ಲಿ ಯಶಸ್ವಿಯಾಗಿದ್ದರು. ಎರಡೆರಡು ಬಾರಿ ತಮ್ಮ ಹಣವನ್ನು ವಸೂಲಿ ಮಾಡಿಕೊಳ್ಳುವಲ್ಲಿಯೂ ಹಿಂದು ಮುಂದು ನೋಡಿರಲಿಲ್ಲ.

ಪಕ್ಕದ ಅಂಗಡಿಯಾತ ಗ್ರಾಹಕರನ್ನು ಸೆಳೆದುಕೊಂಡಿದ್ದ. ಮತ್ತೊಬ್ಬ ತನ್ನ ಪಕ್ಕಕ್ಕಿದ್ದ ನಮ್ಮ ಭೂಮಿಯನ್ನು ಹೆಚ್ಚುವರಿ ಮಾಡಿಕೊಂಡಿದ್ದನು. ಒಳ ಹೊರಗಿನವರೆಲ್ಲ ನಮ್ಮನ್ನು ಸುಲಿಗೆ ಮಾಡುವುದರಲ್ಲಿ ತಮ್ಮಲ್ಲೇ ಪೈಪೋಟಿ ನಡೆಸಿದಂತಿತ್ತು. ಸಂಕ

ಟದ ಈ ಸಮಯದಲ್ಲಿ ತನ್ನವರೆನ್ನುವ ಯಾರೊಬ್ಬರೂ ಕಾಣುತ್ತಿರಲಿಲ್ಲ?

ಜನ ಈಗ ಕಾದಾಟಕ್ಕೂ ಸಿದ್ಧ ಎಂದು ತಿಳಿದೇ ಯಾರೊಬ್ಬರ ಬಳಿಯೂ ಚಕಾರವೆತ್ತಲಿಲ್ಲ. ಇಳಿದ ವಯಸ್ಸು ಅಜ್ಜನದು, ನಾವಿನ್ನೂ ಸಣ್ಣವರು!

ಅಂದು ಅಜ್ಜ ಅಣ್ಣನನ್ನು ಬಳಿಗೆ ಕರೆದರು. ಏನು ಹೇಳಿದರೋ ತಿಳಿಯದು. ಅಂತೂ ಅಣ್ಣ ಇಡೀ ದಿನ ಚಿಂತಾಕ್ರಾಂತರಾಗಿದ್ದರು. ಸಂಜೆ ನಾವು ಹೊಲದಿಂದ ಹಿಂತಿರುಗುವಾಗ ಅಣ್ಣ ಹೇಳಿದ್ದರು–'ಜಿತ್ತು, ನಾನು ಓದಲು ಅಲ್ಮೋಡಕ್ಕೆ ಹೋದರೆ ನೀನು ಮನೇ ಕಡೆ ನೋಡಿಕೊಳ್ಳುವೆಯಾ?'

ನನಗೆ ಏನೊಂದೂ ಹೊಳೆಯಲಿಲ್ಲ. ಅಣ್ಣ ವ್ಯಾಸಂಗಕ್ಕೆ ಹೋಗಬೇಕಾದದ್ದು ಸರಿಯೇ, ಆದರೆ ನಾನಿಲ್ಲಿ ಏನನ್ನು ನಿರ್ವಹಿಸಬೇಕಾಗಿದೆ? ಇದ್ದಲ್ಲಿ ಹೇಗೆ?

'ನೀನು ಇಡೀ ದಿನ ಪೋಕರಿಯಾಗಿ ಅಡ್ಡಾಡುತ್ತಿರುತ್ತೀಯೇ? ನೋಡು, ಅಜ್ಜ ಈ ಇಳಿವಯಸ್ಸಿನಲ್ಲಿ ಏನು ಮಾಡಿಯಾರು? ಹಿರಿದಾದ ನಿರ್ವಹಣೆ. ಅಂಗಡಿಯಲ್ಲೂ ಅವರಿಂದ ಹೆಚ್ಚು ಕೆಲಸ ಸಾಗದು. ಸೇವಕರನ್ನು ನೇಮಿಸಿಕೊಂಡರೂ ಕೊಳ್ಳೆ ಹೊಡೆಯುವ ವಿಷಯದಲ್ಲಿ ಮಾತ್ರ ಅವರು ನಿಸ್ಸೀಮರು, ನಿರ್ದಯಿಗಳು! ನೀನು ಶಾಲೆಯ ನಂತರ ನೇರವಾಗಿ ಮನೆಗೆ ಹಿಂತಿರುಗಬೇಕು. ಯಾವಾಗಲೂ ಒಂದಲ್ಲ ಒಂದು ಕೆಲಸದಲ್ಲಿ ಸಹಾಯ ನೀಡಬೇಕು. ಇದರಿಂದ ಅಜ್ಜನಿಗೆ ಬಹಳ ನೆರವು ಸಿಕ್ಕಿದಂತಾಗುವುದು.'

ಅಣ್ಣನ ಕೊರಳು ತುಂಬಿ ಬಂದಿತ್ತು. ಅದೇ ಸ್ವರದಲ್ಲಿ ಮುಂದುವರಿಸಿದ್ದರು, "ಯಾರದಾದರೂ ಸಹಾಯ ಪಡೆಯುವ ಎಂದರೆ ಅಂಥಹ ಯಾರೊಬ್ಬರೂ ಕಾಣಸಿಗುತ್ತಿಲ್ಲ. ಜನ ನಾವು ಉಣ್ಣು–ತಿನ್ನುವುದನ್ನೇ ನೋಡಿ ಸಹಿಸಲಾರರು...ಅಪ್ಪ ನಮ್ಮನ್ನೆಲ್ಲ ಚೆನ್ನಾಗಿ ಓದಿಸಬೇಕೆಂದು ಹಂಬಲ ಹೊತ್ತಿದ್ದರಲ್ಲ! ನಾನು ಮುಂದೆ ಓದಬೇಕೆಂದು ಅಜ್ಜ ಹೇಳುತ್ತಾರೆ...ಅಪ್ಪ ಸಾಯುತ್ತಿದ್ದಂತೆ ಇಡೀ ವ್ಯವಹಾರ ಕುಸಿದು ಬಿತ್ತೆಂದು ಜನ ಆಡಿಕೊಳ್ಳುವಂತಾಗಬಾರದು. ಅಪ್ಪ ಎಲ್ಲವೂ ಹೇಗೆ ನಡೆಯಬೇಕೆಂದು ಬಯಸಿದ್ದರೋ ಹಾಗೆಯೇ ನಡೆಯಲಿ. ಅಜ್ಜನ ಮನಸ್ಸನ್ನು ನೋಯಿಸಬಾರದು...ನಾನು ಹೆಚ್ಚು ಶ್ರಮ ವಹಿಸುವೆನು. ನೀನೂ ಕೂಡ ಕಷ್ಟಪಟ್ಟು ಅಭ್ಯಾಸ ಮಾಡು. ವ್ಯರ್ಥ ಅಲೆದಾಟವನ್ನು ಬಿಟ್ಟು ಬಿಡುವಿನ ಸಮಯದಲ್ಲಿ ಮನೆಗೆಲಸದತ್ತ ಮನಸ್ಸು ಕೊಡು. ಪತ್ರಗಳು ಕೈಸೇರಿದಂತೆಲ್ಲ ನಾನೂ ಊರಿಗೆ ಬಂದು ಹೋಗುತ್ತಿರುತ್ತೇನೆ."

ಮತ್ತೆ ಒಂದು ದಿನ ಅಣ್ಣ ನಿಜವಾಗಿಯೂ ಹೊರಟು ನಿಂತಿದ್ದರು! ಕುದುರೆಯ ಮೇಲೆ ಅವರ ಸಾಮಾನನ್ನು ಹೇರಲಾಯಿತು. ಸೇತುವೆ ದಾಟುವತನಕ ಅಜ್ಜ ದೊಣ್ಣೆ ಊರಿಕೊಂಡು ಅವರನ್ನು ಬೀಳ್ಕೊಡಲು ಹೋದರು. ಅಣ್ಣನೊಂದಿಗೆ ಅದೇನೆಲ್ಲವನ್ನು ಮಾತನಾಡಿದರೋ ತಿಳಿಯದು!

ಅಣ್ಣ ವಯಸ್ಸಿನಲ್ಲಿ ನನಗಿಂತ ಕೇವಲ ಮೂರು ವರ್ಷ ಹಿರಿಯರು. ಆದರೂ ತಂದೆಯ ಅಕಾಲ ಮರಣ ಅವರಿಗೆ ಬಹಳಷ್ಟು ತಿಳಿವಳಿಕೆಯನ್ನು ತಂದುಕೊಟ್ಟಿದೆ ಎಂದೆನಿಸುತ್ತಿತ್ತು.

ಮತ್ತೆ ಅಜ್ಜ ಕೆಲಸದಲ್ಲಿ ತೊಡಗಿಬಿಟ್ಟಿದ್ದರು. ಹಗಲು ರಾತ್ರಿಗಳ ಪರಿವೆ ಇಲ್ಲದ ದುಡಿತ, ಅವರದು! ಎಲ್ಲೂ ಕಿಂಚಿತ್ ಕೊರತೆಗೆ ಆಸ್ಪದ ನೀಡಲಿಲ್ಲ. ಅತಿಥಿ, ಅಭ್ಯಾಗತರ ತಂಡ ಮೊದಲಿನಂತೆಯೇ ಬಂದು ಹೋಗತೊಡಗಿತ್ತು. ತವರಿನ ನೆಂಟಸ್ತನದೊಂದಿಗೆ ಬಂದ ಹೆಣ್ಣು ಮಕ್ಕಳನ್ನು ಅಪ್ಪ ಹೇಗೆ ಭಾವಿಸಿ, ಸೀರೆ–ವಸ್ತ್ರಗಳನ್ನು ಉಡಿಸಿ ಕಳಿಸುತ್ತಿದ್ದರೋ, ಅಜ್ಜ ಅವರನ್ನು ಹಾಗೆಯೇ ಕಳಿಸಿಕೊಡುವರು. ಪಾಠಶಾಲೆ, ಆಸ್ಪತ್ರೆಗಳ ಚಂದಾ ಹಣ ಕೂಡ ಮೊದಲಿನಂತೆಯೇ ಪಾವತಿಯಾಗುವುದು.

ಸುಮಾರು, ವರ್ಷ ಮುಗಿಯಿತೆನ್ನುವಷ್ಟರಲ್ಲಿ ಅಣ್ಣನ ರಿಸಲ್ಟ್ ಬಂದಾಗ ಅಜ್ಜನ ಕಣ್ಣುಗಳು ಹರ್ಷದಿಂದ ಹನಿಗೂಡಿದುವು.

ಇಡೀ ಕಾಲೇಜಿಗೆ ಮೊದಲ ಸ್ಥಾನ ಅವರದಾಗಿತ್ತು. ವಿದ್ಯಾರ್ಥಿ ವೇತನವೂ ದೊರೆಯತೊಡಗಿತ್ತು.

ನಾನು ಸ್ಕೂಲಿಗೆ ಹೋಗುತ್ತಿದ್ದೆ. ಮನೆ, ಅಂಗಡಿ, ಹೊಲದ ಕೆಲಸಗಳನ್ನೂ ನೋಡುತ್ತಿದ್ದೆ, ಬಿಡುವಿನ ವೇಳೆಯಲ್ಲಿ ಓದು. ಹೀಗೆ ಒಂದೊಂದೆ ಮೆಟ್ಟಿಲುಗಳನ್ನು ಹತ್ತುತ್ತ ಮುಂದೆ ನಡೆದೆ. ಒಂದೇ ಒಂದು ಪೈಸೆಯನ್ನೂ ಎಂದೂ ವ್ಯಥಾ ಖರ್ಚು ಮಾಡಿದ್ದನ್ನು ಇದುವರೆವಿಗೂ ಯಾರೂ ನೋಡಿರಲಿಕ್ಕಿಲ್ಲ.

'ಬಿದಿರಿನ ಮೂಸೆಯಲ್ಲಿ ಬಿದಿರು ತಾನೆ ಒಡೆಯುವುದು...ನರೇಂದ್ರ ತೀರಿ ಹೋದರೆ ಏನಾಯಿತು ? ಈ ಎರಡು ಮಕ್ಕಳು ಬುದ್ಧಿವಂತರಾಗಿ ಮುಂದೆ ಬಂದರೆ ನನ್ನ ಇಡೀ ಜೀವನದ ತಪಸ್ಸು ಸಿದ್ಧಿಸಿದಂತೆಯೆ ಸರಿ,'–ಅಜ್ಜ ಆಗಾಗ ಅಂದುಕೊಳ್ಳುತ್ತಿದ್ದರು.

ಅಕ್ಕಪಕ್ಕದ ಜನ ತೋಟ ಬೆಳೆಸುವುದರಲ್ಲಿ ತೊಡಗಿದ್ದರು. ಅಜ್ಜ ಕೂಡ ಗಿಡಗಳನ್ನು ನೆಡುವ ಸಲುವಾಗಿ ಹೊಲದಲ್ಲೆಲ್ಲ ಗುಂಡಿಗಳನ್ನು ಹೊಡೆಸಿದ್ದರು. ಅಂಗಡಿಗಳನ್ನು ರಿಪೇರಿ ಮಾಡಿಸಿಯಾಗಿತ್ತು. ಗೋಶಾಲೆಯ ಮುಂಭಾಗದಲ್ಲಿ ವಿಶಾಲವಾದ ಅಂಗಳವನ್ನು ಕಟ್ಟಿಸಿದ್ದರು.

ಅಣ್ಣ ಆಗೊಂದು ಸಲ ರಜದಲ್ಲಿ ಊರಿಗೆ ಬಂದಿದ್ದರು. ಪ್ರಾಯಶ: ಆ ಸಾರಿ ಅಜ್ಜ ಸೇಬು ಹಾಗೂ ಮರಸೇಬಿನ ಗಿಡಗಳನ್ನು ಹಾಕಿದ್ದಿರಬಹುದು. 'ಸರಿ, ಇವು ಫಸಲಿಗೆ ಬರುವ ಹೊತ್ತಿಗೆ ನಾನು ಬದುಕಿರುವೇನೋ, ಇಲ್ಲವೋ... ಮಕ್ಕಳು, ಮರಿ ತಿಂದುಕೊಳ್ಳುತ್ತಾರೆ! ನಮ್ಮ ನರೇಂದ್ರನಿಗೆ ಹಣ್ಣುಗಳೆಂದರೆ ಬಹಳ ಇಷ್ಟವಾಗಿತ್ತು. ಅಂಗಳದಲ್ಲಿ ಬೆಳೆದಿರುವ ಆ ಮಾವಿನ ಗಿಡವನ್ನು ಅವನೇ ಚೌಬಟಿಯಿಂದ ತಂದು ನೆಟ್ಟಿದ್ದ..." ಅಜ್ಜ ಆಗಾಗ ಅಂದುಕೊಳ್ಳುತ್ತಿದ್ದರು.

ಹಂತ ಹಂತವಾಗಿ ಗಿಡಗಳು ಬೆಳೆಯತೊಡಗಿದುವು. ಮೊಗ್ಗಿಟ್ಟು, ಹೂವಿಟ್ಟು ಫಸಲಿಗೆ ಬಂದುವು. ಈ ಮಧ್ಯೆ ಏನೆಲ್ಲ ನಡೆದು ಹೋಗಿಲ್ಲ!

ಅಣ್ಣ ಹೋಗಿ ಮಿಲಿಟರಿ ಸೇರಿಕೊಂಡರು. ಉನ್ನತ ಹುದ್ದೆಯೇ ದೊರಕಿತ್ತು, ನಾನು



ದಿಲ್ಲಿಯಲ್ಲಿ ನೌಕರಿ ಮಾಡತೊಡಗಿದೆ. ಅಜ್ಜ ಕೊಡ ತೀರಿಕೊಂಡು ಸಾಕಷ್ಟು ವರ್ಷಗಳೇ ಕಳೆದುವು. ಅಮ್ಮ ಮಾತ್ರ ಮನೆಯಲ್ಲಿ ಒಬ್ಬಂಟಿಯಾಗಿ ಉಳಿದು ಬಿಟ್ಟಿದ್ದರು.

ಕಳೆದ ಸಲ ಬಂದಿದ್ದಾಗ ಧೂಳು, ಹೊಗೆಯಿಂದ ತುಂಬಿದ್ದ ಅಜ್ಜನ ಪಟವನ್ನು ಒಪ್ಪ ಮಾಡಿ ದೇವರ ಪಟಗಳ ಸಾಲಿನಲ್ಲಿ ಇರಿಸಿದ್ದೆ.

'ನೀನು ಒಂಟಿಯಾಗಿ ಹೇಗಿರುತ್ತೀಯೆ ?' ಎಂದು ಅಮ್ಮನನ್ನು ಕೇಳಿದಾಗ ಆಕೆ ಹೇಳಿದ್ದರು, 'ಮತ್ತೆಲ್ಲಿಗೆ ಹೋಗುವುದು ? ತಪನನಿಗಾದರು ನಿಶ್ಚಯವಾದ ನೆಲೆಯಲ್ಲಿ. ಇಂದು ಇಲ್ಲಿದ್ದರೆ ನಾಳೆ ಮತ್ತೆಲ್ಲೊ ? ನೀನೂ ಮದುವೆ ಮಾಡಿಕೊಳ್ಳಲಾರೆ. ನನಗೆ ಈ ಬೆಟ್ಟ ಗುಡ್ಡಗಳ ಜಾಗವೇ ಒಗ್ಗಿಬಿಟ್ಟಿದೆ. ಉಳಿದಿರುವ ಈ ಕೆಲವು ದಿನಗಳನ್ನು ಕಳೆದು ಬಿಟ್ಟರೆ ಅಲ್ಲಿಗೆ ಜೀವನವೂ ಸಾಕೆನಿಸಬಹುದು.'

'ಅಮ್ಮ, ಚೆನ್ನಾಗಿ ನಿನ್ನ ಸೇವೆ ಮಾಡಬಲ್ಲ ಸೊಸೆಯೊಬ್ಬಳನ್ನು ಪತ್ತೆ ಹಚ್ಚು, ಮುಂದಿನ ಸಾರಿ ಊರಿಗೆ ಬಂದಾಗ ನಿನ್ನನ್ನು ಏನೇ ಆದರೂ ನಿರಾಶೆಗೊಳಿಸುವುದಿಲ್ಲ, ಅಣ್ಣನಿಗೂ ಆಗ ರಜ ಬಂದಿರುತ್ತೆ.'

ಹೀಗೆ ಹೇಳಿ ನಾನು ಹಿಂತಿರುಗಿದ್ದೆ.

ಅಣ್ಣ ಮಿಲಿಟರಿಯಲ್ಲಿ ಕೆಲಸ ಮಾಡಿಕೊಂಡಿದ್ದು ತನ್ನೊಬ್ಬ ಹಿರಿಯ ಅಧಿಕಾರಿಯ ಮಗಳೊಂದಿಗೆ ಮದುವೆಯಾಗಿಬಿಟ್ಟಿದ್ದರು. ಅತ್ತಿಗೆ ಕೇರಳದವರು, ಗುಡ್ಡಗಾಡಿನ ಜೀವನ ಹೇಗಿರುತ್ತೆನ್ನುವ ಬಗ್ಗೆ ಅವರಿಗೆ ಏನೇನೂ ತಿಳಿಯದು. ಅಮ್ಮ ಕೆಲವಾರು ವರ್ಷ ಅವರೊಂದಿಗೆ ಇರಬಯಸಿ ಹೋಗಿದ್ದವರು ಕೆಲವೇ ದಿನಗಳಲ್ಲಿ ಹಿಂತಿರುಗಿ ಬಂದುಬಿಟ್ಟಿದ್ದರು. ಅಲ್ಲಿಯ ಜೀವನ ಅವರಿಗೆ ಒಂದಿಷ್ಟೂ ಒಗ್ಗಿ ಬಂದಿರಲಿಲ್ಲ.

'ನಿನಗೊಂದು ಹುಡುಗಿಯನ್ನು ಗೊತ್ತು ಮಾಡಿದ್ದೇನೆ. ತಪನನಿಗೂ ಪತ್ರ ಕಳಿಸಿದ್ದೇನೆ. ಅವನೂ ಬರುವವನಿದ್ದಾನೆ. ಚೈತ್ರದಲ್ಲಿ ಮದುವೆಯಾಗಲಿದೆ...'

—ನಾನು ದಿಲ್ಲಿ ತಲುಪಿದ ಕೆಲ ತಿಂಗಳುಗಳಲ್ಲಿಯೇ ಅಮ್ಮ ಬರೆಸಿಹಾಕಿದ್ದ ಪತ್ರ ಬಂದು ಮುಟ್ಟಿತ್ತು.

ಚೈತ್ರಕ್ಕೆ ಮೊದಲೆ ದೇಶದ ಸ್ಥಿತಿ ಕಳವಳಕಾರಿಯಾಗತೊಡಗಿತ್ತು. ಪಾಕಿಸ್ತಾನದೊಂದಿಗೆ ಯುದ್ಧ ಪ್ರಾರಂಭವಾಗಿಬಿಟ್ಟಿತ್ತು. ಅಣ್ಣ ಆ ದಿನಗಳಲ್ಲಿ ಬಾಂಗ್ಲಾ ದೇಶದ ತುಕಡಿಯಲ್ಲಿದ್ದರು— ಜೆಸ್ಸೂರಿನ ಬಳಿಯಲ್ಲೆಲ್ಲೊ...

ಯುದ್ಧಕ್ಕೆ ಹೋಗುವ ಮುಂಚೆ ಅಣ್ಣ ನನ್ನಲ್ಲಿಗೆ ಬಂದಿದ್ದರು. ಒಂದು ದಿನದ ಮಟ್ಟಿಗೆ ನನ್ನೊಂದಿಗೆ ಉಳಿದರು. ಅಂದು ಇಡೀ ರಾತ್ರಿ ಅವರು ಮಲಗಲಿಲ್ಲ. ಮನೆಯ, ಹೊರಗಿನ ಹೀಗೆ ಏನೆಲ್ಲ ವಿಚಾರಗಳನ್ನು ಮಾತನಾಡುತ್ತಿದ್ದರು. ನನಗೆ ಹೊಸ ಬಟ್ಟೆ ಖರೀದಿಸಿದರು. ತಮ್ಮ ಕೈಯ್ಯಲ್ಲಿದ್ದ ಬೆಲೆ ಬಾಳುವ ಗಡಿಯಾರವನ್ನು ಕಳಚಿ ಕೊಟ್ಟರು.

ಅತ್ತಿಗೆ-ಮಕ್ಕಳನ್ನು ಬೇಕೆಂದೇ ಭೆಟ್ಟಿಯಾಗಲಿಲ್ಲ. 'ಇದರಿಂದ ಮನಸ್ಸು ಹಿಡಿತ ತಪ್ಪುತ್ತದೆ. ಏನಾಗುವುದೋ ಆಗುತ್ತದೆ, ಇರಲಿ' ಎಂದಷ್ಟೆ ಹೇಳಿದ್ದರು.

ತ್ರಿವೆಂದ್ರಂನಿಂದ ಅತ್ತಿಗೆ ಇಲ್ಲಿಗೆ ಬರುವ ವೇಳೆಗಾಗಲೆ ಅವರು ಕಲ್ಕತ್ತೆಗೆ ಪ್ರಯಾಣ ಬೆಳೆಸಿಬಿಟ್ಟಿದ್ದರು.

ಅವರನ್ನು ಬೀಳ್ಕೊಡುವ ಸಲುವಾಗಿ ರೇಲ್ವೆ ಸ್ಟೇಷನ್‌ತನಕ ಹೋದಾಗ ಬಹಳ ಹೊತ್ತಿನ ತನಕ ಅವರು ನನ್ನ ಕೈಯನ್ನು ಹಿಡಿದೇ ಇದ್ದರು.

'ಜಿತ್ತು, ನಿನ್ನದು ಬಹಳ ಪುಕ್ಕಲು ಮನಸ್ಸು. ಧೈರ್ಯ ತಂದುಕೋ. ಈ ಸಾರಿ ಹಿಂತಿರುಗಿದೊಡನೆ ಹೆಚ್ಚು ದಿನಗಳ ರಜ ಪಡೆಯುವೆ. ಒಂದೆರಡು ತಿಂಗಳು ಊರಿನಲ್ಲಿ ಹಾಯಾಗಿರುವೆ... ಬಂಗಲೆಯಂಥಹ ಹೊಸ ಮನೆಯೊಂದನ್ನು ಕಟ್ಟಿಸೋಣ...'

ಟ್ರೈನ್ ಹೊರಟಾಗ ಅಣ್ಣನ ಮುಖದಲ್ಲಿ ಅಚ್ಚರಿ ತುಳುಕಿತ್ತು.

ಬರುತ್ತಿದ್ದ ಸುದ್ದಿಗಳು ಯುದ್ಧದ ಭೀಕರತೆಯನ್ನು ಸೂಚಿಸುತ್ತಿದ್ದುವು. ಭಾರತೀಯ ಸೈನ್ಯ ಮುಕ್ತಿವಾಹಿನಿ ಸೈನ್ಯದೊಂದಿಗೆ ಒಂದೇ ಸಮ ಮುಂದುವರೆಯುತ್ತಲಿತ್ತು.

ಆದರೆ ನಿದ್ರೆ ನನ್ನಿಂದ ದೂರ, ಬಹುದೂರ ಸರಿದು ಹೋಗಿ ಬಿಟ್ಟಿತ್ತು.

ಆಗಲೇ ಒಂದು ರಾತ್ರಿ ತಂತಿ ಬಂದಿತು. ತಂತಿಯಲ್ಲಿ ಹೀಗಿತ್ತು: 'ಜೆಸ್ಸೂರಿನ ಬಳಿಯ ತುಕಡಿಯಲ್ಲಿದ್ದ ಮೇಜರ್ ತಪನ್‌ಕುಮಾರ್ ಶತ್ರುಗಳೊಂದಿಗೆ ಕಾದಾಡುತ್ತ ವೀರಗತಿಯನ್ನು ಪ್ರಾಪ್ತ ಮಾಡಿಕೊಂಡರು...!'

ಈ ವಜ್ರಾಘಾತದಂಥ ಸುದ್ದಿ ನಮಗೆಲ್ಲ ಅಸಹ್ಯವನ್ನು ತಂದೊಡ್ಡಿತ್ತು!

ಅಮ್ಮ ಹುಚ್ಚು ಹಿಡಿದವಳಂತೆ ಹಗಲು-ರಾತ್ರಿ ಅಳುತ್ತಿದ್ದಳು.

ನಾನು ಮನೆಗೆ ಬರುವಷ್ಟರಲ್ಲಿ ಅತ್ತಿಗೆ ಮಕ್ಕಳ ಸಹಿತ ಅಮ್ಮನೊಂದಿಗಿದ್ದರು.

'ತಪ್ಪಿ ಈ ಸಮಯಕ್ಕೆ ಊರಿಗೆ ಬರುವೆನೆಂದು ಬರೆದಿದ್ದ... ಚೈತ್ರಕ್ಕೆ ಮದುವೆ ನಿಶ್ಚಯವಾಗಿತ್ತು...!' ಅಮ್ಮ ಇಳುದನಿಯಲ್ಲಿ ಅಳತೊಡಗಿದರು.

'ನಿಮ್ಮ ಜೊತೆಗಿರಲು ಸೊಸೆಯೊಬ್ಬಳ ಅಗತ್ಯವಿತ್ತು. ಈಗ ಅತ್ತಿಗೆಯೇ ಬಂದರು. ಮಕ್ಕಳೆಲ್ಲ ಇನ್ನೂ ಸಣ್ಣವರು. ಅವರನ್ನೆಲ್ಲ ಸಾಕಿ ಬೆಳಸಬೇಕಾಗಿದೆ. ಅಣ್ಣ ಅಗಲಿ ಹೋದರೇನು, ನಾವಿದ್ದೇವೆ. ಇನ್ನು ಮದುವೆ-ಮುಹೂರ್ತಗಳ ಮಾತಿರಲಿ. ಒಂದೆರಡು ವರ್ಷಗಳ ಬಳಿಕ ಯೋಚನೆ ಮಾಡಿದರಾಯಿತು. ಅದೇನು ಎಲ್ಲಿಗೂ ಓಡಿ ಹೋಗುವುದಿಲ್ಲ?'

ಅಮ್ಮ ಬಾಯಿ ಕಟ್ಟಿದವರಂತೆ ಸುಮ್ಮನಾಗಿ ಬಿಟ್ಟರು. ಮನಸ್ಸಿನಲ್ಲಿ ರೂಪಿಸಿಕೊಂಡಿದ್ದ ಆ ತಮ್ಮ ಸುಂದರ ಸೊಸೆಯ ಬಗ್ಗೆ ಮತ್ತೆಂದೂ ಅವರು ಪ್ರಸ್ತಾಪಿಸಲೇ ಇಲ್ಲ...

ಬಿಸಿಲಿನ ರಝಳಕ್ಕೆ ಹೊಳೆಯುತ್ತಿರುವ ಹಸಿರು ಹಸಿರಾದ ತೋಟ ಎದುರಿಗೇ ಕಾಣುತ್ತಿದೆ ಕಾಣಿಸುತ್ತಿದೆ! ಅಜ್ಜ ನೀರೆರೆದು ಬೆಳೆಸಿದ ಆ ಮರ-ಗಿಡಗಳೀಗ ದೊಡ್ಡವಾಗಿವೆ. ಮೂರು, ನಾಲ್ಕು ವರ್ಷಗಳ ಹಿಂದೆ ಅಣ್ಣ ರಜದಲ್ಲಿ ಇಲ್ಲಿಗೆ ಬಂದಿದ್ದಾಗ ಹಾಕಿದ್ದ ಮರಗಳೂ ಕೂಡ ಹೆಚ್ಚು-ಕಡಿಮೆ ನನ್ನೆತ್ತರಕ್ಕೆ ಬೆಳೆದು ನಿಂತಿವೆ.

ಅಮ್ಮ ಶಿಶಿರದಲ್ಲಿ ತೋಡಿಸಿದ್ದ ಕೆಲವು ಗುಂಡಿಗಳು ದೂರದಲ್ಲಿ ಕಾಣಬರುತ್ತಿವೆ. ಅವುಗಳಲ್ಲಿ ಸಸಿ ನೆಡುವ ಸರದಿ ಈಗ ನನ್ನದು! ✡

## ಅಲ್ಲೀನಿಲಿಗಳ ಕಾಟವೆ ಕಾಟ!

ಮೆಕ್ಸಿಕೋ ನಗರದ ಜನಸಂಖ್ಯೆ ಒಂದು ಕೋಟಿ ಆದರೆ ಅಲ್ಲಿಯ ಇಲಿಗಳ ಸಂಖ್ಯೆ ಮೂರು ಕೋಟಿ. ಈ ಇಲಿಗಳು ಮೆಕ್ಸಿಕೊ ನಗರದ ಆರೋಗ್ಯ ಶಾಖೆಗೆ ವರ್ಷಂಪ್ರತಿ ಎಂಟು ಕೋಟಿ ಡಾಲರುಗಳಷ್ಟು ಹಾನಿ ಉಂಟು ಮಾಡುತ್ತಿವೆಯಂತೆ. ಅವು ಆಹಾರ ಧಾನ್ಯಗಳನ್ನು ಪೋಲು ಮಾಡುವುದರ ಜೊತೆಗೆ ವಿದ್ಯುತ್ತಂತಿಗಳನ್ನು ಕಡಿದು ವಿದ್ಯುತ್ ಪೂರೈಕೆಗೆ ತಡೆಯುಂಟು ಮಾಡುತ್ತವೆ, ಟೆಲಿಫೋನ ಉಪಕರಣಗಳನ್ನು ಹಾಳುಗೆಡವಿ ಸಂಪರ್ಕಕ್ಕೆ ವ್ಯತ್ಯಯ ಉಂಟು ಮಾಡುತ್ತಿವೆ. ಒಂದು ಜತೆ ಇಲಿಗಳು ವರ್ಷದಲ್ಲಿ ೧೫೦೦ ಇಲಿಗಳಿಗೆ ಜನ್ಮ ನೀಡುತ್ತವೆಂದು ತಿಳಿದಿದೆ. ಮೆಕ್ಸಿಕೋದ ನಾಗರಿಕರು ನಗರದ ಸ್ವಚ್ಛತೆ ಕಡೆಗಣಿಸಿ ಕಸ ಕೊಳೆಗಳನ್ನೆಲ್ಲ ಬೀದಿಗೆಸೆಯುತ್ತಿರುವುದು ಈ ಇಲಿಗಳಿಗೆ ಭಾರಿ ಔತಣವಾಗಿದೆ ಎಂಬುದು ಆರೋಗ್ಯಾಧಿಕಾರಿಗಳ ತಕರಾರು

# ಡಾಕ್ಟರರು ಹೇಳುತ್ತಾರೆ,
# ಮೂರು ತಿಂಗಳಿನ ನಂತರ ನಿಮ್ಮ ಮಗುವಿಗೆ ಬರೀ ಹಾಲು ಸಾಕಾಗುವುದಿಲ್ಲ.
# ಮಗುವಿನ ಸರ್ವಾಂಗೀಣ ಬೆಳವಣಿಗೆಗೆ ಘನ ಆಹಾರದ ಅವಶ್ಯಕತೆ ಇದೆ.
# ಫೆರೆಕ್ಸ್.




ವರ್ಧಿಸುತ್ತಿರುವ
ನಿಮ್ಮ ಮಗುವಿಗೆ
ಫೆರೆಕ್ಸ್ ಇವೆಲ್ಲವನ್ನು ಕೊಡುತ್ತದೆ:

- ಆರೋಗ್ಯಪೂರ್ಣ ರಕ್ತ ಮತ್ತು ಹೆಚ್ಚಿನ ಚಟುವಟಿಕೆಗಾಗಿ ಬೇಕಾಗುವ ಕಬ್ಬಿಣ.
- ಗಟ್ಟಿಯಾದ ಹಲ್ಲು, ಎಲುಬುಗಳಿಗಾಗಿ ಕ್ಯಾಲ್ಸಿಯಂ ಮತ್ತು ವಿಟಮಿನ್ ಡಿ2.
- ಶೀಘ್ರ ಬೆಳವಣಿಗೆಗಾಗಿ ಸುಲಭವಾಗಿ ಪಚನವಾಗುವ ಪ್ರೋಟೀನ್.
- ಮಗುವಿನ ವಯಸ್ಸು ಮತ್ತು ಬದಲಾಗುವ ಅವಶ್ಯಕತೆಗಳಿಗೆ ಅನುಗುಣವಾದ ಶಕ್ತಿ.

ನಿಮ್ಮ ಮಗುವಿನ ಬೆಳವಣಿಗೆಯೊಂದಿಗೆ
ಫೆರೆಕ್ಸ್‌ನ ಪ್ರಮಾಣ

| ಮಗುವಿನ ವಯಸ್ಸು | ಫೆರೆಕ್ಸ್‌ನ ಪ್ರಮಾಣ |
|---|---|
| 3–6 ತಿಂಗಳು | 1–2 ಚಹ ಚಮಚೆ ದಿನಾಲೂ ಎರಡು ಸಲ |
| 6–9 ತಿಂಗಳು | 3–4 ಚಹ ಚಮಚೆ ದಿನಾಲೂ ಮೂರು ಸಲ |
| 9 ತಿಂಗಳು–3 ವರ್ಷ | 4–6 ಚಹ ಚಮಚೆ ದಿನಾಲೂ ನಾಲ್ಕು ಸಲ |

## ಫೆರೆಕ್ಸ್

ನಿಮ್ಮ ಮಗುವಿನ ಸರ್ವಾಂಗೀಣ ಬೆಳವಣಿಗೆಗಾಗಿ
ಪ್ರಥಮ ಪೂರ್ಣ ಘನ ಆಹಾರ–ಮೂರು ತಿಂಗಳಾದಾಗ.

ಉಚಿತ! ಫೆರೆಕ್ಸ್ ಪುಸ್ತಿಕೆಗಾಗಿ.
ಡಿಪಾರ್ಟ್‌ಮೆಂಟ್ K-5 ಪೋಸ್ಟ್ ಬಾಕ್ಸ್
ನಂ. 16558, ಮುಂಬಯಿ 400 025 ಇವರಿಗೆ
25 ಪೈಸೆ ಸ್ಟಾಂಪಿನೊಂದಿಗೆ ಬರೆಯಿರಿ. ನಿಮ್ಮ
ಹೆಸರು ಮತ್ತು ವಿಳಾಸ ತಿಳಿಸಿ.
(ಭಾಷೆಯನ್ನು ನಮೂದಿಸಿ.)






ಗ್ಲಾಕ್ಸೋ

GF 47-77 - KN

ಜೆ. ಪಿ. ಬಸವರಾಜು

# ನೆಪೋಲಿಯನ್ ಕೊಲೆಯಾದನೇ ?!

ನೆಪೋಲಿಯನ್ ಬೋನಾಪಾರ್ಟನಂತೆ ಯಾವ ಚಾರಿತ್ರಿಕ ವ್ಯಕ್ತಿಯೂ ತನ್ನ ವೈಭವ ಹಾಗೂ ಸೊಬಗನ್ನು ಕಾಲಾನಂತರದಲ್ಲಿ ಉಳಿಸಿ ಕೊಳ್ಳುವುದಿಲ್ಲ.

ಅತಿವೇಗದಿಂದ ಅಧಿಕಾರಕ್ಕೇರಿದ ರೀತಿ, ನಿರ್ಭೀತ ಮನೋಭಾವ, ತೀಕ್ಷ್ಣಬುದ್ಧಿ, ಸೇನಾವ್ಯವಸ್ಥೆಯ ಕೌಶಲ ಮತ್ತು ತನ್ನೆಲ್ಲ ಇದಿರಾಳಿಗಳನ್ನು ಧೂಳಿಪಟ ಮಾಡುತ್ತಿದ್ದ ಕಾರಣಗಳಿಂದಾಗಿ ನೆಪೋಲಿಯನ್ ಚರಿತ್ರೆಯಲ್ಲಿ ತೊಡೆದುಹಾಕಲಾರದಂತಹ ಮುದ್ರೆಯನ್ನು ಒತ್ತಿ ಹೋಗಿದ್ದಾನಲ್ಲದೇ, ಯುರೋಪಿನ ಏಕಮೇವಾದ್ವಿತೀಯ ನಾಯಕನಾಗಿಯೂ ಉಳಿದಿದ್ದಾನೆ. ಅವನು ಬಿದ್ದಾಗ ಅದು ಅವನ ಅಧಃಪತನವಾಗಿತ್ತು. ಅವನು ಬಂಧಿತನಾಗಿ ಸೈಂಟ್ ಹೆಲೆನಾ ದ್ವೀಪಕ್ಕೆ ಒಯ್ಯಲ್ಪಟ್ಟ. ಅಲ್ಲಿ ಅವನು ಸಾಯುವವರೆಗೂ ಬಂಧನವನ್ನನುಭವಿಸಿದ.

ನೆಪೋಲಿಯನ್, ತನ್ನ ಜೀವನದ ಉದ್ದಕ್ಕೂ ಅನೇಕ ಯೂರೋಪಿಯನ್ ರಾಷ್ಟ್ರಗಳಿಗಾಗಿ ಸದಾ ಕಾತರಗೊಂಡಿದ್ದ. ಅವನು ಎಂದೂ ಅಧಿಕಾರಕ್ಕೆ ಹಿಂತಿರುಗದಂತೆ ಮತ್ತು ತನಗೆ ಸವಾಲು ಹಾಕಿ ನಿಲ್ಲದಂತೆ ನೋಡಿಕೊಳ್ಳಲು ಇಂಗ್ಲೆಂಡ್, ನೆಪೋಲಿಯನ್ನನನ್ನು ಬಂಧನದಲ್ಲಿರಿಸಲು ವಿಶೇಷ ಆಸಕ್ತಿಯಿಂದ ಶ್ರಮಿಸುತ್ತಿತ್ತು.

ನೆಪೋಲಿಯನ್ ಸೈಂಟ್ ಹೆಲೆನಾ ದ್ವೀಪದಲ್ಲಿ ಬಂಧನದಲ್ಲಿದ್ದಾಗ, ಆ ದ್ವೀಪದ ಗವರ್ನರ್ ಆಗಿದ್ದ ಹಡ್‌ಸನ್ ಲೊ ತನ್ನ ಆತ್ಮ ಚರಿತ್ರೆಯಲ್ಲಿ ಹೀಗೆ ಬರೆಯುತ್ತಾನೆ: "ಕೆಲವು ನಿರ್ದಿಷ್ಟ ಸನ್ನಿವೇಶಗಳಲ್ಲಿ ಬಂದಿಯನ್ನು ಕೊಲ್ಲು



ವಂತೆ ನನಗೆ ಸಲಹೆಗಳನ್ನು ನೀಡಲಾಗಿತ್ತು. ಆದರೆ ನಾನು ನೆಪೋಲಿಯನ್‌ನನ್ನು ಕೊಲ್ಲಲು ನಿರಾಕರಿಸಿದೆ."

ಹೆಲೆನಾ ದ್ವೀಪದಲ್ಲಿನ ತನ್ನ ಸುದೀರ್ಘ ಉಳಿವು, ತನ್ನ ಸಾವನ್ನು ತ್ವರಿತಗೊಳಿಸುತ್ತದೆ ಯೆಂಬ ಗುಪ್ತ ಅನುಮಾನ ನೆಪೋಲಿಯನ್ನನಿಗಿತ್ತು. ಸ್ವಾಭಾವಿಕ ಸಾವಿನ ಪರದೆಯ ಮರೆಯಲ್ಲಿ ತನ್ನನ್ನು ಕೊಲೆಮಾಡಲು ಬರುವಂತಿದ್ದರೆ ಬ್ರಿಟಿಷರು ಅದಕ್ಕೂ ಹೇಸುವವರಲ್ಲ ಎಂಬುದೂ ನೆಪೋಲಿಯನ್ನನಿಗೆ ತಿಳಿದಿತ್ತು, "ನನ್ನ ಸಾವು ಅಕಾಲಿಕ, ಬ್ರಿಟಿಷ್ ಸರಕಾರದಿಂದ ಮತ್ತು ಅದರ ಬಾಡಿಗೆಯ ಕೊಲೆಗಾರರಿಂದ ನಾನು ಮೋಸದಿಂದ ಕೊಲ್ಲಲ್ಪಟ್ಟಿದ್ದೇನೆ. ಆಂಗ್ಲರು ನನ್ನ ಮೇಲೆ ಇನ್ನು ಬಹುಕಾಲ ಸೇಡು ತೀರಿಸಿಕೊಳ್ಳಲಾರರು" ಎಂಬುದಾಗಿ ನೆಪೋಲಿಯನ್ ತನ್ನ ಮರಣ ಪತ್ರದಲ್ಲಿ ಬರೆದಿದ್ದಾನೆ.

ತರ್ಕಬದ್ಧ ಆಲೋಚನಾ ಶಕ್ತಿಯನ್ನು ಕಳೆದುಕೊಂಡು ಸಾಯುತ್ತಿರುವ ಮನುಷ್ಯನೊಬ್ಬನ ಅವಿವೇಕದ ಮಾತುಗಳೆಂದು ಹೇಳಿ ಈ ಆಪಾದನೆಯನ್ನು ಮರೆಮಾಚಲು ಪ್ರಯತ್ನಗಳು ನಡೆದವು. ಆದರೆ ಅಸಾಧಾರಣ ಮನೋದಾರ್ಢ್ಯ ಹಾಗೂ ಅಭಿವ್ಯಕ್ತಿಯ ಖಚಿತತೆಗಳನ್ನು ಅವನ ಮರಣ ಪತ್ರ ಬಿಂಬಿಸುತ್ತದೆಂಬುದನ್ನು ತಿಳಿದಾಗ, ಈ ವಾದ ಭದ್ರವಾಗಿ ನಿಲ್ಲುವುದಿಲ್ಲ.

ಆದ್ದರಿಂದ ಅವನ ಸುದೀರ್ಘ ಅನಾರೋಗ್ಯದ ವಿವರಣೆಯನ್ನು ಕೊಡುವುದು ಅಗತ್ಯವಾಗಿದೆಯಲ್ಲದೆ, ತಾನು ಮೋಸದಿಂದ ಕೊಲೆಮಾಡಲ್ಪಟ್ಟೆ ಎಂದು ಹೇಳಿಕೊಂಡಿರುವ ನೆಪೋಲಿಯನ್ನನ ಹೇಳಿಕೆಯಲ್ಲಿ ಸತ್ಯವೇನಾದರೂ ಇರಬಹುದೇ ಎಂದು ತೀರ್ಮಾನಿಸುವುದೂ ಅಷ್ಟೇ ಅಗತ್ಯವಾಗಿದೆ.

ನೆಪೋಲಿಯನ್‌ನನ್ನು ತುಂಬ ವ್ಯಥೆಗೀಡು ಮಾಡಿದ ಮತ್ತು ಸಾಯುವವರೆಗೂ ಅವನಲ್ಲಿ ಉಳಿದುಕೊಂಡಿದ್ದ ಈ ವ್ಯಾಧಿಯನ್ನು ಅವನನ್ನು ಉಪಚರಿಸಿದ ವೈದ್ಯರು ಗಮನಿಸಿದ್ದರಲ್ಲದೆ ಆ ಬಗೆಗೆ ಸಂಗ್ರಹವಾಗಿ ಬರೆದುಕೊಂಡೂ ಇದ್ದರು, ಅವನ ಪ್ರಥಮ ವೈದ್ಯ ಓಮಿಯರ್ ೧೮೧೭ ರ ಜುಲೈನಲ್ಲಿ ಹೀಗೆ ಹೇಳುತ್ತಾನೆ :

"ನೆಪೋಲಿಯನ್ ಚಕ್ರವರ್ತಿ ಹಲ್ಲು ನೋವಿದೆಯೆಂದು ಹೇಳುತ್ತಾನೆ. ವಸಡುಗಳ ಮತ್ತು ಬಾಯಿಯ ನಯಚರ್ಮದ ನೋವು ಇದೆ. ಹೊಟ್ಟೆಯ ಬಲಭಾಗದಲ್ಲೂ ಅವನಿಗೆ ಸ್ವಲ್ಪ ನೋವು ಇದೆ."

ಹೊಟ್ಟೆಯ ನೋವು ಕ್ರಮೇಣ ಕಡಿಮೆಯಾಯಿತೆಂದು ಓಮಿಯಾರ ಹೇಳುತ್ತಾನಲ್ಲದೆ ಹಳದಿ ಛಾಯೆಯ ಗುರುತೂ ನೆಪೋಲಿಯನ್ನನ ಚರ್ಮದ ಮೇಲಿದ್ದು, ಅವನು ಆಗಾಗ ಬಾಯಾರಿಕೆಯಿಂದಿರುತ್ತಿದ್ದ ಮತ್ತು ವಾಂತಿ ಮಾಡಿಕೊಳ್ಳಲು ಬಯಸುತ್ತಿದ್ದ ಎಂದೂ ತಿಳಿಸುತ್ತಾನೆ. ೧೮೧೮ ರಲ್ಲಿ ಓಮಿಯಾರ, ಚಕ್ರವರ್ತಿ ಯಕೃತ್ತಿನ ಸ್ವಾಭಾವಿಕ ಕ್ರಿಯೆಯ ಅವ್ಯವಸ್ಥೆಯಿಂದ ತುಂಬ ನರಳುತ್ತಿದ್ದನೆಂದು ಮನಗಂಡಿದ್ದಾನೆ.

ಅಧಿಕಾರಿಗಳಿಗೆ ರುಚಿಸದಂತಹ ವಿಷಯವೊಂದು ರೋಗನಿದಾನದಲ್ಲಿತ್ತು. ಓಮಿಯಾರ ಕೆಲಸದಿಂದ ತೆಗೆದುಹಾಕಲ್ಪಟ್ಟ.

ಓಮಿಯಾರ ಬಿಟ್ಟ ನಂತರ ನೆಪೋಲಿಯನ್‌ನನ್ನು ಸ್ವಲ್ಪ ಕಾಲ ನೋಡಿಕೊಂಡ ವೈದ್ಯ ಡಾ|| ಸ್ಟೋಕೋ, ಚಕ್ರವರ್ತಿಯ ಚರ್ಮದ ಮೇಲಿನ ಹಳದಿ ಗುರುತನ್ನು ಕಂಡುಕೊಂಡ, ಅವನನ್ನೂ ಕೆಲಸದಿಂದ ತೆಗೆದು ಹಾಕಲಾಯಿತು. ಅವನು ಸಹ, ಈ ವ್ಯಾಧಿಯನ್ನು ಬಹು ದಿನಗಳ ಕರುಳಿನ ಅವ್ಯವಸ್ಥೆ ಎಂದು ವಿಶ್ಲೇಷಿಸಿದ್ದಾನೆ. ಪ್ರಾಮಾಣಿಕವಾಗಿ, ನೆಪೋಲಿಯನ್ನನ ವೈದ್ಯನಾಗಿ ಅವನೂ ಮುಂದುವರಿಯಲಿಲ್ಲ.

೧೮೧೯ ರ ಸೆಪ್ಟೆಂಬರ್‌ನಿಂದ ಡಾ| ಆಂಟೋಮಾರ್ಕಿ ನೆಪೋಲಿಯನ್ ಚಕ್ರವರ್ತಿಯ ವೈದ್ಯನಾದ. ಅವನು ಹೀಗೆ ವರದಿ ಮಾಡುತ್ತಾನೆ: "ಚಕ್ರವರ್ತಿಯ ಶ್ರವಣಶಕ್ತಿ ಕುಗ್ಗಿದೆ. ಅವನ ಮುಖ ಬೂದಿಯಂತೆ ಬಿಳಿಚಿಕೊಂಡಿದೆ. ಕಣ್ಣುಗಳು ನೀಲಿಗಟ್ಟಿವೆ. ಕಣ್ಣುರೆಪ್ಪೆಯ ಒಳಚರ್ಮ ಹಳದಿಯಿಂದ ಕೂಡಿದ

ಕೆಂಬಣ್ಣವಾಗಿದೆ. ಸಂಪೂರ್ಣ ಶರೀರ ಅತಿ ಹೆಚ್ಚು ಸ್ಥೂಲಗೊಂಡಿದೆ. ನಾಲಗೆ ತೆಳ್ಳನೆಯ ಬಿಳಿ ಲೇಪದಿಂದ ಮುಚ್ಚಿದೆ...... ಹೊಟ್ಟೆಯ ಕೆಳಭಾಗ ಮುಟ್ಟಲು ಬಹು ಗಟ್ಟಿಯಾಗಿದೆ... ಚರ್ಮ ಹಳದಿಯಾಗಿದೆ. ನಾಡಿ ಬಡಿತ ಕುಗ್ಗಿದೆ, ಅಸಾಧ್ಯ ಹಸಿವು, ಅಜೀಯ ಜಡತೆ."

ನೆಪೋಲಿಯನ್ನನನ್ನು ನೋಡಿಕೊಂಡ ಎಲ್ಲ ವೈದ್ಯರೂ ಅವನ ಚರ್ಮದ ಮೇಲಿನ ಹಳದಿಯ ಗುರುತಿನಿಂದ ಗಾಢ ಪರಿಣಾಮ ಹೊಂದಿದವರೆ. ಅವರೆಲ್ಲರೂ ಈ ತೊಂದರೆಯನ್ನು ಯಕೃತ್ತಿನ ಊತವೆಂದು ಕರೆದಿದ್ದಾರೆ. ಈ ರೋಗಕ್ಕೆ ಜವಾಬ್ದಾರಿಯಾಗುವಂತಹ ಮತ್ತೊಂದು ಸರಳ ಕಾರಣವೂ ಇದೆ. ರೋಗದ ಎಲ್ಲಾ ಲಕ್ಷಣಗಳೂ ಆರ್ಸೆನಿಕ್ ವಿಷವನ್ನೇ ಸೂಚಿಸುತ್ತವೆ. ಮುಂದೆ ಇದು ಸರ್ಜನ್ ಹೆನ್ರಿ ಅವರ ವರದಿಯಿಂದ ದೃಢವಾಯಿತು. ಚಕ್ರವರ್ತಿಯ ಶವ ಪರೀಕ್ಷೆಯ ಸಂದರ್ಭದಲ್ಲಿ ಡಾ. ಹೆನ್ರಿ ಹಾಜರಿದ್ದರು.

ಶರೀರದ ಮೇಲೆ ವಿರಳವಾಗಿ ಕೂದಲಿತ್ತೆಂದು ಅವರು ಹೇಳುತ್ತಾರೆ. ಶರೀರದ ಕೂದಲಿನ ಒಟ್ಟು ಹಾನಿ ಆರ್ಸೆನಿಕ್ ವಿಷವನ್ನು ಸಿದ್ಧಪಡಿಸಿ ತೋರಿಸುತ್ತದೆಂದು ಹೇಳುವುದು ತೀರಾ ಸಮಂಜಸವಾಗುತ್ತದೆ. ನೆಪೋಲಿಯನ್‌ನ ಶರೀರದ ಮೇಲೆ ಕೂದಲಿರಲಿಲ್ಲವೆಂದು ನೆಪೋಲಿಯನ್ನನ ಅಂಗಸೇವಕ ಮರ್ಕೆಂಡ್ ಹೇಳುತ್ತಾನೆ.

ನೆಪೋಲಿಯನ್ನನ ಶರೀರಕ್ಕೆ ಏನನ್ನಾದರೂ ಸೇರಿಸಲಾಗಿತ್ತೆ ಎಂಬುದನ್ನು ಖಚಿತಪಡಿಸಿಕೊಳ್ಳಲು, ಹೂಳಿದ ಹತ್ತೊಂಭತ್ತು ವರ್ಷಗಳ ನಂತರ ಅವನ ಮೃತದೇಹವನ್ನು ಹೊರತೆಗೆದಾಗ ಡಾ. ಗಲ್ಲರ್ಡ್ ಹೀಗೆ ವರದಿ ಮಾಡುತ್ತಾನೆ: "ಬಿಳಿಯ ಬಣ್ಣ ಹಾಗೂ ಮೃದುತ್ವಗಳಿಂದಾಗಿ ಕೆನ್ನೆಯ ಚರ್ಮವು ಗಮನ ಸೆಳೆಯುವಹಾಗಿತ್ತು. ಕೈಗಳು ಯಾವ ಲೋಪದೋಷಗಳೂ ಇಲ್ಲದೆ ಸರಿಯಾದ ಸ್ಥಿತಿಯಲ್ಲಿದ್ದುವು...ಚರ್ಮವು ಜೀವಂತ ಮಾಂಸದ ಬಣ್ಣವನ್ನು ಒಡಿದುಕೊಳ್ಳುವಂತೆ ಕಾಣುತ್ತಿತ್ತು. ದೇಹವನ್ನು ಕಾಯ್ದಿರಿಸಿದ ಸ್ಥಿತಿ ನಾನು ಊಹಿಸಿದ್ದಕ್ಕಿಂತಲೂ ಹೆಚ್ಚು ಅನ್ಯೂನವಾಗಿತ್ತೆಂಬುದನ್ನು ಪ್ರದರ್ಶಿಸಲು ಈ ಎಲ್ಲವೂ ಸಾಕಾಗುತ್ತವೆ."

ದೇಹದ ಈ ಅಸಾಧಾರಣ ಸ್ಥಿತಿಗೆ ಒಂದು ನ್ಯಾಯ ಸಮ್ಮತ ಎಂದು ತೋರುವ ವಿವರಣೆಯೂ ಇದೆ. ಬಹು ಕಾಲದವರೆಗೆ ದೇಹದ ಸ್ವಾಭಾವಿಕ ಚಹರೆಯನ್ನು ಕಾಯ್ದಿರಿಸುವ ಶಕ್ತಿಯು ಆರ್ಸೆನಿಕ್ಕಿಗಿದೆ.

ಹಿಂದೆ, ಆರ್ಸೆನಿಕ್‌ನ ಇರುವನ್ನು ಪರಿಕ್ಷಿಸಲು ನೆಪೋಲಿಯನ್‌ನ ಕೂದಲಿನ ಒಂದು ವಿಶೇಷ ಅಧ್ಯಯನವು ನಡೆಯಿತು. ಮನುಷ್ಯನ ದೇಹ ಆರ್ಸೆನಿಕ್‌ನ್ನು ಸುಲಭವಾಗಿ ಸ್ವೀಕರಿಸುವದಿಲ್ಲ. ಮತ್ತು ದೇಹದೊಳಗಿನ ಅಂಗಗಳು ಆರ್ಸೆನಿಕ್‌ನ್ನು ಕೂದಲಿನ ಮೂಲಗಳ ಕೋಶಗಳಲ್ಲಿ ಸಂಗ್ರಹಿಸುವುದರಿಂದ ಅದನ್ನು ತೆಗೆದುಹಾಕಲು ಯತ್ನಿಸುತ್ತವೆ. ನೆಪೋಲಿಯನ್ನನ ಕೇಶಗಳ ವಿಶ್ಲೇಷಣೆಯು, ಒಂದು ಗ್ರಾಂ ಕೂದಲಿನಲ್ಲಿ ೧೦.೩೮ ಮೈಕ್ರೋಗ್ರಾಂ ಆರ್ಸೆನಿಕ್ ಇತ್ತೆಂದು ತೋರಿಸುತ್ತದೆ. ಇದು ಸಾಮಾನ್ಯವಾಗಿ, ಮನುಷ್ಯನ ಕೂದಲಿನಲ್ಲಿ ಕಂಡುಬರುವುದಕ್ಕಿಂತ ಹದಿಮೂರು ಪಟ್ಟು ಹೆಚ್ಚಿನದು.

ನೆಪೋಲಿಯನ್ ಏಕ ಪ್ರಕಾರವಾಗಿ ಆರ್ಸೆನಿಕ್ ವಿಷಪ್ರಯೋಗಕ್ಕೆ ಈಡಾಗಿದ್ದನೆಂಬುದಕ್ಕೆ ಇದು ಪ್ರತಿ ಹೇಳದ ಸಾಕ್ಷ್ಯವಾಗಿದೆ.

ಆರ್ಸೆನಿಕ್ ನಿರಂತರವಾಗಿ ಅವನ ಸ್ವಾಸ್ಥ್ಯವನ್ನು ಒಳಗೊಳಗೇ ಕುಗ್ಗಿಸುತ್ತಿದ್ದಾಗ ಅವನು ದುರ್ಬಲ ಹಾಗೂ ವಿಷಣ್ಣನಾಗಿದ್ದ. ಅವನ ಚೈತನ್ಯ ಉಡುಗುತ್ತಿತ್ತು. ಹೀಗಾಗಿ ಸಾವಿನ ಪೆಟ್ಟನ್ನು ಈ ಸಂದರ್ಭದಲ್ಲಿ ಕೊಟ್ಟದ್ದು ಆರ್ಸೆನಿಕ್ ಆಗಿರಲಿಲ್ಲ. ೧೮೨೧ ನೇ ಏಪ್ರಿಲ್ ೨೫ ರಂದು ನೆಪೋಲಿಯನ್ನನ ಸ್ಥಿತಿ ತೀರ ಹದಗೆಟ್ಟಿತು. ವೈದ್ಯರ ತಂಡವೊಂದು ಅವನನ್ನು ಮೇ ೩ ರಂದು ಪರೀಕ್ಷಿಸಿ, ಶಮನಕಾರಕ ಔಷಧಿಯನ್ನು ಕೊಡುವುದು ಮತ್ತು ಅವನ ಹೊಂಕವನ್ನು ಪರಿಮಳ ದ್ರವ್ಯದಿಂದ ತೊಳೆಯುವುದು ಅನಿವಾರ್ಯ ಎಂದು ಸೂಚಿಸಿದರು.

ಈ ರೀತಿ ಸೂಚಿಸಿದ ಶಮನಕಾರಕ ಔಷಧ ಯಾವ ತೊಂದರೆಯನ್ನೂ ಉಂಟುಮಾಡದ ರಸಕರ್ಪೂರವಾಗಿತ್ತು. ಆದಾಗ್ಯೂ ಉಪ್ಪು, ಆಮ್ಲಗಳು ಅಥವಾ ಕ್ಷಾರಗಳು, ಅಥವಾ ಬಾದಾಮಿ ಹಾಲುಗಳಂತೆ ಇದನ್ನು ಒಂದೇ ಕಾಲದಲ್ಲಿ ತೆಗೆದುಕೊಂಡರೆ ಇದು ಅಪಾಯದ ವಿಷವಾಗುತ್ತದೆ. ಅಂಥ ಸಂದರ್ಭಗಳಲ್ಲಿ ರಸಕರ್ಪೂರ ಪಾದರಸದ ಸೈನೈಡ್ ಆಗಿ ಮಾರ್ಪಾಟು ಹೊಂದುತ್ತದೆ.

ನೆಪೋಲಿಯನ್ ಈ ಶಮನಕಾರಕ ಔಷಧಿಯನ್ನು ತೆಗೆದುಕೊಳ್ಳಲು ನಿರಾಕರಿಸಿದ. ಹಾಗೂ ಅದನ್ನು ತನಗೆ ಕೊಡಲೇಬಾರದೆಂದೂ ಆಜ್ಞಾಪಿಸಿದ. ಆದರೂ ರಸಕರ್ಪೂರವನ್ನು ಅವನಿಗೆ ಕೊಡಲಾಯಿತು. ಅದೇ ವೇಳೆಯಲ್ಲಿ ಕಿತ್ತಳೆ ಹೂವಿನ ನೀರನ್ನು ಚಕ್ರವರ್ತಿ ಪಾನೀಯವಾಗಿ ತೆಗೆದುಕೊಂಡ; ಈ ಪಾನೀಯವನ್ನು ತೆಗೆದುಕೊಳ್ಳಲು ಚಕ್ರವರ್ತಿಗೆ ಸೂಚಿಸಿದವರಾರು ಎಂಬುದು ತಿಳಿಯದು. ಆದರೆ ಎಲ್ಲೆಡೆಗೆ ಹರಡಿದ ಗುಮಾನಿ ಒಂದು ಕಾಕತಾಳೀಯ ನ್ಯಾಯ.

ಕಿತ್ತಳೆ ಹೂವಿನ ನೀರು ಬಹುಪಾಲು ಬಾದಾಮಿ ಚೂರುಗಳಿಂದ ತಯಾರಿಸಿದ ಪಾನೀಯದ ರುಚಿಯನ್ನೇ ಪಡೆದಿರುತ್ತದೆ. ಕಿತ್ತಳೆ ಹೂವಿನ ನೀರನ್ನು ತೆಗೆದುಕೊಳ್ಳಬೇಕಾಗಿದ್ದ ನೆಪೋಲಿಯನ್ ಬಾದಾಮಿ ಪಾನೀಯ ತೆಗೆದುಕೊಂಡಿದ್ದ. ಈ ಸಮಯದಲ್ಲೇ ರೋಗಿಗೆ ರಸಕರ್ಪೂರವನ್ನೂ ಕೊಡಲಾಯಿತು. ಪರಿಣಾಮ ಶೀಘ್ರವಾಗಿತ್ತು. ರಸಕರ್ಪೂರ ಪಾದರಸದ ಸೈನೈಡ್ ಆಗಿ ಬದಲಾವಣೆ ಹೊಂದಿತ್ತು. ನೆಪೋಲಿಯನ್ ರಕ್ತಸ್ರಾವಕ್ಕೊಳಗಾದ. ೧೮೨೧ ರ ಮೇ ೫ ರಂದು ಕೊನೆಯುಸಿರೆಳೆದ.

ನೆಪೋಲಿಯನ್ನನ ವೈದ್ಯರು ಹಾಗೂ ಸೇವಕರ ಟಿಪ್ಪಣಿ ಮತ್ತು ವರದಿಗಳ ಮೂಲಕವಾಗಿ ನಮಗೆ ದೊರೆತ ಈ ಎಲ್ಲ ವಾಸ್ತವಾಂಶಗಳಿಂದ ಅವನು ಆರ್ಸೆನಿಕ್‌ನಿಂದ ನಿರಂತರ ಕುಗ್ಗಿಹೋದ ಎಂಬುದು ವ್ಯಕ್ತವಾಗುತ್ತದೆಯಲ್ಲದೆ, ಅಂತಿಮ ಪೆಟ್ಟುಬಿದ್ದದ್ದು ಶಮನ

## ಜಲಾಂತರ್ಗಾಮಿ ಎಷ್ಟು ಪ್ರಾಚೀನ?

ಸಾಹಸಪ್ರಿಯ ಮಾನವ ಆಳವಾದ ನೀರಿನಲ್ಲಿ ಸಂಚರಿಸುವ ಮಹತ್ವಾಕಾಂಕ್ಷೆ ಹೊಂದಿದ್ದು ೧೫೭೮ ರಷ್ಟು ಹಿಂದೆಯೇ. ವಿಲಿಯಂ ಬೋರ್ನ್ ಎಂಬ ಬ್ರಿಟಿಶ ಗಣಿತಜ್ಞನು ಕಟ್ಟಿಗೆಯಿಂದ ತಯಾರಿಸಿದ, ಚರ್ಮದ ಹೊದಿಕೆಯಿದ್ದಂಥ ನಾವೆಯನ್ನು ನೀರೊಳಗೆ ಮುಳುಗಿಸಿ ಒಳಗಿಂದೊಳಗೆ ಹುಟ್ಟು ಹಾಕಿ ಸಂಚರಿಸುವ ಜಲಾಂತರ್ಗಾಮಿ ನಾವೆಯ ನಕ್ಷೆಯೊಂದನ್ನು ಕ್ರಿ. ಶ. ೧೫೭೮ ರಷ್ಟು ಹಿಂದೆಯೇ ತನ್ನದೊಂದು ಗ್ರಂಥದಲ್ಲಿ ಪ್ರಕಟಿಸಿದ್ದ. ಆದರೆ ಆತ ಆ ನಾವೆಯನ್ನು ತಯಾರಿಸಲಿಲ್ಲ.

ಇಂತಹ ಪ್ರಥಮ ಜಲಾಂತರ್ಗಾಮಿಯನ್ನು ಕಾರ್ನಿಲಿಯಸ್ ವಾನ್ ಡ್ರಿಬೆಲ್ ಎಂಬ ಡಚ್ ಸಂಶೋಧಕನು ತಯಾರಿಸಿ ಥೇಮ್ಸ್ ನದಿಯಲ್ಲಿ ೧೨ ರಿಂದ ೧೫ ಅಡಿ ಆಳದಲ್ಲಿ ನಡೆಸಿ ತೋರಿಸಿದ. ಈತ ನಾವೆಯನ್ನು ಕಟ್ಟಿಗೆಯಿಂದ ತಯಾರಿಸಿ ಚರ್ಮದ ಹೊದಿಕೆ ಹೊದಿಸಿದ್ದ. ತೂತುಗಳ ಮೂಲಕ ಹುಟ್ಟುಗಳು ಹೊರ ಹಾಯ್ದರೂ ನೀರು ಒಳ ಸೇರದಂತೆ ಆ ರಂಧ್ರಗಳನ್ನು ಭದ್ರಪಡಿಸಿದ್ದ. ಈ ನಾವೆ ಪ್ರದರ್ಶಿತವಾದದ್ದು ಕ್ರಿ. ಶ. ೧೬೨೦ ರಲ್ಲಿ.

ಮುಂದಿನ ಒಂದು ನೂರು ವರ್ಷಗಳಲ್ಲಿ ಅಂದರೆ ಕ್ರಿ. ಶ. ೧೭೨೭ ರ ಹೊತ್ತಿಗೆ ಬೇರೆ ಬೇರೆ ಮಾದರಿಯ ೧೪ ಜಲಾಂತರ್ಗಾಮಿಗಳು ಸಿದ್ಧವಾದವು. ಅಮೇರಿಕನ್ ಕ್ರಾಂತಿಯ ಕಾಲದಲ್ಲಿ ಜಲಾಂತರ್ಗಾಮಿಯನ್ನು ಪ್ರಥಮ ಸಲ ಆಕ್ರಮಣ ಕಾರ್ಯಕ್ಕೆಂದು ಬಳಸಲಾಯಿತು.

ಕಾರಿ ಔಷಧಿಯಿಂದ ಎಂಬುದೂ ಸ್ಪಷ್ಟವಾಗುತ್ತದೆ. ನೆಪೋಲಿಯನ್ ಕೊಲೆಮಾಡಲ್ಪಟ್ಟ ಎಂಬ ಏಕೈಕ ತೀರ್ಮಾನಕ್ಕೆ ನಾವು ಬರದೆ ಗತ್ಯಂತರವಿಲ್ಲ.

ದೋಷಿ ಯಾರಿರಬಹುದು ? ಕೊಲೆಗಾರ, ನೆಪೋಲಿಯನ್ ಯಾರಲ್ಲಿ ವಿಶ್ವಾಸ ಮತ್ತು ನಂಬಿಕೆಗಳನ್ನಿರಿಸಿಕೊಂಡಿದ್ದನೋ ಅವರಲ್ಲಿ ಒಬ್ಬನಾಗಿರಲೇಬೇಕು ಎಂಬುದಂತೂ ನಿಸ್ಸಂಶಯ. ಶಮನಕಾರಿಯನ್ನು ಅವನಿಗೆ ಕೊಟ್ಟಿದ್ದರಲ್ಲಿ ಮತ್ಯಾವ ಸಾಧ್ಯತೆಗಳೂ ಇಲ್ಲ. ನೆಪೋಲಿಯನ್‌ನ ನೆರವಿಗಿದ್ದ ವ್ಯಕ್ತಿಗಳ ತನಿಖೆ. ಅಪ್ರಾಮಾಣಿಕ ಹಾಗೂ ಬೇಜವಾಬ್ದಾರೀ ವ್ಯಕ್ತಿಯೊಬ್ಬನನ್ನು ಸೂಚಿಸುತ್ತದೆ. ಓಮಿಯಾರ್ ಈ ವ್ಯಕ್ತಿಯ ಬಗೆಗೆ ವರದಿ ಮಾಡುತ್ತಾ, 'ಅವನು ಯೋಗ್ಯ ಮನುಷ್ಯನಂತಿರಲಿಲ್ಲ. ತುಚ್ಛಗುಣಗವನಾಗಿದ್ದ,' ಎನ್ನುತ್ತಾನೆ.

೧೮೧೭ ರಲ್ಲಿ ನೆಪೋಲಿಯನ್ನನನ್ನು ಜನರಲ್ ಬೋನಾಪಾರ್ಟ್ ಎಂದು ಡಾ. ಹಡ್ಸನ್ ಲೋ ಸಂಬೋಧಿಸಿದ್ದಕ್ಕೆ ಈ ವ್ಯಕ್ತಿ ಪ್ರತಿಭಟಿಸಿದ. ಚಕ್ರವರ್ತಿ ಎಂದದ್ದಕ್ಕಲ್ಲ. ಆದಾಗ್ಯೂ ೧೮೮೯ ರಲ್ಲಿ ಇದೇ ಮನುಷ್ಯ, ಎಂದೂ ಕಿರೀಟವನ್ನೇ ಪಡೆಯದವನಿಗೆ 'ಚಕ್ರವರ್ತಿ' ಎಂದು ಹೆಸರು ಕೊಡುವುದು ಬಾಲಿಶವಾಗುತ್ತದೆ ಎಂದು ಗವರ್ನರನಿಗೆ ಪತ್ರ ಬರೆದ.

ವೈದ್ಯರು ಶಮನಕಾರಿ ಔಷಧಿಯನ್ನು ವಿಧಿಸಿದಾಗ ಈ ವ್ಯಕ್ತಿ, ಡಾ. ಆಂಟೋಮಾರ್ಕಿ ಅಸಮ್ಮತಿಸಿದರೂ, ಅದನ್ನು ಒಪ್ಪಿಕೊಂಡ. ೧೮೨೦ ನೇ ಡಿಸೆಂಬರ್ ೫ ರ ತನ್ನ ಒಂದು ಪತ್ರದಲ್ಲಿ ಈತ ಬರೆಯುತ್ತಾನೆ: "ಚಕ್ರವರ್ತಿಯ ಹೃದಯ ಮತ್ತು ಯಕೃತ್ತು ಕೆಲಸಗಳನ್ನು ಇನ್ನು ಬಹುಕಾಲ ಮಾಡುವುದಿಲ್ಲ. ಚಕ್ರವರ್ತಿ ಆರು ತಿಂಗಳಿಗೂ ಹೆಚ್ಚು ಕಾಲ ಬದುಕುವುದಿಲ್ಲ." ಅವನ ಮಾತುಗಳು ಅದೆಷ್ಟು ಕರಾರುವಾಕ್ಕು! ಇದಾದ ಐದು ತಿಂಗಳಿಗೆ ಸರಿಯಾಗಿ ಚಕ್ರವರ್ತಿ ಮರಣ ಹೊಂದಿದ.

ಈ ವ್ಯಕ್ತಿ ಆಗಾಗ ಚಕ್ರವರ್ತಿಯೊಂದಿಗೆ ಒಬ್ಬನೇ ಇರುತ್ತಿದ್ದ. ತಾನು ಒಪ್ಪಿಕೊಂಡ ಔಷಧಿಗಳ ಹೊರತು, ಚಕ್ರವರ್ತಿ ಬೇರಾವ ಔಷಧಿಯನ್ನೂ ತೆಗೆದುಕೊಳ್ಳುತ್ತಿಲ್ಲವೆಂಬುದನ್ನು ಅವನು ಪರೀಕ್ಷಿಸುತ್ತಿದ್ದ. ಅವನೊಬ್ಬನೇ ಆ ಪಾನೀಯವನ್ನು ಸರಿಯಾದ ಹೆಸರಿನಿಂದ ಕರೆಯುತ್ತಿದ್ದ. ಉಳಿದವರು ಅದನ್ನು 'ಕಿತ್ತಳೆ ಹೂವಿನ ನೀರು' ಎಂದು ಹೇಳುತ್ತಿದ್ದರು. ನಮ್ಮ ಪ್ರಮುಖ ಸಂಶಯ ಚಕ್ರವರ್ತಿ ಕುಡಿದದ್ದು ಬಾದಾಮಿ ಚೂರುಗಳಿಂದ ತಯಾರಿಸಿದ ತಂಪು ಪಾನೀಯವನ್ನೇ ಎಂದು ಹೇಳುತ್ತದೆ.

ಈ ಎಲ್ಲ ವಿವರಗಳು ಬೆರಳು ಮಾಡಿ ತೋರಿಸುವ ಆ ವ್ಯಕ್ತಿ-ಜನರಲ್ ಕಾಮ್ಟೆ-ಡಿ-ಮಾಂಥೋಲನ್. ಅವನು ಹೀಗೆ ಮಾಡುವ ಅವಕಾಶವನ್ನು ಪಡೆದಿದ್ದ. ಆದರೆ ಉದ್ದೇಶ ಏನಾಗಿತ್ತು? ಯಾರೂ ಊಹಿಸಲಾರರು. ಉದ್ದೇಶವನ್ನು ತೋರಿಸಲು ನಾವು ಸೋತರೆ ಯಥಾರ್ಥತೆಯನ್ನು ದಾಖಲೆ ಮಾಡಲು ಸಾಧ್ಯವಾಗದು.

ಅವನು ಉಳಿದವರಿಗಿಂತ ಹೆಚ್ಚು ಅನುಮಾನಿಸಲ್ಪಟ್ಟ. ಅವನ ವಿವರಣೆ ಮತ್ತು ಕ್ರಿಯೆಗಳು ಅವನ ಅಪರಾಧದ ಬಗೆಗೆ ಕೆಲವು ಸಂಶಯಗಳನ್ನು ಸೃಷ್ಟಿಸುವಂತಿವೆ.

ನೆಪೋಲಿಯನ್ ಕೊಲೆ ಮಾಡಲ್ಪಟ್ಟ. ಅವನನ್ನು ಯಾರು ಕೊಂದರು ? ಬಹುಶಃ ನಾವೆಂದೂ ಇದನ್ನು ಅರಿಯಲಾರೆವು. ✣



ಮುಖಸ್ತುತಿಯೆಂದರೆ ಇನ್ನೊಬ್ಬರು ತಮ್ಮನ್ನು ಏನೆಂದು ಭಾವಿಸಿಕೊಂಡಿರುತ್ತಾರೋ ಅದನ್ನೇ ಅವರೆದುರು ಹೇಳುವುದು.

—ಡೇಲ್ ಕಾರ್ನೇಜಿ

# ಮರಣಾನಂತರವೂ ಮತ್ತೆ ಭೆಟ್ಟಿ

ಕೀರ್ತಿಸ್ವರೂಪ ರಾವತ

ಯಾರಾದರೂ ಸತ್ತರೆ ಅವರು ತಮ್ಮ ಮರಣದ ಸುದ್ದಿಯನ್ನು ತಮ್ಮ ಪ್ರೀತಿ ಪಾತ್ರರಿಗೆ ತಿಳಿಸುತ್ತಾರಂತೆ. ಹಾಗೆ ನೀನೇನಾದರೂ ನಮ್ಮನ್ನಗಲಿ ಹೋದರೆ ನಮಗೆ ಸುದ್ದಿ ತಿಳಿಸುವೆಯಾ ಅಜ್ಜಿ,?" ಎಂದು ಮೊಮ್ಮಗ ಫ್ರಾಸ್ಟ್ ತನ್ನ ಅಜ್ಜಿಗೆ ಕೇಳಿದ. ಅಜ್ಜಿ ಗಟ್ಟಿಮುಟ್ಟಿಯಾಗೇ ಇದ್ದಳು. ಆದರೂ ಮೊಮ್ಮಗನ ಕೇಳಿಕೆಗೆ ಸಮ್ಮತಿ ತೋರಿದಳು.

ಆ ಮಾತಿಗೆ ಎರಡುವರ್ಷ ನಾಲ್ಕು ತಿಂಗಳುಗಳೇ ಕಳೆದುಹೋದವು. ಒಂದಿನ ಸಂಜೆ ಐದರ ಸುಮಾರಕ್ಕೆ ಫ್ರಾಸ್ಟ್ ತನ್ನ ಹೆಂಡತಿಯೊಡನೆ ಚಹ ಸೇವಿಸುತ್ತ ಕುಳಿತಿದ್ದ. ಆತನ ಬೆನ್ನ ಹಿಂದೆ ಒಂದು ಕಿಟಕಿ ಇದ್ದಿತು. ಯಾರೋ ಕಿಟಕಿಯನ್ನು ತಟ್ಟುತ್ತಿರುವಂತೆ ಆತನಿಗೆ ಕೇಳಿಸಿತು. 'ಯಾರವರು?' ಎಂದು ಆತ ಹೊರಳಿ ನೋಡಿದರೆ ಕಿಟಕಿಯಲ್ಲಿ ಆತನ ಅಜ್ಜಿ ನಿಂತಿದ್ದಳು. ಈಗ ಫ್ರಾಸ್ಟ್ ಇದ್ದದ್ದು ತನ್ನ ಅಜ್ಜಿಯ ಊರಿಂದ ಸುಮಾರು ಮುನ್ನೂರು ಮೈಲುಗಳಷ್ಟು ದೂರದ ಪಟ್ಟಣದಲ್ಲಿ. ಫ್ರಾಸ್ಟ್ ಧಾವಿಸಿ ಬಾಗಲಿಗೆ ಹೋದರೆ ಅಲ್ಲಿ ಅಜ್ಜಿ ಇಲ್ಲ. ಸುತ್ತಲೂ ಹುಡುಕಾಡಿದ. ಎಲ್ಲಿಯೂ ಕಣ್ಣಿಗೆ ಬೀಳಲಿಲ್ಲ. ಅಜ್ಜಿ ಮರಣ ಹೊಂದಿರಲಿಕ್ಕಿಲ್ಲವಷ್ಟೆ? ಎಂದು ಆತನಿಗೆ ಹಠಾತ್ತಾಗಿ ಹೊಳೆಯಿತು. ನಿಜವಾಗಿಯೂ ಅಜ್ಜಿಯ ಮರಣ ಸಂಭವಿಸಿತ್ತು.

ಇಂಥ ದೃಷ್ಟಾಂತಗಳು ಸಾಕಷ್ಟಿವೆ. ಸಾಯುವ ಮೊದಲು ಇತ್ತ ಆಶ್ವಾಸನದಂತೆ ಕೆಲ ವ್ಯಕ್ತಿಗಳು ತಾವು ಸತ್ತ ನಂತರವೂ ತಮ್ಮ ಆಪ್ತೇಷ್ಟರಿಗೆ ಭೆಟ್ಟಿಕೊಟ್ಟು ಹೋದ ವೃತ್ತಾಂತಗಳಿಗೇನೂ ಕೊರತೆ ಇಲ್ಲ.

ಶ್ರೀ ಹಿಮೋಧಿ ಕೂಪರನ ದೃಷ್ಟಾಂತ ಕೂಡ ಇದೇ ಮಾದರಿಯದೇ ಅನ್ನಬೇಕು. ಹಿಮೋಧಿ ಶ್ರೀಮಂತ ಕುಟುಂಬಕ್ಕೆ ಸೇರಿದವ. ಆತನ ತಾಯಿಗೆ ತೀವ್ರ ಕಾಯಿಲೆಯಾದಾಗ ಆತ ಲಂಡನ್ನಿನಲ್ಲಿ ನೌಕರಿಗಿದ್ದ. ತಾಯಿಯ ಅನಾರೋಗ್ಯದ ವಾರ್ತೆ ಕೇಳಿದ ಕೂಡಲೇ ಆತ ರಜೆಹಾಕಿ ಧಾವಿಸಿಬಂದು ತಾಯಿಯನ್ನು ಭೆಟ್ಟಿಯಾದ. ಒಂದೆರಡು ದಿನ ಇದ್ದು ಹಿಂತಿರುಗುವಾಗ, ''ಅವ್ವಾ, ಸಾಧ್ಯವಾದರೆ ನೀನು ನಿನ್ನ ಮರಣದ ವಾರ್ತೆಯನ್ನು ನನಗೆ ತಿಳಿಸುವಿಯಾ? ಭೆಟ್ಟಿಯಾಗುವಿಯಾ?" ಎಂದು ಕೇಳಿದ.

“ಆಗಲಿ, ಸಾಧ್ಯವಿದ್ದರೆ ನೋಡೋಣ” ಎಂದು ತಾಯಿ ಉತ್ತರಿಸಿದಳು.

ಕೆಲ ದಿನಗಳು ಉರುಳಿದವು. ಒಂದು ರಾತ್ರಿ ಯಾರದೊ ಮೃದುಸ್ಪರ್ಶದಿಂದ ಹಿಮೋಧಿ ಎಚ್ಚತ್ತ. ತಾಯಿಯ ಸುಪರಿಚಿತ

ವನಿ ಆತನಿಗೆ ಕೇಳಿಸಿತು.

"ನಾನು ಶಾಂತಳಾದೆ"

ತನ್ನ ಸಮೀಪದಿಂದ ಯಾರೊ ಹೊರಟು ಹೋದಂತೆಯೂ ಆತನಿಗೆ ಭಾಸವಾಯಿತು. ಆತ ತನ್ನ ಪಕ್ಕದಲ್ಲಿಯೇ ಮಲಗಿದ್ದ ಮಿತ್ರನನ್ನು ಎಬ್ಬಿಸಿ, ತನ್ನ ತಾಯಿ ತೀರಿಕೊಂಡಿರುವುದಾಗಿಯೂ ಇದೀಗ ತನಗೆ ಭೇಟ್ಟಿಕೊಟ್ಟು ಹೋದುದಾಗಿಯೂ ತಿಳಿಸಿದ. ಅಷ್ಟರಲ್ಲಿ ಗಡಿಯಾರ ಮೂರು ಗಂಟೆ ಹೊಡೆಯಿತು. ನಂತರ ಆತನಿಗೆ ಬಂದ ಪತ್ರದಲ್ಲಿ ಆತನ ತಾಯಿಯು ರಾತ್ರಿ ಮೂರು ಗಂಟೆಗೆ ಐದು ನಿಮಿಷಗಳಿರುವಾಗ ತೀರಿಕೊಂಡಿದ್ದಾಗಿ ಕಾಣಿಸಲಾಗಿತ್ತು.

ಕೆಲ ಸ್ನೇಹಿತರಲ್ಲಿಯೂ ಇಂಥ ಆಣೆ ಭಾಷೆಗಳು ನಡೆದದ್ದುಂಟು. ಸುವಿಖ್ಯಾತ ರಾಜಕಾರಣಿ ಲಾರ್ಡ್ ಬ್ರೌಘಮ್ ತನ್ನ ಆತ್ಮ ಚರಿತ್ರೆಯಲ್ಲಿ ಇಂಥದೊಂದು ವೃತ್ತಾಂತ ನೀಡಿದ್ದಾನೆ. ಆತನ ಸ್ನೇಹಿತನಿಗೆ ಸಂಬಂಧಿಸಿದ ಆ ವಿವರಣೆಯನ್ನು ಆತನಿಂದಲೇ ಕೇಳೋಣ.

"ಆತ್ಮನ ಅಮರತ್ವ ಮತ್ತು ಅತಿ ಜೀವನ ಎಂಬ ವಿಷಯದ ಬಗ್ಗೆ ನನ್ನ ಸ್ನೇಹಿತನೊಡನೆ ಚರ್ಚೆ ನಡೆಯಿತು. ಈ ಪ್ರಶ್ನೆಗೆ ಖಚಿತವಾದ ಉತ್ತರ ಕಂಡುಹಿಡಿಯಬೇಕು. ಎಂದು ನಿರ್ಧರಿಸಲಾಯಿತು. ನಮ್ಮಿಬ್ಬರಲ್ಲಿ ಮೊದಲು ಮರಣಿಸುವವರು ತಮ್ಮ ಅಸ್ತಿತ್ವದ ಬಗ್ಗೆ ಉಳಿದವರಿಗೆ ತಿಳಿಸಬೇಕು. ಎಂದು ನಮ್ಮಲ್ಲಿ ಒಡಂಬಡಿಕೆ ಆಯಿತು. ಅನೇಕ ವರ್ಷಗಳು ಕಳೆದು ಹೋದವು. ಈ ಮಾತೇ ಮರೆತಂತಾಯಿತು. ಮುಂದೆ ನಮ್ಮಿಬ್ಬರ ಭೇಟಿ ಅನೇಕ ವರ್ಷಗಳವರೆಗೆ ಆಗಲಿಲ್ಲ. ಒಂದಿನ ನಾನು ಸ್ನಾನಕ್ಕೆಂದು ಬಾತ್‌ರೂಮಿಗೆ ಹೋಗುವಾಗ ನನ್ನ ಬಟ್ಟೆಗಳನ್ನು ಕಳಚಿ ಕುರ್ಚಿಯ ಮೇಲಿಟ್ಟು ಹೋದೆ. ಸ್ನಾನ ಮುಗಿಸಿ ಬಂದು ಆ ಬಟ್ಟೆಗಳನ್ನೆತ್ತಿಕೊಳ್ಳಲು ಹೋದರೆ ಅಲ್ಲಿ ನನ್ನ ಸ್ನೇಹಿತ ಕುಳಿತಿದ್ದ."

ಆ ತನ್ನ ಸ್ನೇಹಿತನನ್ನು ಕಂಡ ಲಾರ್ಡ್ ಬ್ರೌಘಮ್ ಕೆಲ ನಿಮಿಷ ದಿಙ್ಮೂಢನಾಗಿ ನಿಂತು ಬಿಟ್ಟ.

ಅಂದು ಸಂಜೆಗೆ ಆತನಿಗೆ ತನ್ನ ಮಿತ್ರನ ಮರಣ ವಾರ್ತೆ ಸಾರುವ ಪತ್ರ ತಲುಪಿತು.

೧೮೫೦ರಲ್ಲಿಯ ಒಂದು ಘಟನೆ. ಬರ್ಕಲೆ ಹಾಗೂ ಮೆಕೆಂಜಿ ಇಬ್ಬರು ಸ್ನೇಹಿತರು. ಅಮರತ್ವ– ಅತಿಜೀವನ ಕುರಿತು ಅವರಿಬ್ಬರೂ ಸಾಕಷ್ಟು ದೀರ್ಘಚರ್ಚೆ ನಡೆಸಿದ್ದರು. ಸತ್ತ ಬಳಿಕ ಆ ವ್ಯಕ್ತಿ ಸಂಪೂರ್ಣ ನಷ್ಟವಾಗಿ ಬಿಡುತ್ತಾನೆ ಎಂಬುದನ್ನು ಒಪ್ಪಲು ಬರ್ಕ್‌ಲೆ ಸಿದ್ಧನಿರಲಿಲ್ಲ. ಕೊನೆಗೆ ಅವರು, ತಮ್ಮಲ್ಲಿ ಯಾರು ಮೊದಲು ಸಾಯುವರೋ ಅವರು ಉಳಿದುಕೊಂಡಿರುವವನಿಗೆ ತನ್ನ ಅಸ್ತಿತ್ವದ ಬಗ್ಗೆ ನಿಸ್ಸಂದೇಹಕರ ಪುರಾವೆ ಒದಗಿಸಬೇಕು ಎಂದು ತಮ್ಮಲ್ಲಿ ಒಂದು ನಿರ್ಣಯಕ್ಕೆ ಬಂದರು.

ಆರು ವರ್ಷಗಳ ನಂತರ ಅಂದರೆ ೧೮೫೬ ಜನೆವರಿಯಲ್ಲಿ ಬರ್ಕಲೆ ತನ್ನ ಮೂವತ್ತನೆ ವರ್ಷದಲ್ಲಿ ಅಕಾಲ ಮರಣಕ್ಕೆ ತುತ್ತಾದ. ಅದೇ ರಾತ್ರಿ ಮೆಕೆಂಜಿ ಮಲಗುವ ಸಿದ್ಧತೆಯಲ್ಲಿದ್ದ. ಆತ ಕಣ್ಣುಮುಚ್ಚಿದ್ದೇ ತಡ ಯಾರೊ ಅವನ ಹಣೆಯನ್ನು ಸ್ಪರ್ಶಿಸಿದಂತಾಯಿತು. ಕಣ್ಣುಬಿಟ್ಟು ನೋಡಿದರೆ ಸ್ನೇಹಿತ ಬರ್ಕಲೆ ತನ್ನ ಹಾಸಿಗೆಯ ಬಳಿ ನಿಂತದ್ದು ಮೆಕೆಂಜಿಗೆ ಕಾಣಿಸಿತು. ಹೆದರಿ ಹೋಗಿದ್ದ ಮೆಕೆಂಜಿ ತನ್ನ ಸ್ನೇಹಿತನ ಆಕೃತಿಯನ್ನು ಕುತೂಹಲದಿಂದ ನಿರೀಕ್ಷಿಸುತ್ತಿರುವಂತೆ ಆತನಿಗೆ ಒಂದಿನ ವಚನದ ಸ್ಮರಣೆ ಆಯಿತು. ಬರ್ಕಲೆ ಕೆಲ ಕ್ಷಣಗಳ ಮುಂಚೆ ಸತ್ತಿದ್ದ.

ಡಾ. ಕೌಲ್ಪೊಗಿರೋನನ ಅನುಭವವೂ ಈ ಸಂದರ್ಭದಲ್ಲಿ ಗಮನಾರ್ಹವಾಗಿದೆ.

"ನೋಡಿ ಡಾಕ್ಟರರೇ ನನಗಂತೂ ವಯಸ್ಸಾಯಿತು. ನಿಮ್ಮೆದುರಿಗೆ ನಾನೇನಾದರೂ ಸತ್ತರೆ ನಂತರವೂ ನನ್ನದೇನಾದರೂ ಉಳಿದುಕೊಂಡರೆ, ಖಂಡಿತ ನಾನು ನಿಮ್ಮ ಭೇಟಿಗೆ ಬರುತ್ತೇನೆ" ಎಂದು ಡಾ. ಕೌಲ್ಪೊಗಿರೋನನಿಗೆ ಆತನ ಸ್ನೇಹಿತನೊಬ್ಬ ಹೇಳಿದ. ಆಗ ಅವರಲ್ಲಿ ಪರಾಮನೋವೈಜ್ಞಾನಿಕ ದೃಷ್ಟಾಂತಗಳ ಕುರಿತು ಚರ್ಚೆ ನಡೆದಿತ್ತು.

"ಹಾಗೆ ನೀವು ಬಂದಿದ್ದೇ ಆದರೆ, ನೀವು ಈ ಕೋಣೆಯಲ್ಲಿಯ ಯಾವದಾದರೊಂದು ವಸ್ತುವನ್ನು ಭಂಗಿಸಿ ತೋರಿಸಬೇಕು" ಎಂದು ಡಾಕ್ಟರರೂ ವಿನೋದದಿಂದಲೇ ಹೇಳಿದರು.

ಈ ಸಂಭಾಷಣೆ ನಡೆದ ಏಳು ತಿಂಗಳುಗಳ ನಂತರ ಡಾ. ಕೀಲ್ಪೊಗಿರೋನನು ಒಂದು ಸಂಜೆ ತನ್ನ ಸೋದರಿಯೊಂದಿಗೆ ಚಹಾಪಾನ ಮಾಡುತ್ತ ಕುಳಿತಿದ್ದ. ಎಲ್ಲಿಂದಲೋ ಕಟ್ ಕಟ್ ಶಬ್ದ ಕೇಳಬರಹತ್ತಿತು. ಡಾಕ್ಟರ್ ಅತ್ತಿತ್ತ ನೋಡಿದರೂ ಸುಳಿವು ಹತ್ತಲಿಲ್ಲ. ಮೇಲ್ಭಾವಣಿಯತ್ತ ದೃಷ್ಟಿ ಹರಿಸಲಾಗಿ ಅಲ್ಲಿಯ ಗ್ಯಾಸ್‌ಲ್ಯಾಂಪಿನ ಶೇಡ್ (ಆಚ್ಛಾದನ)ನ್ನು ಯಾರೋ ತಟ್ಟುತ್ತಿರುವಂತೆ ಅನಿಸಿತು. ಸದ್ದು ಹೆಚ್ಚುತ್ತ ನಡೆಯಿತು. ನಿಂತು ಹೋಯಿತು.

ಐದಾರು ದಿನಗಳ ನಂತರ ಡಾಕ್ಟರ ತನ್ನ ಅಭ್ಯಾಸದ ಕೋಣೆಯಲ್ಲಿದ್ದಾಗ ಆತನ ಸೋದರಿ ಬಾಲ್ಕನಿಯಲ್ಲಿ ಏನೋ ಕೆಲಸದಲ್ಲಿದ್ದಳು. ಅಷ್ಟರಲ್ಲಿ ಅಡುಗೆ ಮನೆಯಿಂದ ಭಾರಿ ಸದ್ದು ಕೇಳಿಸಿತು. ಇಬ್ಬರೂ ಧಾವಿಸಿ ಅಲ್ಲಿಗೆ ಹೋದರೆ, ನೇತಾಡುತ್ತಿದ್ದ ಗ್ಯಾಸ್ ಲ್ಯಾಂಪಿನ ಶೇಡಿನ ತುಂಡೊಂದು ಅಲ್ಲಿ ಮೇಜಿನ ಮೇಲೆ ಬಿದ್ದು ಪುಡಿಪುಡಿಯಾಗಿದ್ದುದು ಅವಳಿಗೆ ಕಂಡು ಬಂದಿತು.

ಎರಡು ದಿನಗಳ ನಂತರ ಡಾಕ್ಟರನ ಮಿತ್ರನೊಬ್ಬ ಆತನಿಗೆ, ಅಂದು ವಾದಿಸಿದ ಅವನ ಸ್ನೇಹಿತ ಮಡಿದ ಹೋದ ವಾರ್ತೆ ತಿಳಿಸಿದ.

ಮರಣದ ನಂತರ ಭೆಟ್ಟಿಯಾಗುವದಾಗಿ ಪ್ರೇಮಿಗಳು, ವಚನಬದ್ಧರಾಗಿ ಈಡೇರಿಸಿದ ದೃಷ್ಟಾಂತಗಳೂ ಸಾಕಷ್ಟಿವೆ. ಅಂಥ ಎರಡು ವೃತ್ತಾಂತಗಳನ್ನು ಪರಿಶೀಲಿಸಬಹುದು.

ಇಲಾ ಮತ್ತು ಊರ್ವಶಿ ಇಬ್ಬರು ರಾಜಕುಮಾರಿಯರು. ಬೇಸಿಗೆಯಲ್ಲಿ ಒಮ್ಮೆ ಅವರು ಕಾಶ್ಮೀರ ಸಂದರ್ಶನಕ್ಕೆಂದು ಹೋದಾಗ ಅಲ್ಲಿ ಅವರಿಗೆ ಪ್ರೇಮ ಎಂಬ ತರುಣನ ಪರಿಚಯವಾಯಿತು. ಅವರ ಪರಿಚಯ ಅಲ್ಪ ಕಾಲೀನವಾಗಿದ್ದರೂ ಇಲಾ-ಪ್ರೇಮರು ಪರಸ್ಪರ ಆಕೃಷ್ಟರಾದರು. ರಾಜಕುಮಾರಿಯರು ಹಿಂತಿರುವಾಗ ಇಲಾ-ಪ್ರೇಮರು ತಮ್ಮಲ್ಲಿ ಒಂದು ನಿರ್ಣಯಕ್ಕೆ ಬಂದರು. "ತಮ್ಮಲ್ಲಿ ಯಾರು ಮೊದಲು ಸಾಯುತ್ತಾರೋ ಅವರು ಉಳಿದವರ ಭೆಟ್ಟಿಗೆ ಬರಬೇಕು" ಎಂಬುದೇ ಆ ನಿರ್ಣಯ. ರಾಜಕುಮಾರಿಯರಿಬ್ಬರೂ ತಮ್ಮ ನಗರಕ್ಕೆ ಹಿಂತಿರುಗಿದರು. ಪ್ರೇಮ ಅಲ್ಲಿಯೆ ಕಾಶ್ಮೀರದಲ್ಲಿ ಉಳಿದ. ಅವರಲ್ಲಿ ಪತ್ರ ವ್ಯವಹಾರ ಇರಲಿಲ್ಲ. ಪ್ರಾಯಶಃ ಅವರು ಪ್ರೇಮನನ್ನು ಮರೆತೇ ಬಿಟ್ಟಿರಬೇಕು.

ಒಂದು ವರ್ಷದ ನಂತರ ಇಲಾ-ಊರ್ವಶಿ ಒಂದು ರಾತ್ರಿ ನಾಟಕ ನೋಡಿ ಹೊರ ಬಂದಾಗ ಊರ್ವಶಿಗೆ ಉಂಟಾದ ಅನುಭವ ಆಕೆಯ ಶಬ್ದಗಳಲ್ಲಿಯೇ ಹೀಗಿದೆ:-

"ನನ್ನ ಸೋದರಿ ಇಲಾ ಮೊದಲೇ ಕಾರಿನಲ್ಲಿ ಕುಳಿತಿದ್ದಳು. ನಾನು ಸಾವಧಾನದಿಂದ ಮೆಟ್ಟಲು ಇಳಿದು ಬರುತ್ತಿದ್ದೆ. ಡ್ರಾಯವ್ಹರ್ ಕಾರಿನ ಬಾಗಿಲು ತೆರೆದು ಕಾಯುತ್ತಿದ್ದ. ನಾನು ಕಾರಿನಲ್ಲಿ ಒಂದು ಕಾಲಿಟ್ಟೆನೋ ಇಲ್ಲವೋ ಸ್ತಂಭೀಭೂತಳಾಗಿ ನಿಂತು ಬಿಟ್ಟೆ. ಕಾರಿನಲ್ಲಿ ಕತ್ತಲೆ ಕವಿದಿದ್ದರೂ ಮುಂದಿನ ಸೀಟಿನಲ್ಲಿ ಮಂದ ಪ್ರಕಾಶದಲ್ಲಿ ಕುಳಿತಿದ್ದ ವ್ಯಕ್ತಿಯೊಂದು ನನ್ನ ಸೋದರಿಯನ್ನೇ ಎವೆ ಇಕ್ಕದೆ ಟಕಮಕ ನೋಡುತ್ತಿತ್ತು. ಕ್ಷಣ ಮಾತ್ರ ಇದ್ದ ಆ ದೃಶ್ಯದ ಸಂಪೂರ್ಣ ಚಿತ್ರ ನನ್ನ ಮೆದುಳಿನಲ್ಲಿ ಮೂಡಿ ನಿಂತಿತ್ತು. ಆ ವ್ಯಕ್ತಿ ಪರಿಚಿತನಂತೆ ತೋರುತ್ತಿದ್ದ. ಅದೇ ಉದ್ದ ಮೂಗು, ಅದೇ ಪುಟ್ಟ ದಾಡಿ, ಒಪ್ಪಾರೆ ಹಿಕ್ಕಿದ ಕೂದಲು. ಕಾರಿನಲ್ಲಿಯ ಆ ಕತ್ತಲಲ್ಲಿಯೂ ಇಷ್ಟೆಲ್ಲ ಸ್ಪಷ್ಟವಾಗಿ ಗೋಚರವಾದದ್ದು ಕಂಡು ನನಗೆ ಅಚ್ಚರಿ."

ಆಶ್ಚರ್ಯಚಕಿತಳಾದ ಊರ್ವಶಿ ತಾನು ಕಂಡ ದೃಶ್ಯವನ್ನು ತನ್ನ ಸೋದರಿ ಇಲಾಳಿಗೆ ವಿವರಿಸಿದಳು. ಆದರೆ ಇಲಾ ಇದಾವದನ್ನೂ ಕಂಡಿರಲಿಲ್ಲ. ಆ ವ್ಯಕ್ತಿ ಯಾರೆಂಬುದನ್ನು ಅವಳಿಗೆ ಗುರುತಿಸಲಾಗಲಿಲ್ಲ. ಕೆಲ ದಿನಗಳ ನಂತರ ಶ್ರೀನಗರದಲ್ಲಿ ಪ್ರೇಮ ನಿಧನ ಹೊಂದಿದ ಎಂಬ ವಾರ್ತೆ ಆಕಸ್ಮಿಕವಾಗಿ ಅವರ

ಕಿವಿಗೆ ಬಿದ್ದದ್ದರಿಂದ ಅವರಿಗೆ ಅಂದು ರಾತ್ರಿ ಕಾರಿನಲ್ಲಿ ಕಂಡ ವ್ಯಕ್ತಿಯ ಗುರುತು ಹಿಡಿಯಲು ಸಾಧ್ಯವಾಯಿತು. ತಾನು ಮಡಿದ ನಂತರ ಭೆಟ್ಟಿಯಾಗುವದಾಗಿ ಪ್ರೇಮ ಇಲಾಳಿಗೆ ಹೇಳಿದ್ದ. ಅಲ್ಲದೆ ಕಾರಿನಲ್ಲಿ ಆಕೆಯನ್ನೇ ಆತ ಎವೆಯಿಕ್ಕದೆ ನೋಡುತ್ತಿದ್ದ. ಆದರೆ ಆತ ಭೆಟ್ಟಿಯಾಗುವದಾಗಿ ಇಲಾಳಿಗೆ ಭಾಷೆ ಕೊಟ್ಟಿದ್ದರೂ ಕಾಣಿಸಿದ್ದು ಊರ್ವಶಿಗೆ ಮಾತ್ರ ಇಲಾಳಿಗಲ್ಲ.

ಕಾರಿನಲ್ಲಿ ಕಾಣಿಸಿಕೊಂಡ ಎರಡು ದಿನಗಳ ನಂತರ ಪ್ರೇಮ ನಿಧನ ಹೊಂದಿದ್ದ. ನಿಧನಕ್ಕೆ ಮುಂಚೆ ಪ್ರೇಮ ಕೆಲ ದಿನಗಳಿಂದಲೂ ನಿಶ್ಶಕ್ತನಾಗಿದ್ದ ಮತ್ತು ಕಾರಿನಲ್ಲಿ ಈ ರಾಜ-ಕುಮಾರಿಯರಿಗೆ ಕಾಣಿಸಿಕೊಂಡ ದಿನವಂತೂ ಆತ ಪ್ರಜ್ಞಾಹೀನ ಸ್ಥಿತಿಯಲ್ಲಿದ್ದ. ಪ್ರೇಮ ತನ್ನ ದೇಹಾತೀತ ಅಸ್ತಿತ್ವವನ್ನು ತನ್ನ ಮರಣಕ್ಕೆ ಎರಡು ದಿನಗಳ ಮೊದಲೇ ಈ ರಾಜಕುಮಾರಿಯರಿಗೆ ಮನಗಾಣಿಸಿಕೊಟ್ಟ ಎಂದು ಹೇಳಬಹುದು.

ಕುಮಾರಿ ರಿಟಾಳ ಅನುಭವವೂ ಇದೇ ಮಾದರಿಯದಾಗಿದೆ. ಆಕೆ ಈ ಅನುಭವ ಪಡೆದಾಗ ಇಂಗ್ಲಂಡಿನಲ್ಲಿದ್ದರೆ ಆಕೆಯ ಮಿತ್ರ ಕ್ಯಾಪ್ಟನ್ ವಿಲಿಯಂ ನ್ಯೂಝಿಲಂಡ್‌ದಲ್ಲಿದ್ದ. ಕುಮಾರಿ ರಿಟಾ ಬರೆದಿಟ್ಟಿದ್ದಾಳೆ.

"ನಮ್ಮಲ್ಲಿ ಯಾರೇ ಮೊದಲು ದೇಹತ್ಯಾಗ ಮಾಡಿದರೂ ಉಳಿದವರ ಭೆಟ್ಟಿಗಾಗಿ ಬರಲು ಪ್ರಯತ್ನಿಸಬೇಕು ಎಂದು ನಮ್ಮಲ್ಲಿ ಗೊತ್ತಾಗಿತ್ತು. ಒಂದು ರಾತ್ರಿ ಹಠಾತ್ತಾಗಿ ನನಗೆ ಎಚ್ಚರವಾಯಿತು. ನನ್ನ ಕೋಣೆಯಲ್ಲಿ ನನ್ನ ಹೊರತು ಇನ್ನೊಬ್ಬರಿದ್ದಾರೆ ಎಂದು ಭಾಸವಾಗಹತ್ತಿತು. ಹಾಸಿಗೆಯ ಸಮೀಪದ ಮೇಜಿನ ಮೇಲೆ ದೀಪವೊಂದು ಉರಿಯುತ್ತಿತ್ತು. ನಾನು ಅತ್ತಿತ್ತ ದೃಷ್ಟಿ ಹಾಯಿಸಿದಾಗ ಮೇಜಿನ ಹಿಂದುಗಡೆ ಏನೊ ಕಂಡಂತಾಯಿತು. ನಾನು ಹೆದರಿದ್ದಿಲ್ಲವಾದರೂ ಕೈಕಾಲುಗಳು ತಣ್ಣಗಾದಂತೆ ಅನಿಸಹತ್ತಿತು. ನಾನು ಅತ್ತ ಕಡೆಗೇ ದಿಟ್ಟಿ ಇಟ್ಟು ನೋಡುತ್ತಿದ್ದಾಗ ಆಲ್ಲೊಂದು ಮುಖ ಕಾಣತೊಡ

## ರಕ್ತದಲ್ಲಿಯ ವಿಷ

ಸೀಸದ ವಿಷದಿಂದ ಮರಣ ಸಂಭವಿಸಿದಾಗ ಅದನ್ನು ಪತ್ತೆ ಹಚ್ಚಲು ಅಪರಾಧ ವಿಜ್ಞಾನಿಗಳು ಈ ವರೆಗೆ ಹೆಚ್ಚು ಶ್ರಮದಾಯಕವಾದ ವಿಧಾನವನ್ನು ಅನುಸರಿಸಬೇಕಾಗಿತ್ತಲ್ಲದೆ ಅದಕ್ಕೆ ತಗಲುವ ವೆಚ್ಚವೂ ವಿಪರೀತವಾಗಿರುತ್ತಿತ್ತು. ಅಲ್ಲದೆ ರಕ್ತ ಪರೀಕ್ಷೆಗೆ ಹೆಚ್ಚು ಪ್ರಮಾಣದಲ್ಲಿ ರಕ್ತವನ್ನು ಉಪಯೋಗಿಸಬೇಕಾಗುತ್ತಿತ್ತು. ಆದರೆ ಅಮೇರಿಕದ ಬೆಲ್ ಪ್ರಯೋಗಾಲಯದ ವಿಜ್ಞಾನಿಗಳು ಇದೀಗ ಕಂಡು ಹಿಡಿದ ವಿಧಾನದಿಂದ ರಕ್ತದಲ್ಲಿನ ಸೀಸದ ಅಂಶವನ್ನು ಕ್ಷಿಪ್ರವಾಗಿ ಪತ್ತೆಹಚ್ಚಬಹುದು. ಈ ವಿಧಾನವೂ ಸರಳ, ಅದಕ್ಕೆ ತಗಲುವ ವೆಚ್ಚವೂ ಕಡಿಮೆ. ಅಲ್ಲದೆ ಇದಕ್ಕಾಗಿ ಕೇವಲ ಒಂದು ಹನಿ ರಕ್ತ ಸಾಕು.

ರಕ್ತದಲ್ಲಿ ರಿಝಿಂಕ್ ಪ್ರೋಟೊಪ್ಲೋರ್‌ಫಿರಿನ್ ಎಂಬ ಹೀಮೋಗ್ಲೋಬಿನ್ನಿನ ಅಂಶವಿದ್ದು ರಕ್ತದಲ್ಲಿ ಸೀಸದ ಪ್ರಮಾಣ ಹೆಚ್ಚಾದ ಹಾಗೆ ಈ ಅಂಶವೂ ಅದೇ ಪ್ರಮಾಣದಲ್ಲಿ ಹೆಚ್ಚುತ್ತಾ ಹೋಗುತ್ತದೆ ಎಂಬುದೇ ಬೆಲ್ ವಿಜ್ಞಾನಿಗಳು ಕಂಡು ಹಿಡಿದ ಹೊಸ ಸಂಗತಿ. ಸೀಸದ ಪ್ರಮಾಣವನ್ನು ಅಳೆಯುವುದೂ ಸುಲಭ. ಒಂದು ಹನಿ ರಕ್ತವನ್ನು ಗಾಜಿನ ಸ್ಲೈಡಿನ ಮೇಲಿರಿಸಿ ಅದನ್ನು ಪ್ರಕಾಶಮಾಪಕ (Fluorimeter) ದಲ್ಲಿಡಲಾಗುವುದು. ಅನಂತರ ಆ ಹನಿಯ ಮೇಲೆ ನೀಲಿ ಪ್ರಕಾಶ ಕಿರಣಗಳನ್ನು ಬಿಟ್ಟಾಗ ರಕ್ತ ಕೆಂಪು ಪ್ರಕಾಶದಿಂದ ಹೊಳೆಯತೊಡಗುವುದು. ಸೀಸದ ಪ್ರಮಾಣ ಹೆಚ್ಚಿದಷ್ಟೂ ರಕ್ತ ಹೆಚ್ಚು ಕೆಂಪಾಗಿ ಹೊಳೆಯುತ್ತದೆ. ಆ ವರ್ಣಪಟುತ್ವವನ್ನು ಪ್ರಕಾಶಮಾಪಕದಿಂದ ಅಳೆಯಬಹುದು.

ಗಿತು. ಆತ ಯಾರು ಎಂದು ಯೋಚಿಸ ತೊಡಗಿದೆ. ಯಾರೊ ಒಬ್ಬರು ಅಲ್ಲಿರುವ ದಂತೂ ಸರಿಯೆ. ಆದರೆ ಯಾರವರು ? ಅಷ್ಟ ರಲ್ಲಿ ಆ ಮುಖ 'ಕ್ಯಾಪ್ಟನ್ ವಿಲಿಯಂ' ಎಂದಷ್ಟೇ. ಉಚ್ಚರಿಸಿ ಅದೃಶ್ಯವಾಯಿತು."

ಕ್ಯಾಪ್ಟನ್ ವಿಲಿಯಂ ಮಡಿದಿದ್ದಾನೆ ಎಂಬ ವಾರ್ತೆಯೆ ರಿಟಾಳಿಗೆ ಗೊತ್ತಿರಲಿಲ್ಲ. ಆಕೆ ಕ್ಯಾಪ್ಟನ್‌ನ ಬಗ್ಗೆ ಅಲ್ಲಲ್ಲಿ ವಿಚಾರಿಸ ಲಾಗಿ, ಆತ ಗಾಡಿಯಿಂದ ಬಿದ್ದು ಅಪಘಾತ ಕ್ಕೀಡಾಗಿ ಕೆಲ ಸಮಯ ಪ್ರಜ್ಞಾಹೀನನಾಗಿದ್ದ ಎಂದು ಆಕೆಗೆ ತಿಳಿದು ಬಂತು.

"ಆ ಪ್ರಜ್ಞಾಹೀನ ಸ್ಥಿತಿಯಲ್ಲಿಯೆ ಆತನ ಆತ್ಮ ನನ್ನ ಭೆಟ್ಟಿಗಾಗಿ ಬಂದಿತ್ತು ಎಂಬುದ ರಲ್ಲಿ ಸಂದೇಹವಿಲ್ಲ" ಎಂದು ರಿಟಾ ಬರೆದಿಟ್ಟಿದ್ದಾಳೆ.

ಇಬ್ಬರು ಗೆಳತಿಯರ ದೃಷ್ಟಾಂತವೊಂದು ಗಮನಾರ್ಹವಾಗಿದೆ. ಸತ್ತ ನಂತರ ಬಂದು ಸುದ್ದಿ ತಿಳಿಸುವ ಈ ಘಟನೆ ಶ್ರೀಮತಿ ಶೀಲಾ ಓಬೆರಾಯ ಹಾಗೂ ಆಕೆಯ ಗೆಳತಿಗೆ ಸಂಬಂಧಿಸಿದುದಾಗಿದೆ. ಶ್ರೀಮತಿ ಶೀಲಾ ಶಾಲೆಯಲ್ಲಿ ಓದುತ್ತಿದ್ದಾಗ ತನ್ನ ಗೆಳತಿ ಯೊಬ್ಬಳೊಡನೆ ಒಂದು ಒಪ್ಪಂದ ಮಾಡಿಕೊಂಡಳು. ತಮ್ಮಲ್ಲಿ ಯಾರೇ ಮೊದಲು ಸತ್ತವರು, ಉಳಿದುಕೊಂಡವರಿಗೆ, ಬಂದು ಸುದ್ದಿ ತಿಳಿಸಬೇಕು ಎಂಬುದೇ ಆ ಒಪ್ಪಂದ ವಾಗಿತ್ತು.

ವರುಷಗಳೇ ಉರುಳಿದವು. ಆ ಸ್ನೇಹಿತೆ ಮಡಿದ ಸುದ್ದಿ ಶ್ರೀಮತಿ ಶೀಲಾಳಿಗೆ ತಿಳಿಯಿತು. ಆಗ ಶ್ರೀಮತಿ ಶೀಲಾ ತಮ್ಮಲ್ಲಿ ಆಗಿದ್ದ ಒಡಂಬಡಿಕೆಯನ್ನು ತನ್ನ ಗಂಡನಿಗೆ ತಿಳಿಸಿದಳು.

ಎರಡು ಮೂರು ದಿನಗಳ ನಂತರ ಶ್ರೀ ಓಬೇರಾಯನಿಗೆ ರಾತ್ರಿಯಲ್ಲಿ ಒಮ್ಮಿಂದೊ-ಮ್ಮೆಲೆ ಎಚ್ಚರವಾಯಿತು. ಚಳಿಗಾಲವಾದ್ದ ರಿಂದ ಅಗ್ಗಿಷ್ಟಿಕೆಯೂ ಉರಿಯುತ್ತಿತ್ತು. ಬೆಳಕು ನೀಡಲು ಮೇಣಬತ್ತಿಯೂ ಉರಿಯುತ್ತಿತ್ತು. ಇವೆರಡರ ನಡುವೆ ಹಾಸಿಗೆಯ ಹತ್ತಿರ ಓರ್ವ ಅಪರಿಚಿತ ಹೆಣ್ಣು ಮಗಳು ಕುಳಿತಿದ್ದಳು. ಓಬೇರಾಯ ಆಕೆಯನ್ನು ಕೆಲ ನಿಮಿಷ ದಿಟ್ಟಿಸಿ ನೋಡುತ್ತಿದ್ದಂತೆಯೆ ಆಕೆ ಅದೃಶ್ಯಳಾಗಿ ಬಿಟ್ಟಳು. ಓಬೇರಾಯ ತನ್ನ ಪತ್ನಿಯನ್ನು ಎಚ್ಚರಿಸಿ ತನಗಾದ ಅನುಭವ ನಿವೇದಿಸಿ ಆ ಸ್ತ್ರೀಯ ಆಕೃತಿಯನ್ನೂ ಬಣ್ಣಿಸಿದ. ಕೂಡಲೆ ಶೀಲಾ, "ಆಕೆ ನನ್ನ ಗೆಳತಿ" ಎಂದು ಉದ್ಗರಿಸಿದಳು. ಮರಣದ ನಂತರವೂ ಬಂದು ಭೆಟ್ಟಿಯಾಗುವೆನೆಂದು ವಚನವಿತ್ತಿದ್ದಳು ಎಂದೂ ಶೀಲಾ ತನ್ನ ಗಂಡನಿಗೆ ಹೇಳಿದಳು. ✡



## ಹುಚ್ಚನಾಗಬೇಕೇನು ?

ಸೈನ್ಯದಲ್ಲಿ ಸೇರಲು ಹೋದ ರೈತನೊಬ್ಬ ಸೈನ್ಯಾಧಿಕಾರಿಗೆ ಕೇಳಿದ.

"ನೀವು ನನ್ನನ್ನು ಜನರಲ್ ನನ್ನಾಗಿಸುತ್ತೀರೇನು ?"

"ಏನು, ಹುಚ್ಚೇ ನಿನಗೆ ?" ಎಂದು ಗದ್ದರಿಸಿದ ಆ ಸೈನ್ಯಾಧಿಕಾರಿ.

"ಹಾಂ, ಹಾಗಾದರೆ ಜನರಲ್ ಆಗಲು ಹುಚ್ಚನಾಗಬೇಕೇನು ?" ಎಂದು ರೈತ ಪುನರಪಿ ವಿಚಾರಿಸಿದ.

ಸೈನ್ಯಾಧಿಕಾರಿಯ ಮುಖ ನೋಡುವಂತಿತ್ತು.

ನೀವೂ ಸಿಕ್ಕುಬಿದ್ದೀರಿ, ಎಚ್ಚರ!

ಬಲ್ಲವರು ಬಹಳಷ್ಟಿರುವದಿಲ್ಲ ಎಂದರೆ ತಪ್ಪಾಗದು. ಹೀಗೆ ಮಾನವರನ್ನು ಪ್ರಯೋಗ-ಪಶುಗಳನ್ನಾಗಿ ಸಂಶೋಧನಗಳನ್ನು ಎಂಥ ಪರಿಸ್ಥಿತಿಯಲ್ಲಿ ನಡೆಸಬೇಕು ? ಅವುಗಳಿಗೆ ಮರ್ಯಾದೆ ಯಾವುದು ? ರೋಗಿಗಳ— ಪ್ರಯೋಗ ಪಶುಗಳ ಹಕ್ಕು ಬಾಧ್ಯತೆಗಳ ರಕ್ಷಣೆಯ ವಿಚಾರವೇನು ? ಎಂಬೆಲ್ಲ ಪ್ರಶ್ನೆಗಳು ವಿಚಾರಾರ್ಹವಾಗಿವೆ. ಔಷಧಿ ಶಾಸ್ತ್ರದ ಸೀಮೆಯನ್ನು ವಿಸ್ತರಿಸುವ ಹವ್ಯಾಸದಲ್ಲಿ ಡಾಕ್ಟರರು ತಮ್ಮ ಪ್ರಯೋಗ ಪಶುಗಳೂ ಮಾನವರೇ, ಅವರ ಹಕ್ಕುಬಾಧ್ಯತೆಗಳನ್ನು ಗೌರವಿಸಬೇಕಾದುದು ಅನಿವಾರ್ಯ ಎಂಬ ಮಾತನ್ನು ಮರೆತುಬಿಡಬಾರದು. ಈ ಮಾನವಪ್ರಯೋಗ ಪಶುಗಳು ಸಂಪೂರ್ಣ

# ಮಾನವ ಪ್ರಯೋಗಪಶು

ಎಂ. ಎಚ್. ಪ್ಯಾಪ್ ವರ್ಥ

ಮಾನವನ ಆರೋಗ್ಯಭಾಗ್ಯವನ್ನು ಕಾಪಾಡುವದೇ ಗುರಿಯಾದಾಗ ಕೇವಲ ಪಥ್ಯಪಾನಗಳಿಂದಷ್ಟೇ ಅದು ಸಾಧ್ಯವಾಗಲಾರದು. ಆತನಿಗೆ ಬೇನೆ-ಬೇಸರಿಕೆ ಬಂದಾಗ ಅವನ್ನು ನಿವಾರಿಸಲು ಔಷಧಗಳನ್ನು ಕೊಡಬೇಕಾಗುತ್ತದೆ. ಈ ಔಷಧಿ ಶಾಸ್ತ್ರವಂತೂ ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ಆದರೂ ಅದರ ಬೆಳವಣಿಗೆಗೆ ಮುಕ್ತಾಯವೆಂಬುದಿಲ್ಲ. ನಿತ್ಯ ಏನಾದರೂ ಸಂಶೋಧನೆ ಔಷಧಿ ಶಾಸ್ತ್ರದಲ್ಲಿ ನಡೆದೇ ಇರುತ್ತದೆ. ಇಂಥ ಸಂಶೋಧನೆಗಳ ಫಲವಾಗಿ ಪರಿಣಾಮಕಾರಿ ಎಂದು ಸಿದ್ಧವಾಗಿ ಔಷಧಗಳು ಪೇಟೆಗಳಿಗೆ ಬರಬೇಕಾದರೆ ಮೊದಲು ಅವು ಮಾನವರ ಮೇಲೆ ಪ್ರಯೋಗಿಸಲ್ಪಟ್ಟಿರುತ್ತವೆ ಎಂಬುದನ್ನು

ಗುಣಹೊಂದದಿದ್ದರೂ ಚಿಂತೆ ಇಲ್ಲ, ಅವರ ರೋಗ ಲಕ್ಷಣಗಳಾದರೂ ಅಳಿಯಬೇಕು ಎಂದುದು ಮುಖ್ಯ.

ಆಸ್ಪತ್ರೆಗಳ ಹೊರಗೆ ರೋಗಿಗಳ ಮೇಲೆ ಪ್ರಯೋಗಗಳನ್ನು ಕ್ವಚಿತ್ತಾಗಿ ಮಾಡಲಾಗುತ್ತದೆ. ಇನ್ನು ಆಸ್ಪತ್ರೆಗೆ ಭೆಟ್ಟಿಕೊಡುವ ರೋಗಿಗಳ ಮೇಲೆ ಕೂಡ ಅವರಿಗೆ, ತಿಳಿದೊ ತಿಳಿಯದೆಯೊ, ಪ್ರಯೋಗ ನಡೆಸಲಾಗುತ್ತಿರುತ್ತದೆ ಎಂದೂ ಹೇಳಲಿಕ್ಕಾಗದು. ಆದುದರಿಂದ ನೀವು ಆಸ್ಪತ್ರೆಗೆ ಪರೀಕ್ಷೆಗೆಂದಾಗಲಿ ಚಿಕಿತ್ಸೆಗೆಂದಾಗಲಿ ಹೋದರೆ ನೀವು ಪ್ರಯೋಗ ಪಶು ಆಗುವ ಸಂಭವ ತೀರ ಕಡಿಮೆ. ಅಲ್ಲದೆ ಇಂಥ ಪ್ರಯೋಗಗಳಲ್ಲಿ ತೊಡಗುವ ಎಲ್ಲ ಡಾಕ್ಟರರು ಚಾರಿತ್ರ್ಯಸಂಪನ್ನರಾಗಿದ್ದು

ತಮ್ಮ ವೃತ್ತಿಯ ನೀತಿಸೂತ್ರಗಳನ್ನು ಪರಿಪಾಲಿಸುವಂಥವರಾಗಿರುತ್ತಾರೆ.

ಮಾನವನನ್ನು ಪ್ರಯೋಗಪಶುವನ್ನಾಗಿಸಿಕೊಳ್ಳುವಾಗ ಎರಡು ಅಂಶಗಳು ಪ್ರಾಮುಖ್ಯವಾಗಿ ಅವಶ್ಯಕ. ಆ ವ್ಯಕ್ತಿಯ ಅಧಿಕೃತ ಸಮ್ಮತಿ ಬೇಕಲ್ಲದೆ, ಕಂಡುಬರುವ ಪರಿಣಾಮ ಸಂಶೋಧನೆಯನ್ನು ಸಮರ್ಥಿಸುವಂತಿರಬೇಕು. ಆ ವ್ಯಕ್ತಿಯು ತನ್ನ ಮೇಲೆ ನಡೆಸಲಾಗುವ ಸಂಶೋಧನೆಯ ಸಂಪೂರ್ಣ ವಿವರಗಳನ್ನು ತಿಳಿದುಕೊಂಡ ನಂತರ ನೀಡುವ ಸಮ್ಮತಿಯೇ ಅಧಿಕೃತ ಸಮ್ಮತಿ ಎನಿಸುವದು. ಸಂಶೋಧನೆಯ ಕಾಲಾವಧಿಯನ್ನು ಇತರ ಸಮಗ್ರ ವಿವರಗಳನ್ನು ಡಾಕ್ಟರನು ಆ ವ್ಯಕ್ತಿಗೆ ವಿವರಿಸಬೇಕು; ತದನಂತರ ಆತನು ಯಾವದೇ ಭಿಡೆಮುರವತ್ತುಗಳಿಗೆ, ಒತ್ತಾಯಕ್ಕೆ ಒಳಗಾಗದೇ ಸಮ್ಮತಿ ನೀಡಬೇಕು. ಅಲ್ಲದೆ ಆ ವ್ಯಕ್ತಿ ಈ ರೀತಿ ತಾನಾಗಿ ಸಮ್ಮತಿ ನೀಡುವ ಸ್ಥಿತಿಯಲ್ಲಿರಬೇಕು.

ಹೀಗೆ ಈ ಅಧಿಕೃತ ಸಮ್ಮತಿ ಪಡೆದುಕೊಳ್ಳುವದೇನೂ ಸುಲಭದ್ದಾಗಿಲ್ಲ. ಸುಶಿಕ್ಷಿತನಲ್ಲದ ಶ್ರೀಸಾಮಾನ್ಯನಿಗೆ, ಆತನ ಮೇಲೆ ನಡೆಸಲಾಗುವ ಪ್ರಯೋಗಗಳ, ಸಂಶೋಧನಗಳ ವಿವರಗಳನ್ನು ತಿಳಿಸಿ ಹೇಳುವದು ಅಸಾಧ್ಯಕೋಟಿಯೊಳಗಿನ ಮಾತು ಎಂದು ಅನೇಕ ಡಾಕ್ಟರರ ಅಭಿಪ್ರಾಯವಾಗಿದೆ. "ಸಂಶೋಧನಗಳಲ್ಲಿ ಗಂಡಾಂತರಗಳು ಹೆಚ್ಚಿದಂತೆಲ್ಲ ಆ ವ್ಯಕ್ತಿಗೆ ಅವುಗಳ ತಿಳಿವಳಿಕೆ ಸಮಗ್ರವಾಗಿ ಉಂಟುಮಾಡಿ ಕೊಡುವದು ಅತ್ಯಗತ್ಯ" ಎಂದು ಬ್ರಿಟಿಶ ಹೈಕೋರ್ಟ ನ್ಯಾಯಾಧೀಶರೊಬ್ಬರು ಒಡನುಡಿದಿದ್ದಾರೆ. 'ಅಧಿಕೃತ ಸಮ್ಮತಿ'ಯ ವ್ಯಾಖ್ಯೆಯ ವಿಷಯದಲ್ಲಿ ವಿವಾದವೆದ್ದಾಗ ಅದೇ ಹೈಕೋರ್ಟ ನ್ಯಾಯಾಧೀಶರು ಈ ವ್ಯಕ್ತಿಗಳು ರೋಗಿಗಳು, ನೀಡುವ ಸಮ್ಮತಿಗಳೆಲ್ಲ ಅಧಿಕೃತವಾಗಿವೆಯೋ ಇಲ್ಲವೊ ಎಂಬುದನ್ನು ವಕೀಲರು ನಿರ್ಣಯಿಸತಕ್ಕದ್ದು ಎಂದೂ ವಿಧಿಸಿದ್ದಾರೆ.

ಕೆಲ ಕಾಯುದೆಗಳನ್ನು ತಾವು ಉಲ್ಲಂಘಿಸಬಹುದು ಎಂದು ಭಾವಿಸಿರುವ ಕೆಲ ಡಾಕ್ಟರರನ್ನು ಬ್ರಿಟನ್ನಿನ ಇನ್ನೊಬ್ಬ ಹೈಕೋರ್ಟ ನ್ಯಾಯಾಧೀಶರು ಖಂಡಿಸಿದ್ದಾರೆ. ಸಮ್ಮತಿ ನೀಡಿದಾಕ್ಷಣ ಅಪಕೃತ್ಯವೇನೂ ಸುಕೃತಿಯಾಗಲಾರದು ಎಂದು ಆ ನ್ಯಾಯಾಧೀಶರ ಅಭಿಮತ. ಒದೆತಿನ್ನಲು ಒಬ್ಬರು ಸಮ್ಮತಿಸಿದ್ದಾರೆ ಎಂದ ಮಾತ್ರಕ್ಕೆ ಒದ್ದು ಬೀಡುವದೇನೂ ಸಾಧುವೆನಿಸಲಾರದು. ಮೌನಕ್ಕಿಂತ ಸಮ್ಮತಿಯು ಬೇರೆಯೆ ಆಗಿದೆ ಎಂದು ಹೇಳಬೇಕಾಗಿಲ್ಲ. ಮಾನವ ಪ್ರಯೋಗ ಪಶುಗಳನ್ನು ಆಯ್ದುಕೊಳ್ಳುವಾಗ ಅಶಿಕ್ಷಿತರನ್ನೇ ಗೊಣಗಲಾರದವರನ್ನೇ ಆರಿಸಿಕೊಳ್ಳುವ ಪ್ರವೃತ್ತಿ ತೋರಬಾರದು.

ಅಧಿಕೃತ ಸಮ್ಮತಿಯ ಈ ವ್ಯಾಖ್ಯೆ ಗಮನಿಸಿದಾಗ. ಮಾನಸಿಕ ಸ್ವಾಸ್ಥ್ಯವಿಲ್ಲದವರನ್ನಾಗಲಿ, ಪ್ರಜ್ಞಾಹೀನರಾಗಿರುವವರನ್ನಾಗಲಿ, ಮರಣೋನ್ಮುಖರಾಗಿರುವವರನ್ನಾಗಲಿ ಪ್ರಯೋಗ ಪಶುಗಳೆಂದು ಆಯ್ದುಕೊಳ್ಳಲು ಬರಲಾರದು ಎಂಬುದು ಸ್ಪಷ್ಟವಾಗುತ್ತದೆ. ಈ ಮೇಲಿನ ಮೂರೂ ಗುಂಪಿನವರು ಅಧಿಕೃತ ಸಮ್ಮತಿ ನೀಡಲು ಅಸಮರ್ಥರಾಗಿರುವದರಿಂದ, ಅಸಹಾಯಕರಾಗಿರುವದರಿಂದ ಅವರ ಬಗೆಗೆ ವಿಶೇಷ ಕರುಣೆ ತೋರುವದು ಅತ್ಯಗತ್ಯದ್ದಾಗಿದೆ.

ಮಕ್ಕಳ ಪರವಾಗಿ ತಾಯ್ತಂದೆಗಳಾಗಲಿ ಅವರಲ್ಲಿ ಒಬ್ಬರಾಗಲಿ ಅಧಿಕೃತ ಸಮ್ಮತಿ, ನೀಡಬಲ್ಲರೆ? ಈ ಕುರಿತು ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಕಾಯುದೆಗಳಿವೆ. ಆದರೆ ತಮ್ಮ ಮಕ್ಕಳಿಗೆ ತಕ್ಷಣ ಲಾಭದಾಯಕವಾಗದಂಥ ಯಾವದೇ ಸಂಶೋಧನ ಅಥವಾ ಪ್ರಯೋಗ ನಡೆಸಲು, ಅವರ ಪರವಾಗಿ, ಅಧಿಕೃತ ಸಮ್ಮತಿ ನೀಡುವ ಅಧಿಕಾರ ತಾಯ್ತಂದೆಗಳಿಗೆ ಇಲ್ಲ ಎಂಬುದು ಸಾಮಾನ್ಯ ನಿಯಮ. ಮಕ್ಕಳ ದೇಹದ ಮೇಲೆ ಸಂಶೋಧನ. ಪ್ರಯೋಗ ನಡೆಸಬೇಕಾದರೆ ಕಾಯುದೆ ಬಂಧನಗಳನ್ನಲ್ಲದಿದ್ದರೂ ನೈತಿಕ ಬಂಧನಗಳನ್ನಾದರೂ ಪಾಲಿಸಬೇಕಾಗುತ್ತದೆ. ಹಾಗಾದರೆ ಅಧಿಕೃತ ಸಮ್ಮತಿ ನೀಡಬಲ್ಲವರಿಗೆ ವಯೋ ನಿರ್ಬಂಧವೇನಾದರೂ ಇದೆಯೇ

ಅಂಥ ವಯೋನಿರ್ಬಂಧವೇನೂ ಇಲ್ಲ ಆದರೂ ಯಾವ ರೀತಿಯ ಸಂಶೋಧನೆಕ್ಕಾಗಿ ಸಮ್ಮತಿ ಕೇಳಲಾಗುತ್ತಿದೆ ಎಂಬುದನ್ನೂ ಗಮನಿಸಿ ಸಮ್ಮತಿ ನೀಡಬಹುದಾದ ವಯೋನಿರ್ಬಂಧವನ್ನು ಬೇರೆ ಬೇರೆ ದೇಶಗಳಲ್ಲಿ ಭಿನ್ನ ಭಿನ್ನವಾಗಿ ನಿರ್ಧರಿಸಲಾಗುತ್ತಿದೆ.

ಮರಣೋನ್ಮುಖರಾದವರನ್ನೂ ದೀರ್ಘ ಕಾಯಿಲೆಗೊಳಗಾದವರನ್ನೂ ಅವರನ್ನು ಗುಣಪಡಿಸುವ ದೃಷ್ಟಿಯಿಂದಲ್ಲದೆ ಬೇರೆ ಯಾವ ಸಂಶೋಧನೆಗಳಿಗೆ-ಪ್ರಯೋಗಗಳಿಗೆ ಗುರಿಪಡಿಸಬಾರದು ಎಂದು ನನ್ನ ಅಭಿಪ್ರಾಯ. ರೋಗಿಯ ಸ್ಥಿತಿ ಕೈ ಮೀರಿದೆ ಎಂಬ ಮಾತ್ರಕ್ಕೆ ಆತನನ್ನು ಎಂಥದೇ ಪ್ರಯೋಗಕ್ಕೆ ಈಡು ಮಾಡಬಹುದು ಎಂಬುದು ಸಮರ್ಥನೀಯವಲ್ಲ. ಇಂಥ ಹತಾಶ ರೋಗಿಗಳ ದುರ್ಲಾಭವನ್ನು ಡಾಕ್ಟರರು ಪಡೆಯಲೇಬಾರದು. ರೋಗಿ ಗುಣವಾಗುವದಿಲ್ಲ, ಗುಣವಾಗುವ ಸಂಭವವೂ ಇಲ್ಲ. ಆದ್ದರಿಂದ ಈ ರೋಗಿಯನ್ನು ಪ್ರಯೋಗ ಪಶುವನ್ನಾಗಿ ಪಡೆಯಲು ಏನೂ ಅಡ್ಡಿಯಿಲ್ಲ ಎಂಬ ಭ್ರಾಮಕ ಕಲ್ಪನೆಯಲ್ಲಿ ಡಾಕ್ಟರರು ಸಿಕ್ಕು ಬೀಳಬಾರದು. ಇಂಥ ಅಸಾಧ್ಯ ರೋಗಿಗಳಿಗೆ ರಕ್ಷಣೆ ದೊರೆಯುವಂತೆ ಮತ್ತು ಇವರನ್ನು ಸಂಶೋಧನೆಗಳಿಗೆ ಬಳಸಿಕೊಳ್ಳದಂತೆ ಸಂರಕ್ಷಕ ಕಾಯದೆಯೊಂದಿರಬೇಕಾದುದು ಅತ್ಯವಶ್ಯಕ. ಇಂಥ ಅಸಾಧ್ಯರೋಗಿಗಳ ದೇಹದೊಂದಿಗೆ ತಾವು ಚೆಲ್ಲಾಟವಾಡಬಹುದೆಂಬ ಭಾವನೆಯನ್ನು ಡಾಕ್ಟರರು ಬಿಟ್ಟು ಬಿಡಬೇಕು; ಅವರು ಕೂಡ ಇತರ ಮಾನವರಂತೆಯೆ ಹಕ್ಕುಬಾಧ್ಯತೆಗಳುಳ್ಳವರು ಎಂಬುದನ್ನು ಅರಿತುಕೊಳ್ಳಬೇಕು.

ಮನೋವಿಕೃತಿಗೊಳಗಾದವರ ಸಮಸ್ಯೆಯಂತೂ ಇನ್ನೂ ಜಟಿಲ. ವೈದ್ಯಕ ಸಂಶೋಧನಗಳಿಗೆ ಅಧಿಕೃತ ಸಮ್ಮತಿ ನೀಡಲು ಅವರಂತೂ ಸಮರ್ಥರಿರುವದಿಲ್ಲ. ಅವರ ಪರವಾಗಿ ಅವರ ಆಪ್ತೇಷ್ಟರು ಅಧಿಕೃತ ಸಮ್ಮತಿ ನೀಡುವದು ಕೂಡ ಅಸಮರ್ಥನೀಯ. ಅಂಥವರನ್ನು ಗುಣಪಡಿಸುವದಕ್ಕಾಗಿ ಸಂಶೋಧನಗಳನ್ನು ಪ್ರಯೋಗಗಳನ್ನು ನಡೆಸುವದಾದರೆ ಆ ಮಾತು ಬೇರೆ. ಇಂಥವರ ವಿಚಾರದಲ್ಲಿ ಅಧಿಕೃತ ಸಮ್ಮತಿ ನೀಡುವ ಕುರಿತು ಕಾಯದೆಯನ್ನು ಕಠೋರವಾಗಿಸಿದರೆ ಈ ರಂಗದಲ್ಲಿ ಸಂಶೋಧನ ಸ್ಥಗಿತವಾಗಬಹುದು.

ಸೆರೆಮನೆಗಳಲ್ಲಿಯ ಕೈದಿಗಳು ಹಾಗೂ ಸಂಶೋಧಕ ಡಾಕ್ಟರನ ಆಧೀನದಲ್ಲಿರುವ ವಿದ್ಯಾರ್ಥಿಗಳ ಅಧಿಕೃತ ಸಮ್ಮತಿ ಪಡೆಯುವಲ್ಲಿ ವಿಶೇಷ ದಕ್ಷತೆ ವಹಿಸಬೇಕಾಗುತ್ತದೆ. ಅಮೇರಿಕೆಯಲ್ಲಂತೂ ಈ ಎರಡೂ ಗುಂಪುಗಳವರನ್ನು ಸಂಶೋಧನಕ್ಕಾಗಿ ತಾವಾಗಿಯೆ ಮುಂದೆ ಬರುವ ಸ್ವಯಂಸೇವಕರಂತೆ ಬಳಸಿಕೊಳ್ಳಲಾಗುತ್ತದೆ. ನಿಜವಾಗಿ ನೋಡಿದರೆ ಇವರಿಗೆ ಇಂಥ ಸಂಶೋಧನೆಗಳಲ್ಲಿ ಭಾಗವಹಿಸುವ ಅಥವಾ ಬಿಡುವ ಸ್ವಾತಂತ್ರ್ಯ ಇದೆಯೇ? ವಿದ್ಯಾರ್ಥಿಗಳು ತಮ್ಮ ಶಿಕ್ಷಕನ ಅನುಗ್ರಹಾಕಾಂಕ್ಷಿಗಳಾಗಿ, ವಿಧೇಯತೆ ಪ್ರದರ್ಶಿಸುವದಕ್ಕಾಗಿ, ಅಪಕೀರ್ತಿಗೊಳಗಾಗದಿರುವದಕ್ಕಾಗಿ, ಪ್ರಯೋಗ ಪಶುಗಳಾಗಲು ಒಪ್ಪಿಕೊಳ್ಳಬಹುದು.

ಪ್ರಯೋಗಪಶುವಾಗಲು ಅಧಿಕೃತ ಸಮ್ಮತಿ ದೊರಕಿಸುವಾಗ ವ್ಯಕ್ತಿಗತವಾಗಿ ಮನವೊಲಿಸಬೇಕೊ ಅಥವಾ ಇಡೀ ಒಂದು ಗುಂಪಿಗೆ ಬಿನ್ನವಿಸಿಕೊಂಡು ಮನವೊಲಿಸಬೇಕೊ? ಇದರಲ್ಲಿ ಎರಡನೇ ವಿಧಾನವು ಅಷ್ಟೊಂದು ಸಾಧುವಲ್ಲ. ಯಾಕಂದರೆ ಯಾವದೊಂದು ಗುಂಪಿನ ಮನವೊಲಿಸುವಾಗ ಅವರಲ್ಲಿ ಕೆಲವರು ದುರ್ಬಲರು ಅಪವಾದ ಭೀತಿಯಿಂದ ಸಮ್ಮತಿ ನೀಡಬಹುದಾಗಿದೆ.

ಕೈದಿಗಳನ್ನು ಪ್ರಯೋಗ ಪಶುಗಳನ್ನಾಗಿ ಆಯ್ದುಕೊಳ್ಳಲು ಅನೇಕ ಕಾರಣಗಳಿವೆ— ಅವರು ವಾಸಿಸುವ ವಾತಾವರಣ ಒಂದೇ, ಅವರ ಊಟ ಪಾಟ ಒಂದೇ; ಅವರ ದೈಹಿಕ ಶ್ರಮದ ಸ್ವರೂಪವೂ ಸಾಧಾರಣ ಒಂದೇ. ಇವರು ಇನ್ನಿತರರಿಗಿಂತ ಅಲ್ಪ ಸಂಭಾವನೆಗೆ ಪ್ರಯೋಗ ಪಶುವಾಗಲು ಸಿದ್ಧ. ಅಲ್ಲದೆ ತಾವು ಇತರರಿಗೆ ಸಹಾಯಕಾರಿಗಳಾಗುವೆವಲ್ಲ ಎಂಬ ಹೆಮ್ಮೆ ಅವರಿಗಿರುತ್ತದೆ. ತಮ್ಮ ಕುಕೃತ್ಯಗಳ ನೆನಪು ಅಳಿಸಿ ಹೋಗಿ ತಾವೂ

ಪರೋಪಕಾರಿಗಳಾಗಬಲ್ಲೆವು ಎಂಬ ಅಭಿಮಾನ ಅವರಲ್ಲಿ ಮೂಡುತ್ತದೆ. ಹೀಗೆ ಪ್ರಯೋಗ ಪಶುಗಳಾಗಲು ಮುಂದಾಗುವದರಿಂದ ಜೇಲಿನ ನೀರಸ ಜೀವನದಲ್ಲಿ ಬದಲಾವಣೆ ಅವರಿಗೆ ಕಂಡುಬರುತ್ತದೆ.

ಔಷಧೀ ಉತ್ಪಾದನೆ ಇಂದು ಪ್ರಪಂಚದಲ್ಲಿ ಭಾರೀ ದೊಡ್ಡ ಉದ್ದಿಮೆಯಾಗಿದೆ. ಯಾವ ದೊಂದು ಅಮೂಲ್ಯ ಔಷಧದ ಶೋಧವಾದರೆ ಆ ಕಂಪನಿ ಅದರ ಬಲದಿಂದ ಧನಾಢ್ಯ ವಾಗುತ್ತದೆ. ಹೀಗೆ ಹೊಸ ಔಷಧಗಳನ್ನು ಪೇಟೆಗೆ ತರುವ ಪೂರ್ವದಲ್ಲಿ ಮೊದಲು ಪ್ರಾಣಿ ಗಳ ಮೇಲೆ ಪರೀಕ್ಷಿಸಿ ನೋಡಲಾಗುತ್ತದೆ. ಪ್ರಾಣಿಗಳ ಮೇಲೆ ಈಪ್ಸಿತ ಪರಿಣಾಮಗಳನ್ನು ಬೀರಿದ ಔಷಧಗಳನ್ನು ನಂತರ ಮಾನವ ಪ್ರಯೋಗಪಶುಗಳ ಮೇಲೆ ಪ್ರಯೋಗಿಸಿ ಪರೀಕ್ಷಿಸಲಾಗುತ್ತದೆ. ಈ ಸಂದರ್ಭದಲ್ಲಿ ಔಷ ಧದ ಸುಪರಿಣಾಮಕ್ಕಿಂತ ದುಷ್ಪರಿಣಾಮ ಗಳೇನಾಗುತ್ತವೆ ಎಂಬುದನ್ನು ಹೆಚ್ಚಾಗಿ ಗಮ ನಿಸಲಾಗುತ್ತಿರುತ್ತದೆ. ನಂತರ ಈ ಔಷಧ ಯಾವ ರೋಗವನ್ನು ಗುಣಪಡಿಸಬಲ್ಲದೆಂದು ಭಾವಿಸಲಾಗುತ್ತದೆಯೊ ಅಂಥ ರೋಗಿಗಳ ಮೇಲೆ ಪ್ರಯೋಗಿಸಿ ನೋಡಲಾಗುತ್ತದೆ. ಇಲ್ಲಿ ಆ ಔಷಧದ ರೋಗ ನಿವಾರಣ ಸಾಮರ್ಥ್ಯ ಎಷ್ಟು ಎಂಬುದನ್ನು ಅಳೆಯಲಾಗುವದು.

ಇಂಥ ಔಷಧ ಸಂಶೋಧನೆಗಳಲ್ಲಿ ಕೈದಿಗಳ ಪ್ರಯೋಜನ ಪಡೆಯುವದು ಸರ್ವಥಾ ಸಮರ್ಥ ನೀಯವಲ್ಲ ಎಂದು ನನ್ನ ಅಭಿಮತ. ಇಂಥ ಸಂಶೋಧನೆಗಳು ಮುಂದುವರೆಯಲು ಆಸ್ಪದ ವಿತ್ತಿದ್ದೇ ಆದರೆ, ಅದರಲ್ಲಿ ತೊಡಗಿಸಲಾಗುವ ಕೈದಿಗಳಿಗೆ ಸೂಕ್ತ ರಕ್ಷಣೆ ಒದಗಿಸುವದು ಕ್ರಮಪ್ರಾಪ್ತ. ಬೇರೊಂದು ಕಂಪನಿಯೂ ಈ ಸಂಶೋಧನಗಳ ದುರ್ಲಾಭ ಪಡೆಯುವ ಸಾಧ್ಯತೆಯೂ ಇಲ್ಲದಿಲ್ಲ. ಅಸಮರ್ಥ ಅದಕ್ಷ ಸಂಶೋಧಕರಿಗೆ ಈ ಕೈದಿಗಳ ಮುಖದರ್ಶನ ಕೂಡ ಆಗದಂತೆ ನೋಡಿಕೊಳ್ಳಬೇಕು.

ಪರಿಣಾಮಗಳು ಉಪಾಯಗಳನ್ನು ಸಮ-ರ್ಥಿಸುತ್ತಿವೆಯೆ? ಮಾನವಪ್ರಯೋಗ ಪಶು ಗಳನ್ನು ಉಪಯೋಗಿಸುವಲ್ಲಿ ಇದೊಂದು ಮುಖ್ಯ ಪ್ರಶ್ನೆ. ಪರಿಣಾಮಗಳು ಎಷ್ಟೇ ಉದಾತ್ತವಾಗಿದ್ದರೂ ನಿಕೃಷ್ಟ ಸಾಧನಗಳನ್ನು ಸಮರ್ಥಿಸಬಹುದೆ? ಒಪ್ಪನ್ನು ಪಡೆಯುವದ ಕ್ಕಾಗಿ ತಪ್ಪಿನ ಸಮರ್ಥನೆ ನ್ಯಾಯವೆ? ಇಲ್ಲ. ಎಂದಿಗೂ ಇಲ್ಲ. ಆದರೆ ಅಪವಾದಗಳು ಇದ್ದೇ ಇವೆ. "ಪರರು ನಿನಗೆ ಎಸಗಬಾರದು ಎಂಬುವದನ್ನು ನೀನು ಅವರಿಗೆ ಮಾಡದಿರು" ಎಂದು ಬೈಬಲ್ ಸೂಕ್ತಿ ಇದೆ, ವೈದ್ಯರ ಸಂಶೋಧನದ ವಿಚಾರದಲ್ಲಿಯೂ ಇದೇ ಸತ್ಯ ಎಂದು ಹೇಳಿರಬಹುದು. ಯಾವ ಡಾಕ್ಟರನೇ ಆಗಲಿ ರೋಗಿಯ ಹಿತಕ್ಕಿಂತ ತನ್ನ ಶಾಸ್ತ್ರವ ನ್ನಾಗಲಿ, ಸಾರ್ವಜನಿಕ ಕಲ್ಯಾಣವನ್ನಾಗಿ ಹೆಚ್ಚೆಂದು ಬಗೆಯುವದು ಸಮರ್ಥನೀಯ-ವಾಗಲಾರದು. ರೋಗಿಗಳ ದುರ್ದೈವದ ದುರ್ಲಾಭ ಪಡೆಯುವದು ಎಂದಿಗೂ ಸಾಧು ವಲ್ಲ.

ಸಮಾಜ ಕಲ್ಯಾಣವೇ ತಮ್ಮ ಗುರಿ ಎಂದು ಸಾರುವವರ ಹೇಳಿಕೆಗಳನ್ನು ತುಸು ಗಂಭೀರ ವಾಗಿಯೆ ಪರ್ಯಾಲೋಚಿಸಬೇಕು. ಅವರು ಒಮ್ಮೊಮ್ಮೆ ತಮ್ಮ ಅನನ್ವಿತ ಕೃತ್ಯಗಳನ್ನು ಬಚ್ಚಿಡುವದಕ್ಕಾಗಿ ಮರೆಮಾಚುವದಕ್ಕಾಗಿ ಅಂಥ ಘೋಷಣೆ ಮಾಡುತ್ತಿರುತ್ತಾರೆ. ನಾಝಿ ಡಾಕ್ಟರರು ಅರಕ್ಷಿತ ಜನರನ್ನು ಅನನ್ವಿತವಾಗಿ ಹಿಂಸಿಸಿದ್ದಕ್ಕಾಗಿ ನ್ಯೂರೆಂಬರ್ಗದಲ್ಲಿ ಅವರ ವಿಚಾರಣೆ ನಡೆದ ನಂತರ ಜಾಗತಿಕ ವೈದ್ಯರ ಸಂಘ (ವರ್ಲ್ಡ ಮೆಡಿಕಲ್ ಅಸೋಸಿಯೇ ಶನ್)ವು ತನ್ನ ಪ್ರಥಮ ನೀತಿಸೂತ್ರವನ್ನು ಪ್ರಕಟಿಸಿತು. ತಾವು ರಾಷ್ಟ್ರ ಕಲ್ಯಾಣಕ್ಕಾಗಿ ರಾಷ್ಟ್ರದ ಆಜ್ಞೆಯನ್ನೇ ಪಾಲಿಸಿದುದಕ್ಕಾಗಿ ಆ ನಾಝಿ ಡಾಕ್ಟರರು ತಮ್ಮ ಕೃತಿಸಮರ್ಥನೆ ಮಾಡಿಕೊಂಡರು. ಇಂಥ ಅಪರಾಧಗಳು ಪುನಃ ಸಂಭವಿಸದಂತೆ ನಾವು ಸದಾ ಜಾಗರೂಕ ರಾಗಿರಬೇಕು. ಇನ್ನೊಬ್ಬನ ಕಲ್ಯಾಣ ಮಾಡ ಬಯಸುವವನು ಆತನ ಸಮಗ್ರಕಲ್ಯಾಣವನ್ನೇ ಮಾಡಬೇಕು. ಜನಸಾಮಾನ್ಯರ ಕಲ್ಯಾಣ ಮಾಡುತ್ತೇನೆ ಎನ್ನುವದು ಕೇವಲ ಮುಖ ಸ್ತುತಿ" ಎಂದು ಆಂಗ್ಲಕವಿ ಬ್ಲೇಕ್ ಹೇಳಿ ದ್ದಾನೆ.

ಸಾಧನೆ–ಪರಿಣಾಮಗಳ ಸಂಬಂಧದ ಬಗ್ಗೆ ಇಷ್ಟು ಹೇಳಬಹುದು: ಕೆಲವರನ್ನು ನೋಯಿಸಿ ಘಾತಿಸಿ ಕರ್ಕರೋಗ (ಕ್ಯಾನ್ಸರ್)ಕ್ಕೆ ಪರಿಣಾಮಕಾರಿ ಔಷಧವನ್ನು ಕಂಡುಹಿಡಿದರೆ ಆ ಸಂಶೋಧನೆಯನ್ನು ಪ್ರಯೋಗವನ್ನು ಸಮರ್ಥಿಸಬಹುದೆ? ಸಾಧ್ಯವಿಲ್ಲ ಎನ್ನುತ್ತೇನೆ ನಾನು. ಅನೇಕ ಡಾಕ್ಟರರೂ ಶ್ರೀಸಾಮಾನ್ಯರೂ ನನ್ನ ಈ ಅಭಿಪ್ರಾಯವನ್ನು ಒಪ್ಪದಿರಬಹುದು. ವ್ಯಕ್ತಿಗೌರವ ಪ್ರತಿಯೊಬ್ಬನಿಗೂ ಇದೆ. ಆತನಿಗೆ ಅದು ದೊರೆಯಲೇಬೇಕು. ವಿಜ್ಞಾನದ ಸಂಭಾವ್ಯ ಪ್ರಗತಿಗಿಂತ, ಸಮಾಜದ ಸಂಭಾವ್ಯ ಕಲ್ಯಾಣಕ್ಕಿಂತ ಈ ವ್ಯಕ್ತಿಗೌರವ ಶ್ರೇಷ್ಠವಾದುದು. ಉದಾತ್ತವೆಂದು ಹೇಳಬಹುದಾದ ಕಾರಣಕ್ಕಾಗಿ ಸಹಬಾಂಧವರನ್ನು ಕಡೆಗಣಿಸುವದನ್ನು ತಡೆಗಟ್ಟುವದೇ ನಿಜವಾದ ದೇಶಬಂಧು ಪ್ರೇಮ ಎಂದು ಹೇಳಬಹುದು. ಆದರಲ್ಲಿಯೂ ರೋಗಿಗಳಿಗೆ ವಿಶೇಷ ಸಂಕಟ ಅನುಭವಿಸಲು ಬಿಡಬಾರದು.

ಕೆಲವು ಪ್ರಯೋಗಗಳು ಅದಕ್ಕೆ ಗುರಿಯಾದವರಿಗೆ ಗಂಡಾಂತರಕಾರಿ ಪ್ರಾಣಾಪಾಯಕಾರಿ ಆಗಿದ್ದು ಅನೈತಿಕವೂ ಅಕ್ರಮವೂ ಆಗಿದ್ದವು. ಕಾಲಕ್ರಮೇಣ ಈಗ ಅವೆಲ್ಲ ಸಾಧು ಎನಿಸುತ್ತಿವೆ. ಇಂಥ ಪ್ರಯೋಗಗಳ ಬಗ್ಗೆ ಏನು ಹೇಳಬೇಕು? ಅನೇಕ ಡಾಕ್ಟರರು ಪರಿಣಾಮಗಳನ್ನಷ್ಟೇ ಗಮನಿಸುತ್ತಾರಲ್ಲದೆ ತತ್ಪೂರ್ವದ ಪ್ರಯೋಗಗಳ ಬಗ್ಗೆ ಚರ್ಚಿಸಲೂ ಸಿದ್ಧರಿರುವದಿಲ್ಲ. ಯಾವದೊಂದರ ಪರಿಣಾಮ ಒಳ್ಳೆಯದಾದ ಮಾತ್ರಕ್ಕೆ ಆ ಪ್ರಯೋಗವನ್ನು ಮನ್ನಿಸಲಿಕ್ಕಾಗದು. ಪ್ರಯೋಗದ ಪ್ರಾರಂಭ ಕಾಲಕ್ಕೆ ಅದರ ಸುಷ್ಟ-ದುಷ್ಟ ಸ್ವರೂಪವನ್ನು ನಿರ್ಧರಿಸಬಹುದಾಗಿದೆ. ಹಿಂದಿನವರ ಕೆಲವು ಪ್ರಯೋಗಗಳೂ ಸಂಶೋಧನೆಗಳೂ ಅನಿಷ್ಟವಿದ್ದವೆಂಬುದನ್ನು ನಾವು ಮರೆಯಬಾರದು. ಒಂದು ವೇಳೆ, ನಾವೇನಾದರೂ ಈ ಸಂಗತಿ ಮರೆತು ಬಿಟ್ಟೆವೊ, ಇನ್ನಿತರರಿಗೂ ಅದೇ ದಾರಿಯಲ್ಲೂ ಮುಂದುವರಿಯಲು ನಾವು ಬಿಡುವಂತಾದೀತು. ಕೇವಲ ಪ್ರಸಿದ್ಧಿ, ಪ್ರತಿಷ್ಠೆಗಳಿಗಾಗಿ ಸಂಶೋಧನನಿರತರಾಗುವ ಡಾಕ್ಟರರನ್ನಂತೂ ನಾವು ಖಂಡಿಸಲೇಬೇಕು.

ಪ್ರಯೋಗ ಪಶುಗಳಿಗೆ ಲಾಭದಾಯಕವಲ್ಲದ ಸಂಶೋಧನೆಗಳನ್ನು ಬ್ರಿಟಿಶ ಔಷಧ ವಿಜ್ಞಾನಿಯೊಬ್ಬನು ಹೀಗೆ ಸಮರ್ಥಿಸಿಕೊಂಡಿದ್ದಾನೆ, "ಇಂದಿನ ರೋಗಿಗಳ ಕಲ್ಯಾಣಕ್ಕಾಗಿ, ಭಾವೀ ಪೀಳಿಗೆಯ ನೆಮ್ಮದಿಗಾಗಿ ನಾವು ನಿರ್ವಹಿಸಬೇಕಾದ ಹೊಣೆಯೊಂದಿದೆ. ವಿಜ್ಞಾನಪೀಠಗಳು ಈ ಹೊಣೆ ತಮ್ಮದೆಂದು ವಿಶೇಷವಾಗಿ ಭಾವಿಸಿವೆ. ರೋಗಿಗಳನ್ನು ಪ್ರಯೋಗಗಳಿಗೆ ಗುರಿಪಡಿಸದಿರುವುದು ಅನೈತಿಕವೇನೂ ಅಲ್ಲ." ಆದರೆ ಈ ಅಭಿಪ್ರಾಯ ಉದ್ಧಾಮತನದ್ದೂ ಆತ್ಮವಂಚನೆಯದೂ ಆಗಿದೆಂದು ನನಗೆ ಅನಿಸುತ್ತದೆ. ಸಮಾಜಕ್ಕಾಗಿ ಹುತಾತ್ಮರನ್ನು ಆಯ್ಕೆ ಮಾಡುವ ಅಧಿಕಾರ ಯಾವ ಡಾಕ್ಟರನಿಗೂ ಇಲ್ಲ. ✿



## ಮೀಸೆ ಬೆಳಸುವ ಸ್ಪರ್ಧೆ

ಚಿಕಾಗೊ ವಿಶ್ವವಿದ್ಯಾಲಯದಲ್ಲಿ ಮೀಸೆ ಬೆಳೆಸುವ ಸ್ಪರ್ಧೆಯೊಂದು ಹಿಂದಕ್ಕೆ ನಡೆಯುತ್ತಿತ್ತು. ಕಳೆದ ೩೦ ವರ್ಷಗಳಿಂದ ಈ ಸ್ಪರ್ಧೆ ನಡೆದಿರಲಿಲ್ಲ. ಈ ಸಲ ಆ ಸ್ಪರ್ಧೆಯನ್ನು ಪುನರುಜ್ಜೀವಿಸಿದಾಗ ಹತ್ತೊಂಬತ್ತು ಜನರು ಅದರಲ್ಲಿ ಭಾಗವಹಿಸಿದ್ದರು. ಮೂವತ್ತು ವರ್ಷದ ರಿಚರ್ಡ ಸೌಲಿಗ್ನಾಲ್ ಎಂಬಾತ ವಿಜಯಿಯಾದ. ಆತನ ಮೀಸೆಯ ಒಟ್ಟು ಉದ್ದಳತೆ ಈ ತುದಿಯಿಂದ ಆ ತುದಿಯವರೆಗೆ ಹದಿನಾಲ್ಕು ಅಂಗುಲಗಳಷ್ಟು.

# ಕವನತ್ರಯ

## ನನಗೆ ನಾನು–

ಒಮ್ಮೊಮ್ಮೆ
ಕವಿಯಾಗಿ
ಕಲಿಯಾಗಿ
ವಾಗ್ಮಿವರ
ಅಭಿನಯ ಚತುರ
ಇನ್ನೂ, ಏನೇನೊ ಆಗಿ
ಪೂರ್ಣತೆಯ ಪ್ರತಿಬಿಂಬವಾಗಿ–
ಕಾಣುತ್ತೇನೆ.
ಕೆಲವೊಮ್ಮೆ
ಅದೇ ಶೂನ್ಯವಾಗಿ–
ಏನೂ ಅಲ್ಲವಾಗಿ,
ಮಂಕುಗೊಳ್ಳುತ್ತೇನೆ.
ಜನರು ನನ್ನನು
ಮಹತ್ವದವನೆಂದು
ಏಕೆ ತಿಳಿವುದಿಲ್ಲ?
(ಗೊತ್ತಿರಬೇಕಲ್ಲ!)
ಮತ್ತೆ ಹೇಳಲೇನು?
ಜಗದಲ್ಲಿ
'ನನಗೆ, ನಾನು'.
ಸಾಲದೇನು?

– ಹರಿನಾರಾಯಣ ಮಾಡಾವು

## ಒಂದು ಸಂಜೆ

ಭುವನೆಯ ಕಾರಂಜಿ
ಕಲ್ಪನೆಯ ಬಣ್ಣದಲಿ
ಹೊಳೆವ ಮುತ್ತನು ಮೇಲೆರಚಿತ್ತು ನಲ್ಲೆ!
ನಕ್ಷತ್ರ ರಾಶಿಯಲಿ
ರಂಗ ವೈಚಿತ್ರ್ಯವನು
ರಂಗವಲ್ಲಿಯ ಮೂಡಿದ್ದ ನೀನೇನ ಬಲ್ಲೆ?
ಮಾದಕದ ಸವಿಗಂಪ
ಎಲ್ಲೆಲ್ಲು ಚೆಲ್ಲುತ್ತ
ಬೆರಗುಗಂಗಳ ಬೇಟೆ ನಡೆಸಿದ್ದೆ ನಾನು
ಎತ್ತೆತ್ತ ನೋಡಿದರೂ
ತೃಪ್ತಿ ಇನಿತಿಲ್ಲ
ನಿನ್ನ ಕಣ್ಣಿನ ರೆಪ್ಪೆ ಸುಖದ ಬೋನು
ದಿಟ್ಟ ನಿಟ್ಟಿಡೆಯಿಲ್ಲ
ಕಾಯ ಪದ್ಮಿನಿ ಲಾಸ್ಯ
ಕೇಳಿಯಲಿ ಮಿಂದೆದ್ದ ಮಿಥುನ ಹಾಸ್ಯ
ಉಲ್ಲಾಸ ಸಾಗರದ
ಮೋಜಿನೀಜಾಟದಲಿ
ನಾನು ಏಕಾಂಗಿ ಎಂತಹ ಉಪಹಾಸ್ಯ?
ಅದಕಾಗಿ ಕೇಳುತಿಹೆ
ಬರಬಾರದೇ ನೀನು
ಇಂದು, ಈಗ ಇಲ್ಲಿ, ನನ್ನ ಜೊತೆಯಲ್ಲಿ
ನನ್ನ ದನಿ ಕೇಳದಿರೆ
ಉತ್ತರಿಸಲಾಗದಿರೆ
ನಾನು ಏಕಾಂಗಿ, ಅದಕಾಗಿ ಛಳಿ...ಛಳಿ...!!

— ಗೋಪಿ

## ಭಿಕ್ಷುಕರು

ಮನೆ–ಮಠ
ಆಸ್ತಿ–ದುಡ್ಡು ಇಂಥ
ಎಂಥ ಬಂಡವಾಳವಿಲ್ಲದ
ಜೊತೆಗೆ ಯಾವ ಯೋಚನೆ ಇಲ್ಲದೆ
ಕಷ್ಟ ಪಡದೆ
ನಾವು
ಈ
ಬರಗಾಲದಲ್ಲಿಯೂ, ಸುಖವಾಗಿ
ಮೂರ್ಮಾಲ್ಕು ಹೊತ್ತು
ತರ-ತರದ ಮೃಷ್ಟಾನ್ನವನ್ನುಂಡು
ಕೊಂಡು,...
ತಾವಿದ್ದ ನೆಲಕ್ಕೆ
ಕುಡಿಯುವ ಜಲಕ್ಕೆ
ಉಸಿರಾಡುವ ಗಾಳಿಗೆ
ಭೂಮಿ ತಾಯಿಗೆ–ದೇಶಕ್ಕೆ
ತಮ್ಮಿಂದ ಕೊಡಬೇಕಾದಂತಹ
ಬಾಡಿಗೆಯನ್ನು ಕೊಡುತ್ತೇವೆ
"ಮಕ್ಕಳನ್ನು"
ಹೆರುವುದರ ಮೂಲಕ

—ವಿ. ಪಿ. ತಿಪ್ಪೇಸ್ವಾಮಿ

● ಜಿ. ಟಿ. ನಾರಾಯಣರಾವ್

# ಗಣಿತ ವಿಜ್ಞಾನಿ ರಾಮಾನುಜನ್

ತಮಿಳು ನಾಡಿನ ಕುಂಭಕೋಣಮ್ ಪಟ್ಟಣ. ಶ್ರೀನಿವಾಸ ಅಯ್ಯಂಗಾರ್ಯರು ಅಲ್ಲಿನ ಬಟ್ಟೆ ಅಂಗಡಿಯೊಂದರಲ್ಲಿ ಗುಮಾಸ್ತರು. ಕೋಮಲವಮ್ಮಾಳ್ ಇವರ ಹೆಂಡತಿ. ಈ ದಂಪತಿಗಳ ಬದುಕು ಬಲು ಬಡತನದ್ದಾದರೂ ಇವರು ಆಸ್ತಿಕ ಶ್ರೀಮಂತರು. ನಾಮಕ್ಕಲ್ ಕ್ಷೇತ್ರದ ನಾಮಗಿರಿ ದೇವಿಯ ಪರಮ ಭಕ್ತರು. ಇವರ ಮೊದಲ ಕೂಸಿನ ಅವತಾರ ೧೮೮೭ ರ ಡಿಸೆಂಬರ್ ೨೨ ರಂದು ಆಯಿತು. ಈ ಮಗುವೇ ಮುಂದೆ ಜಗತ್ಪ್ರಸಿದ್ಧ ಗಣಿತ ವಿದ್ವಾಂಸ ಶ್ರೀನಿವಾಸ ರಾಮಾನುಜನ್ ಆಗುವುದೆಂದು ಆಗ ಯಾರೂ ಕನಸು ಸಹ ಕಂಡಿರಲಾರರು. ಭಾರತದ ಪ್ರಾಚೀನ ಗಣಿತ ಪರಂಪರೆ ಹಿಂಗಿ ಹೋಗಿ ಆ ವೇಳೆಗೆ ಹಲವು ಶತಮಾನಗಳೇ ಸಂದು ಹೋಗಿದ್ದುವು. ಇನ್ನು ಮನೆತನದಲ್ಲಿಯೋ ವ್ಯವಹಾರ ಪ್ರಪಂಚದ ನೀರಸ ಅಂಕೆ ಸಂಖ್ಯೆಗಳ ಹೊರಗಿನ ಗಣಿತ ಪ್ರಪಂಚದ ಅರಿವೇ ಯಾರಿಗೂ ಇರಲಿಲ್ಲ. ಇಂಥ ಪರಿಸರದಲ್ಲಿ ಈ ಗಣಿತ ಬ್ರಹ್ಮನ ಉಗಮವಾದದ್ದು ನಿಸರ್ಗದ ಅನೇಕ ವಿಸ್ಮಯಗಳಲ್ಲಿ ಒಂದು.

ರಾಮಾನುಜನ್ ಓರ್ವ ಹುಟ್ಟು ಗಣಿತಜ್ಞ. ತೀರ ಎಳವೆಯಲ್ಲೇ ಅವರಿಗೆ ಮೂಡಿದ ಪ್ರಶ್ನೆಯಿದು "ಗಣಿತದಲ್ಲಿ ಪರಮೋಚ್ಚ ಸತ್ಯ ಏನು?" ಅವರು ಮೂರನೆಯ ಫಾರಂ ವಿದ್ಯಾರ್ಥಿ ಆಗಿದ್ದಾಗ ತರಗತಿಯಲ್ಲಿ ನಡೆದ ಒಂದು ಘಟನೆ ವರದಿ ಆಗಿದೆ. ಭಾಗಾಕಾರದ ಕ್ರಮವನ್ನು ವಿವರಿಸುತ್ತಿದ್ದ ಉಪಾಧ್ಯಾಯರು ಯಾವುದೇ ಸಂಖ್ಯೆಯನ್ನು ಅದರಿಂದಲೇ ಭಾಗಿಸಿದಾಗ ದೊರೆಯುವ ಉತ್ತರ ೧ ಎಂದು ಸಮಾರೋಪಿಸಿದರು. "ಹಾಗಾದರೆ ೦ ಯನ್ನು ೦ ಯಿಂದ ಭಾಗಿಸಿದಾಗ ಸಹ ೧ ದೊರೆಯುವುದೇ?" ರಾಮಾನುಜನ್ ತೀರ ಸಹಜವಾಗಿ ಎತ್ತಿದ ಈ ಪ್ರಶ್ನೆಗೆ ಉಪಾಧ್ಯಾಯರು ಏನು ಉತ್ತರ ನೀಡಿದರು ಎನ್ನುವುದು ತಿಳಿದಿಲ್ಲ.

ಇಂಥ ಮೂಲಭೂತ ಗಣಿತ ಸಂದೇಹಗಳು ಅವರಿಗೆ ಪ್ರವಾಹ ರೂಪದಲ್ಲಿ ಬರತೊಡಗಿದುವು. ಇಂದಿನ ಬಿ. ಎಸ್‌ಸಿ. ಗಣಿತದ ಪ್ರಮುಖಾಂಶಗಳನ್ನು ಅವರು ಸ್ವಂತ ಸಂಶೋಧನೆ ಚಿಂತನೆಗಳಿಂದ ಇಲ್ಲವೇ ಕೈಗೆ ದೊರೆತ ಗಣಿತ ಗ್ರಂಥಗಳ ಅವಲೋಕನದಿಂದ ತಿಳಿದುಕೊಂಡಿದ್ದರು (೧೯೦೨). ನಾಮಗಿರಿ ದೇವಿ ತನಗೆ ಕನಸಿನಲ್ಲಿ ಕಾಣಿಸಿಕೊಂಡು ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಿದ್ದಳೆಂದು ರಾಮಾನುಜನ್ ಒಮ್ಮೆ ಹೇಳಿದ್ದರು. ನಿದ್ದೆ ತಿಳಿದೆದ್ದಾಗ ಅವರು ಮಾಡುತ್ತಿದ್ದ ಮೊದಲ ಕಾರ್ಯವೆಂದರೆ ಈ ಎಲ್ಲ ಪರಿಹಾರಗಳನ್ನೂ ತಮ್ಮ ಅಮೂಲ್ಯ ಟಿಪ್ಪಣಿ ಪುಸ್ತಕದಲ್ಲಿ ಗುರುತಿಸುತ್ತಿದ್ದುದು. ಬಳಿಕ ನಿಧಾನವಾಗಿ ಅವನ್ನು ಸರಿಯೇ ಅಲ್ಲವೇ ಎಂದು ತಾಳೆ ನೋಡುತ್ತಿದ್ದರು. ಪ್ರತಿಯೊಂದು

ಫಲಿತಾಂಶಕ್ಕೊ ನಿಷ್ಕೃಷ್ಟವಾದ ಸಾಧನೆಯನ್ನು ಒದಗಿಸುವುದು ಮಾತ್ರ ಅವರಿಗೆ ಸಾಧ್ಯವಾಗುತ್ತಿರಲಿಲ್ಲ.

ಮದರಾಸು ವಿಶ್ವವಿದ್ಯಾಲಯದ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ರಾಮಾನುಜನ್ ಪ್ರಥಮ ಶ್ರೇಣಿಯನ್ನು ಪಡೆದದ್ದರಿಂದ ಅವರಿಗೆ ಮುಂದಿನ ಅಧ್ಯಯನ ನಡೆಸಲು ವಿದ್ಯಾರ್ಥಿ ವೇತನ ದೊರೆಯಿತು. ಎಫ್. ಎ. ತರಗತಿಗಳಲ್ಲಿ ಅವರು ಗಣಿತದ ಜೊತೆಗೆ ಇತರ ಹಲವಾರು ವಿಷಯಗಳನ್ನು ಸಹ ಕಡ್ಡಾಯವಾಗಿ ಕಲಿಯಲೇಬೇಕಾಗಿತ್ತು. ಆದರೆ ಅವರ ಆಸಕ್ತಿ ಇದ್ದುದು ಗಣಿತದಲ್ಲಿ ಮಾತ್ರ. ಸ್ವತಃ ಅಧ್ಯಾಪಕರೇ ಉನ್ನತ ಗಣಿತ ಸಮಸ್ಯೆಗಳನ್ನೂ ಸಂಶೋಧನ ಪ್ರಬಂಧಗಳನ್ನೂ ಅರ್ಥವಿಸುವುದರಲ್ಲಿ ರಾಮಾನುಜನ್ ಅವರ ನೆರವನ್ನು ಪಡೆಯುವುದಿತ್ತು. ಪರೀಕ್ಷೆ ಮುಗಿಯಿತು. ಗಣಿತ ಪತ್ರಿಕೆಯಲ್ಲೇನೋ ಉತ್ತಮ ಅಂಕಗಳೂ ಬಂದುವು. ಆದರೆ ಇತರ ಕಡ್ಡಾಯ ಪತ್ರಿಕೆಗಳಲ್ಲಿ ಕನಿಷ್ಠ ಅಂಕಗಳು ಸಹ ಬರಲಿಲ್ಲ. ಆದ್ದರಿಂದ ಈ ತರುಣ ಮೇಧಾವಿಗೆ ಲಭಿಸಿದ 'ಗೌರವ' ಎಫ್. ಎ. ಪರೀಕ್ಷೆಯಲ್ಲಿ ಎಫ್ ಎ ಐ ಎಲ್ (೧೯೦೭).

೧೯೦೭–೧೧ ರ ಅಂತರವನ್ನು ರಾಮಾನುಜನ್ ಅವರ ಬಾಳಿನ ತೀವ್ರ ಪಟುತ್ವದ ಮೊದಲ ಅವಧಿ ಎಂದು ಗುರುತಿಸಿದ್ದಾರೆ. ಆಗ ಅವರನ್ನು ಆಂತರಿಕ ಜ್ಯೋತಿಯೊಂದು ಮುನ್ನಡೆಸುತ್ತಿರುವಂತೆ ತೋರುತ್ತಿತ್ತು. ಅಂದು ಅವರು ಆಸಕ್ತಿ ತಳೆದಿದ್ದ ಕ್ಷೇತ್ರಗಳೆಂದರೆ ಹೈಪರ್ ಜೊಮೆಟ್ರಿಕ್ ಶ್ರೇಣಿಗಳು, ಅವಿಭಾಜ್ಯ ಹಾಗೂ ಸಂಯುಕ್ತ ಸಂಖ್ಯೆಗಳು, ಮಾಯಾ ಚೌಕಗಳು, ಸಂತತ ಭಿನ್ನರಾಶಿಗಳು, ಸಂಖ್ಯೆಗಳ ವಿಭಾಗೀಕರಣ, ಎಲಿಪ್ಟಿಕ್ ಅನುಕಲಗಳು, ಇತ್ಯಾದಿ. ಇವು ಆ ವೇಳೆಗಾಗಲೇ ಆಧುನಿಕ ಪಾಶ್ಚಾತ್ಯ ಗಣಿತದಲ್ಲಿ ಬೆಳೆದು ವಿಕಸಿಸಿದ್ದ ವಿವಿಧ ಪರಿಕಲ್ಪನೆಗಳು. ಆದರೆ ರಾಮಾನುಜನ್ ಅವರಿಗೆ ಈ ಯಾವ ವಿವರವೂ ತಿಳಿದಿರದಿದ್ದ—ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಇವು ಇದ್ದೀತೆಂಬ ಅರಿವು ಕೂಡ ಇರದಿದ್ದ—ದಿವಸಗಳವು.

ಅಂದಿನ ಸಂಪ್ರದಾಯಾನುಸಾರ ರಾಮಾನುಜನ್ ಅವರ ಮದುವೆಯನ್ನು ಜಾನಕಿ ಅಮ್ಮಾಳ್ ಎಂಬ ಒಂಬತ್ತು ವರ್ಷದ ಮಗುವಿನೊಡನೆ ಮಾಡಿದರು (೧೯೦೯). ಗೃಹಸ್ಥ, ಬಡವ, ಮುಗ್ಧ, ಸದಾ ಗಣಿತಾಸಕ್ತ ರಾಮಾನುಜನ್ ಸರ್ಕಾರದ ಒಂದು ಇಲಾಖೆಯಲ್ಲಿ ಗುಮಾಸ್ತಿಕೆ ಪಡೆಯಲು ಅಲೆದಾಡಿದರು. ಅವರ ಗಣಿತ ಪ್ರತಿಭೆಯನ್ನು ಗುರುತಿಸಿದ ಕೆಲವು ಹಿರಿಯ ಅಧಿಕಾರಿಗಳು ಮದರಾಸಿನ ಅಕೌಂಟೆಂಟ್-ಜನರಲ್ ಅವರ ಕಚೇರಿಯಲ್ಲಿ ಒಂದು ಹಂಗಾಮೀ ಗುಮಾಸ್ತಿಕೆಯನ್ನು ದೊರಕಿಸಿ ಕೊಟ್ಟರು. ಇದರ ಅವಧಿ ಮುಗಿದೊಡನೆ ಮತ್ತೆ ನಿರುದ್ಯೋಗ, ಹೊಟ್ಟೆ ಪಾಡಿಗಾಗಿ ಅಲೆತ. ಇಂಥ ಒಂದು ದಿವಸ ಅವರಿಗೆ ತಮ್ಮ ಶಾಲಾ ದಿನಗಳ ಸಹಪಾಠಿಯೊಬ್ಬನ ಭೇಟಿ ಆಕಸ್ಮಾತ್ತಾಗಿ ಆಯಿತು (೧೯೧೦). ಆತನ ವಿಶ್ವಪ್ರಯತ್ನದ



ಫಲವಾಗಿ ರಾಮಾನುಜನ್ ಭಾರತೀಯ ಗಣಿತ ಸಂಘದ ಅಧ್ಯಕ್ಷರೂ ನೆಲ್ಲೂರು ಜಿಲ್ಲೆಯ ಕಲೆಕ್ಟರರೂ ಆಗಿದ್ದ ದಿವಾನ್ ಬಹದ್ದೂರ್ ರಾಮಚಂದ್ರರಾಯರನ್ನು ನೆಲ್ಲೂರಿನಲ್ಲಿ ಭೇಟಿ ಆಗಬೇಕೆಂದು ಏರ್ಪಾಡಾಯಿತು. ಆ ಸನ್ನಿವೇಶವನ್ನು ಸ್ವತಃ ರಾಮಚಂದ್ರ ರಾಯರೇ ಈ ರೀತಿ ನಿರೂಪಿಸಿದ್ದಾರೆ: "ಕೆಲವು ವರ್ಷಗಳ ಹಿಂದಿನ ಪ್ರಸಂಗ. ಗಣಿತ ಜ್ಞಾನದಲ್ಲಿ ತೀರ ಎಳೆ ಮಗುವಿನಂತಿದ್ದ ನನ್ನ ಸಂಬಂಧಿ ಹುಡುಗನೊಬ್ಬ 'ಕಕ್ಕಾ! ಗಣಿತ ವಿಚಾರವನ್ನೇ ಮಾತನಾಡುತ್ತಿರುವ ಒಬ್ಬ ಆಗಂತುಕ ನನ್ನಲ್ಲಿಗೆ ಬಂದಿದ್ದಾನೆ. ಅವನು ಹೇಳುವುದು ನನಗೆ ಅರ್ಥವಾಗುತ್ತಿಲ್ಲ. ಅವನ ಮಾತಿನಲ್ಲಿ ಏನಾದರೂ ಹುರುಳಿದೆಯೇ ಎಂದು ನೀವು ನೋಡುತ್ತೀರಾ?' ಎಂದು ಕೇಳಿದ. ಗಣಿತ ಧೀಮಂತಿಕೆಯಲ್ಲಿ ಪರಿಪೂರ್ಣನಾಗಿದ್ದ ನಾನು ರಾಮಾನುಜನ್‌ನಿಗೆ ನನ್ನನ್ನು ಬಂದು ನೋಡಲು ಪರವಾನಿಗೆಯನ್ನು ಅನುಗ್ರಹಿಸಿದೆ. ಬಂದವನು ಕುಳ್ಳ, ಒರಟ, ದಪ್ಪಗಿದ್ದ, ಗಡ್ಡ ಕೆರೆದಿರಲಿಲ್ಲ, ಅಷ್ಟೇನೂ ಮಡಿಯಾಗಿಯೂ ಇರಲಿಲ್ಲ. ಆದರೆ ಒಂದು ಗಮನಾರ್ಹ ವೈಲಕ್ಷಣ್ಯ ನನ್ನನ್ನು ಆಕರ್ಷಿಸಿತು—ಆತನ ಉಜ್ವಲ ಕಣ್ಣುಗಳು. ಸವೆದು ಹೋಗಿದ್ದ ಒಂದು ಟಿಪ್ಪಣಿ ಪುಸ್ತಕವನ್ನು ಅವನು ಕಂಕುಳಡಿಯಲ್ಲಿ ಅಮುಕಿ ಹಿಡಿದಿದ್ದ. ಅವನ ಬಡತನ ಅತಿ ದಾರುಣವಾಗಿತ್ತು. ಯಾವ ವಿಧವಾದ ಮನ್ನಣೆಗೂ ಅವನು ಹಾತೊರೆದವನಲ್ಲ. ಅವನಿಗೆ ಬೇಕಾದದ್ದು ಬಿಡುವು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಅವನಿಗೆ ಯಾವ ಶ್ರಮವೂ ಆಗದೆ ಸರಳ ಆಹಾರ ದೊರೆಯಬೇಕು ಮತ್ತು ಕನಸುಗಳನ್ನು ಕಾಣಲು ಅವಕಾಶ ಒದಗಬೇಕು. ರಾಮಾನುಜನ್ ತನ್ನ ಟಿಪ್ಪಣಿ ಪುಸ್ತಕವನ್ನು ತೆರೆದು ಅದರಲ್ಲಿದ್ದ ಕೆಲವು ಆವಿಷ್ಕಾರಗಳನ್ನು ನನಗೆ ವಿವರಿಸಲು ತೊಡಗಿದ. ಇಲ್ಲೇನೋ ಅಸಾಮಾನ್ಯವಾದದ್ದು ಇದೆ ಎಂದು ತತ್‌ಕ್ಷಣ ನನಗೆ ಹೊಳೆಯಿತು. ಆದರೆ ಅವನು ಹೇಳುತ್ತಿರುವುದು ಸುಬದ್ಧವೇ ಅಬದ್ಧವೇ ಎಂಬುದನ್ನು ತೀರ್ಮಾನಿಸಲು ನನ್ನ ಜ್ಞಾನ ಸಾಲದಾಗಿತ್ತು. ತೀರ್ಪನ್ನು ತಡೆ ಹಿಡಿದು ಪುನಃ ಬಂದು ನನ್ನನ್ನು ಕಾಣುವಂತೆ ಅವನಿಗೆ ಹೇಳಿದೆ. ನನಗೆ ಅದೆಷ್ಟು ಸ್ವಲ್ಪ ತಿಳಿದಿತ್ತು ಎನ್ನುವ ಅಂಶ ಆ ವೇಳೆಗಾಗಲೇ ಅವನಿಗೆ ಮನವರಿಕೆ ಆಗಿತ್ತು. ಹೀಗಾಗಿ ಕೆಲವು ಸರಳ ಫಲಿತಾಂಶಗಳನ್ನು ಮಾತ್ರ ನನಗೆ ತೋರಿಸಿದ. ಇವು ಪ್ರಚಲಿತ ಗ್ರಂಥಗಳನ್ನು ಬಹುವಾಗಿ ಮೀರಿದಂಥವಾಗಿದ್ದುವು. ಈತ ಒಬ್ಬ ವಿಲಕ್ಷಣ ಪುರುಷ ಎನ್ನುವುದರಲ್ಲಿ ನನಗೆ ಸಂದೇಹವೇ ಉಳಿಯಲಿಲ್ಲ. ಅವನಿಗೆ ಏನು ಬೇಕಾಗಿದೆ ಎಂದು ಕೇಳಿದೆ. ತನ್ನ ಸಂಶೋಧನೆಗಳನ್ನು ಮುಂದುವರಿಸಿಕೊಂಡು ಹೋಗುವಷ್ಟರ ಮಟ್ಟಿಗೆ ಬದುಕಿಕೊಂಡಿರಲು ಆಹಾರ ಬೇಕೆಂದು ಅವನು ಕೋರಿದ."

ಇಂಥ ಅದ್ಭುತ ಮೇಧಾವಿ ಸರ್ಕಾರೀ ಖಾತೆಯೊಂದರ ಬೌದ್ಧಿಕತಾವಿಹೀನ ಮೂಲೆಯಲ್ಲಿ ಕೊಳೆತು ನಶಿಸಿ ಹೋಗಬಾರದೆಂದು ಆಗ ರಾಮಚಂದ್ರರಾಯರು ಮನಸಾರೆ ನಿರ್ಧರಿಸಿದರು. ತಾನು ಪ್ರತಿ ತಿಂಗಳೂ ಒಂದಿಷ್ಟು ಮೊಬಲಗನ್ನು ಕೊಡುವುದಾಗಿಯೂ ರಾಮಾನುಜನ್ ಅದನ್ನು ಸ್ವೀಕರಿಸಿ ಮದರಾಸು ನಗರದಲ್ಲಿ ಇದ್ದುಕೊಂಡು ಸಂಶೋಧನೆಗಳನ್ನು ಮುಂದುವರಿಸಬೇಕಾಗಿಯೂ ಅವರು ಸೂಚಿಸಿದರು. ಇಂಥ ಔದಾರ್ಯಪೂರಿತ ಉತ್ತೇಜನದಿಂದಾಗಿ ರಾಮಾನುಜನ್ ಅವರಿಗೆ ತಾತ್ಕಾಲಿಕ ಪರಿಹಾರ ಒದಗಿತು. (೧೯೧೧–೧೨) ಆದರೆ ಸ್ವಾಭಿಮಾನಿ ರಾಮಾನುಜನ್ ಇತರರ ಔದಾರ್ಯದ ಮೇಲೆಯೇ ಬಲುಕಾಲ ಬದುಕನ್ನು ಮುಂದುವರಿಸಲು ಒಪ್ಪಲಿಲ್ಲ. ಪುನಃ ಹಿರಿಯರ ಶಿಫಾರಸುಗಳ ಫಲವಾಗಿ ಇವರಿಗೆ ಮದರಾಸಿನ ಪೋರ್ಟ್ ಟ್ರಸ್ಟಿನಲ್ಲಿ ಗುಮಾಸ್ತಿಕೆ ದೊರೆಯಿತು (೧೯೧೨). ಹೀಗೆ ಒಂದು ಗೊತ್ತಾದ ಹುದ್ದೆ, ಸಂಬಳ, ಜೀವನ ಯಾಪನೆಗೆ ಅನುಕೂಲ ಪರಿಸರ ಸ್ಥಿರವಾದ್ದರಿಂದ ಅವರು ನಿರಾಡಂಬರವಾಗಿ ನಿರಾತಂಕವಾಗಿ ಬದುಕು ನಡೆಸಲು ಸಾಧ್ಯವಾಯಿತು;

ಗಣಿತಾಧ್ಯಯನವನ್ನು ಅಧಿಕೋತ್ಸಾಹದಿಂದ ಮುಂದುವರಿಸಲು ಅನುಕೂಲವಾಯಿತು. ಇದೇ ಸುಮಾರಿಗೆ ಭಾರತೀಯ ಗಣಿತ ಸಂಘದ ಸಂಶೋಧನ ಪತ್ರಿಕೆ ರಾಮಾನುಜನ್ ಅವರ ಗಣಿತ ಪ್ರಬಂಧಗಳನ್ನು ಪ್ರಕಟಿಸಲು ತೊಡಗಿತು. ೧೯೧೧ ರ ಫೆಬ್ರುವರಿ ಸಂಚಿಕೆಯಲ್ಲಿ ಮೊದಲ ಪ್ರಬಂಧ ಬೆಳಕು ಕಂಡಿತು.

ಪೋರ್ಟ್ ಟ್ರಸ್ಟಿನ ಹಿರಿಯ ಅಧಿಕಾರಿಗಳಿಗೆಲ್ಲರಿಗೂ ರಾಮಾನುಜನ್ ಅವರ ವಿಚಾರದಲ್ಲಿ ಅಪಾರ ಅನುಕಂಪ ಪ್ರೀತಿ ಇದ್ದುವು. ಈ ಮಹಾನುಭಾವನ ನೈಜ ಮೌಲ್ಯವನ್ನು ಅಳೆಯಲು ಸಮರ್ಥರಾದ ಓರ್ವ ವ್ಯಕ್ತಿ ಎಂದರೆ ಅಂತಾರಾಷ್ಟ್ರೀಯ ಖ್ಯಾತ ಗಣಿತ ವಿದ್ವಾಂಸ ಹಾಗೂ ಕೇಂಬ್ರಿಜಿನ ಟ್ರಿನಿಟಿ ಕಾಲೇಜಿನ ಗಣಿತ ಪ್ರಾಧ್ಯಾಪಕ ಜಿ. ಎಚ್. ಹಾರ್ಡಿ (೧೮೭೭–೧೯೪೭) ಎಂದು ಇವರೆಲ್ಲರೂ ಒಮ್ಮತದಿಂದ ನಿರ್ಧರಿಸಿದರು. ಈ ಹಿರಿಯ ಮಿತ್ರರ ಸಲಹೆ ಮೇರೆಗೆ ರಾಮಾನುಜನ್ ಹಾರ್ಡಿಯವರಿಗೆ ಒಂದು ಸ್ವಪರಿಚಯ ಪತ್ರವನ್ನು ಬರೆದರು (ಜನವರಿ ೧೬, ೧೯೧೩). "ನಾನು ಮದರಾಸಿನ ಪೋರ್ಟ್ ಟ್ರಸ್ಟ್ ಕಛೇರಿಯ ಲೆಕ್ಕ ಪತ್ರ ವಿಭಾಗದಲ್ಲಿ ೨೦ ಪೌಂಡ್ ವಾರ್ಷಿಕ ತಲಬನ್ನು ಪಡೆಯುತ್ತಿರುವ ಓರ್ವ ಕಾರಕೂನ ಎಂದು ತಮಗೆ ಅರಿಕೆ ಮಾಡಿಕೊಳ್ಳಲು ಅನುಮತಿ ಕೋರುತ್ತೇನೆ. ಈಗ ನನ್ನ ವಯಸ್ಸು ಸುಮಾರು ಇಪ್ಪತ್ತಮೂರು ವರ್ಷಗಳು. ನಾನು ವಿಶ್ವವಿದ್ಯಾಲಯದ ಶಿಕ್ಷಣ ಪಡೆದವನಲ್ಲ. ಪ್ರೌಢ ಶಾಲೆಯ ಸಾಧಾರಣ ವಿದ್ಯೆಯನ್ನು ಮಾತ್ರ ಪಡೆದಿರುವೆನಷ್ಟೆ. ಶಾಲೆಯನ್ನು ಬಿಟ್ಟ ಬಳಿಕ ಬಿಡುವೇಳೆಯಲ್ಲೆಲ್ಲ ನಾನು ಗಣಿತಾನ್ವೇಷಣೆಯನ್ನೇ ಮಾಡಿಕೊಂಡು ಬಂದಿರುವೆನು. ವಿಶ್ವವಿದ್ಯಾಲಯದ ಶಿಕ್ಷಣ ರಂಗದಲ್ಲಿ ಅನುಸರಿಸುವ ಸಾಂಪ್ರದಾಯಿಕ ಕ್ರಮಬದ್ಧ ಶಿಕ್ಷಣ ವಿಧಾನದ ಮೂಲಕ ನಡೆದು ಬಂದವ ನಾನಲ್ಲ. ನಾನು ಹೊಸ ಹಾದಿಯೊಂದನ್ನು ನನಗಾಗಿ ರಚಿಸಿಕೊಳ್ಳುತ್ತಿದ್ದೇನೆ. ಅಪಸರಣ ಶ್ರೇಣಿಗಳ ಸಾರ್ವತ್ರಿಕ ರೂಪಗಳನ್ನು ನಾನು ವಿಶೇಷವಾಗಿ ಅಧ್ಯ

## ಗಣಿತಜ್ಞರಿಗೂ ಕಬ್ಬಿಣದ ಕಡಲೆ

ಮುಂಬಯಿಯ ಟಾಟ ಮೂಲ ಸಂಶೋಧನ ಮಂದಿರದ ಗಣಿತ ಪ್ರಾಧ್ಯಾಪಕ ಪ್ರೊ. ಕೆ. ಜಿ. ರಾಮನಾಥನ್ ಒಂದು ಲೇಖನದಲ್ಲಿ (೧೯೭೪) ಹೀಗೆ ಬರೆದಿದ್ದಾರೆ: "...ಮೇಧಾವಿಯಾದ ಖಾಸಗಿ ಓದುಗನೊಬ್ಬನಿಗೆ, ಅಷ್ಟೇಕೆ; ಕಾಲೇಜು ಗಣಿತದಲ್ಲಿ ಸ್ವಲ್ಪವಾದರೂ ಪ್ರವೇಶವಿರುವಾತನಿಗೆ ಕೂಡ, ರಾಮಾನುಜನ್ ದಾಳಿ ಮಾಡಿದ ಇಲ್ಲವೇ ಬಿಡಿಸಿದ ಕೆಲವಾದರೂ ಸುಂದರ ಸಮಸ್ಯೆಗಳನ್ನು, ಮುಖ್ಯವಾಗಿ ಅವರು ಸೃಷ್ಟಿಸಿದಂಥ ಹಲವಾರು ರಮಣೀಯ ಮತ್ತು ಗಮನಾರ್ಹ ಊಹೆಗಳನ್ನು— ಇವು ಈಚೆಗಿನ ಕೆಲವು ವರ್ಷಗಳಲ್ಲಿ ಮಾತ್ರ ಬಿಡಿಸಲ್ಪಟ್ಟಿವೆ— ಶ್ರುತಪಡಿಸಿ 'ಪೂರ್ವದ ಒಂದು ಅದ್ಭುತವನ್ನಲ್ಲ, ಇಲ್ಲವೇ ಸ್ಫೂರ್ತಿವಂತ ಹೆಡ್ಡನನ್ನಲ್ಲ... ಬದಲು ಮಹಾ ಗಣಿತವಿದನಾದ ತರ್ಕಸಮಂಜಸ ಮನುಷ್ಯನನ್ನು" ಪ್ರದರ್ಶಿಸುವುದು ಈ ಕಿರಿಯ ಬರವಣಿಗೆಯಲ್ಲಿ ಹೆಚ್ಚುಕಡಿಮೆ ಅಸಾಧ್ಯವೆಂದೇ ಹೇಳಬಹುದು...ರಾಮಾನುಜನ್ ಸೃಷ್ಟಿಸಿದ ಪ್ರಧಾನ ಸಮಸ್ಯೆಗಳ ಪೈಕಿ ಹೆಚ್ಚಿನವು ೧೯೭೩ ರ ಹೊತ್ತಿಗೆ ಪರಿಹರಿಸಲ್ಪಟ್ಟಿವೆ. ಇವುಗಳ ಸಾಧನೆಗಳನ್ನು ಸರಳೀಕರಿಸಿ ಸಂಖ್ಯಾ ಸಿದ್ಧಾಂತದ ವಿದ್ಯಾರ್ಥಿಗಳಿಗೆ ಒದಗಿಸುವುದು ಒಂದು ಯೋಗ್ಯ ಕ್ರಮ. ಬಹುಶಃ ಭವಿಷ್ಯದ ಗಣಿತಜ್ಞರಿಗೆ ಇದೊಂದು ಸವಾಲಾದೀತು."

ಯಿಸಿದ್ದೇನೆ. ಈ ರಂಗದಲ್ಲಿ ನಾನು ಪಡೆದಿರುವ ಫಲಿತಾಂಶಗಳನ್ನು ಸ್ಥಳೀಯ ಗಣಿತಜ್ಞರು 'ಅದ್ಭುತ' ಎಂದಿರುವರು...ಈ ಕಾಗದದೊಂದಿಗೆ ನಾನು ಲಗತ್ತಿಸಿರುವ ಪ್ರಬಂಧಗಳನ್ನು ತಾವು ಪರಾಂಬರಿಸಿ ನೋಡಬೇಕೆಂದು ಕೋರುತ್ತೇನೆ. ನಾನು ಬಡವ. ಈ ಪ್ರಮೇಯಗಳಲ್ಲಿ ಏನಾದರೂ ಹುರುಳಿದೆ ಎಂದು ನಿಮಗೆ ಅನ್ನಿಸಿದರೆ ಅವನ್ನು ಪ್ರಕಟಿಸಬೇಕೆಂದು ಬೇಡುತ್ತೇನೆ. ನನ್ನ ಅನ್ವೇಷಣೆಗಳ ವಿವರಗಳನ್ನಾಗಲೀ ನಾನು ಪಡೆದಿರುವ ಉತ್ಪನ್ನಗಳನ್ನಾಗಲೀ ಇಲ್ಲಿ ನಮೂದಿಸಿರುವುದಿಲ್ಲ. ಬದಲು ನಾನು ಯಾವ ಜಾಡು ಹಿಡಿದಿದ್ದೇನೆ ಎನ್ನುವುದನ್ನು ಸೂಚಿಸಿದ್ದೇನೆ. ನಾನು ಅನನುಭವಿ. ನೀವು ನೀಡಬಹುದಾದ ಯಾವ ಹಿತೋಕ್ತಿಯೂ ಅಮೂಲ್ಯವಾದದ್ದೆಂದು ನಾನು ಸ್ವೀಕರಿಸುತ್ತೇನೆ. ತೊಂದರೆ ಕೊಟ್ಟಿದ್ದೇನೆ. ನನ್ನನ್ನು ಮನ್ನಿಸಬೇಕಾಗಿ ವಿನಂತಿ." ಈ ಪತ್ರದೊಡನೆ ಲಗತ್ತಿಸಿದ್ದ

## ರಾಮಾನುಜನ್ ಬಗ್ಗೆ ಹಾರ್ಡಿ

೧೯೩೬ರಲ್ಲಿ ಹಾರ್ಡಿಯವರು ಹಾರ್ವರ್ಡಿನಲ್ಲಿ ರಾಮಾನುಜನ್ ಅವರನ್ನು ಕುರಿತು ಮಾಡಿದ ಒಂದು ಉಪನ್ಯಾಸದಲ್ಲಿ ಹೀಗೆ ಹೇಳಿದ್ದಾರೆ: "ನಿಜವಾಗಿಯೂ ಬಲು ಗುರುತರವಾದ ಒಂದು ಕಾರ್ಯದ ನಿರ್ವಹಣೆಯನ್ನು ನಾನು ನನಗೆ ವಿಧಿಸಿಕೊಂಡಿದ್ದೇನೆ. ಇದು ಏಕೆ ವಿಫಲವಾದೀತು ಎಂಬುದನ್ನು ಸಮರ್ಥಿಸಬೇಕು ಎಂದು ನಾನು ನಿರ್ಧರಿಸಿದುದಾದರೆ ಈ ಕಾರ್ಯ ಅಸಾಧ್ಯ ಎಂದೇ ಹೇಳಬೇಕಾಗುತ್ತದೆ. ಗಣಿತದ ಈಚೆಗಿನ ಇತಿಹಾಸದಲ್ಲಿ ಅತ್ಯಂತ ವರ್ಣಮಯ ವ್ಯಕ್ತಿಯನ್ನು ಕುರಿತು ನಾನು ಈ ವರೆಗೆ ಎಂದೂ ಮಾಡಿರದಂಥ ಸಕಾರಣೀಯವಾದ ಒಂದು ಅಂದಾಜನ್ನು ರೂಪಿಸಬೇಕು, ಮಾತ್ರವಲ್ಲ, ನೀವೂ ಇಂಥ ಒಂದು ಅಂದಾಜನ್ನು ರೂಪಿಸಿಕೊಳ್ಳಲು ನಾನು ನೆರವಾಗಬೇಕು. ಇವರ ಜೀವನವೋ ಅದು ವಿರೋಧಾಭಾಸಗಳ ಮತ್ತು ಅಸಾಂಗತ್ಯಗಳ ಒಂದು ಕಂತೆಯೇ ಎಂದು ಭಾಸವಾಗುತ್ತದೆ. ನಾವು ಸಾಧಾರಣವಾಗಿ ಪರಸ್ಪರರನ್ನು ಅಳೆದುಕೊಳ್ಳಲು ಬಳಸುವ ಹೆಚ್ಚು ಕಡಿಮೆ ಎಲ್ಲ ವಿಧಿ ನಿಯಮಗಳಿಂದಲೂ ಅತೀತರಾಗಿ ರಾಮಾನುಜನ್ ತೋರುತ್ತಾರೆ. ಇದು ಹೇಗೂ ಇರಲಿ. ಯಾವುದೋ ಒಂದು ಅರ್ಥದಲ್ಲಿ ಇವರೊಬ್ಬ ಬಲು ದೊಡ್ಡ ಗಣಿತಜ್ಞ ಎಂಬ ಒಂದು ತೀರ್ಮಾನದ ಬಗ್ಗೆ ಪ್ರಾಯಶಃ ನಾವೆಲ್ಲರೂ ಒಮ್ಮತದವರಾಗಿದ್ದೇವೆ...ರಾಮಾನುಜನ್ ಅದೆಷ್ಟು ಉನ್ನತ ದರ್ಜೆಯ ಗಣಿತಜ್ಞರಾಗಿದ್ದರು ಎಂಬುದನ್ನಾಗಲಿ ಅದಕ್ಕಿಂತ ಮಿಗಿಲಾಗಿ ಅವರು ಅದೆಷ್ಟು ಉನ್ನತ ದರ್ಜೆಯ ಗಣಿತಜ್ಞರಾಗಬಹುದಿತ್ತು ಎಂಬುದನ್ನಾಗಲಿ ಇಂದಿಗಾದರೂ ಯಾರಾದರೂ ಭರವಸೆಯಿಂದ ಹೇಳಿಯಾರು ಎಂದು ನಾನೇನೂ ಭಾವಿಸಿಲ್ಲ... ನನ್ನ ಎದುರಿರುವ ನಿಜವಾದ ತೊಡಕೆಂದರೆ, ಒಂದು ರೀತಿಯಲ್ಲಿ ರಾಮಾನುಜನ್- ನನ್ನ ಆವಿಷ್ಕಾರ. ಅವರನ್ನು ನಾನು ಸೃಷ್ಟಿಸಿದ್ದಲ್ಲ. ಇತರ ಮಹಾಪುರುಷರಂತೆ ಅವರು ತಮ್ಮನ್ನು ತಾವೇ ಸೃಷ್ಟಿಸಿಕೊಂಡರು. ಆದರೆ ಅವರ ಕೆಲವು ಕೃತಿಗಳನ್ನು ನೋಡುವ ಸಂದರ್ಭ ಒದಗಿದ ಮೊದಲ ಸಮರ್ಥ ವ್ಯಕ್ತಿ ನಾನೇ. ಆಗ ನಾನು ಗುರುತಿಸಿದ್ದು ಎಂಥ ಹೆಗ್ಗೆಯನ್ನು ಎಂಬುದರ ಬಗ್ಗೆ ನನಗೆ ಈಗಲೂ ಸಂತೃಪ್ತಿ ಉಂಟು."

ಫಲಿತಾಂಶಗಳನ್ನು ಅವಲೋಕಿಸಿದ ಹಾರ್ಡಿಯವರು ತಮ್ಮ ಸ್ಪಷ್ಟ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ: "ಅವಿಭಾಜ್ಯಗಳನ್ನು ಕುರಿತ ರಾಮಾನುಜನ್ ಅವರ ಸಿದ್ಧಾಂತ ದೋಷಪೂರಿತವಾಗಿತ್ತು...ಇದು ಒಂದು ದೊಡ್ಡ ವೈಫಲ್ಯ ಎನ್ನಬಹುದು. ಹಾಗಿದ್ದರೂ ಅವರ ವೈಫಲ್ಯ ಕೂಡ ಅವರ ಯಾವುದೇ ವಿಜಯದಷ್ಟೇ ಅದ್ಭುತ ಎಂದು ನಾನು ಭಾವಿಸಿದ್ದೇನೆ." ಪ್ರಚಲಿತ ಗಣಿತ ಸಂಶೋಧನೆ ಯಾವ ದಿಸೆಯಲ್ಲಿ ಸಾಗಿದೆ ಎನ್ನುವುದರ ಸುಳಿವೂ ಇಲ್ಲದ ಈ ಒಳನಾಡಿನ ಬಡಕಲು ಹುಡುಗನಿಗೆ ಅದೇ ಸಂಶೋಧನರಂಗದ ಮುಂಚೂಣಿ ವಿದ್ವಾಂಸರಿಗೆ ಎದುರಾಗುತ್ತಿದ್ದ ಮಹಾಸಮಸ್ಯೆಗಳು ಸ್ಫುರಿಸುತ್ತಿದ್ದುದು ಕೂಡ ಒಂದು ಪವಾಡವೇ ಸರಿ ಎಂದು ಹಾರ್ಡಿ ಹೇಳಿದ್ದಾರೆ.

ತಮ್ಮ ಪ್ರಥಮ ಪತ್ರಕ್ಕೆ ಹಾರ್ಡಿಯವರಿಂದ ಆತ್ಮೀಯ ಹಾಗೂ ಸಾನುಕಂಪ ಉತ್ತರ ದೊರೆತಾಗ ರಾಮಾನುಜನ್ ಅವರಿಗೆ ಆದ ಸಂತೋಷ ಸೀಮಾತೀತ. "ನನ್ನ ಪರಿಶ್ರಮವನ್ನು ಸಹಾನುಭೂತಿಯಿಂದ ಪರಿಶೀಲಿಸುವ ಓರ್ವ ಸ್ನೇಹಿತರನ್ನು ನಿಮ್ಮಲ್ಲಿ ಕಂಡಿದ್ದೇನೆ. ನನಗೆ ಮುಂದುವರಿಯಲು ಇದೊಂದು ದೊಡ್ಡ ಉತ್ತೇಜನ...ನನ್ನ ಬುದ್ಧಿಶಕ್ತಿಯನ್ನು ಕಾಪಾಡಿಕೊಳ್ಳಲು ನನಗೆ ಆಹಾರ ಅಗತ್ಯವಾಗಿದೆ. ಇದೇ ನನ್ನ ಪ್ರಥಮಾವಶ್ಯಕತೆ. ನಿಮ್ಮಿಂದ ಬರಬಹುದಾದ ಯಾವುದೇ ಅನುಕಂಪಪೂರಿತ ಪತ್ರ ಇಲ್ಲಿನ ವಿಶ್ವವಿದ್ಯಾಲಯದಿಂದ ಇಲ್ಲವೇ ಸರ್ಕಾರದಿಂದ ನನಗೊಂದು ವಿದ್ಯಾರ್ಥಿವೇತನವನ್ನು ಒದಗಿಸುವಲ್ಲಿ ನೆರವಾದೀತು," ಎಂಬುದಾಗಿ ರಾಮಾನುಜನ್ ಫೆಬ್ರುವರಿ ೨೭ ರಂದು (೧೯೧೩) ಹಾರ್ಡಿಯವರಿಗೆ ಉತ್ತರ ಬರೆದರು. ರಾಮಾನುಜನ್ ಅವರನ್ನು ಕೇಂಬ್ರಿಜಿಗೆ ಆಹ್ವಾನಿಸುವುದೊಂದೇ ಸರಿಯಾದ ಪರಿಹಾರ ಎಂದು ಸ್ಪಷ್ಟವಾಗಿ ಮನಗಂಡ ಹಾರ್ಡಿಯವರು ಆ ದಿಶೆಯಲ್ಲಿ ಕಾರ್ಯೋದ್ಯುಕ್ತರಾದರು. ಆದರೆ ಅವರಿಗೊಂದು ಸಂದೇಹವಿತ್ತು; ರಾಮಾನುಜನ್ ತಮ್ಮ ಗಣಿತ ಪ್ರಮೇಯ (ನಿರೂಪಣೆ) ಗಳಿಗೆ ಸಾಧನೆಗಳನ್ನು ಬರೆದು ಕಳಿಸಲು ಹಿಂದೇಟು ಹಾಕುತ್ತಿರುವುದು ಪ್ರಾಯಶಃ ತಾನು ಅವನ್ನು ಕೃತಿಚೌರ್ಯ ಮಾಡಿಯೇನು ಎಂಬ ಊಹೆಯಿಂದಾಗಿರಬಹುದು. ಇದನ್ನು ಪೂರ್ಣವಾಗಿ ನಿವಾರಿಸಲು ಹಾರ್ಡಿ ರಾಮಾನುಜನ್ ಅವರಿಗೆ ಒಂದು ಸ್ಫಟಿಕ ಸ್ವಚ್ಛ ಪತ್ರ ಬರೆದರು (ಮಾರ್ಚ್ ೨೬, ೧೯೧೩). "...ನಿಮ್ಮ ಯಾವುದೇ ಫಲತಾಂಶಗಳನ್ನು ನಾನು ಕಾನೂನು ಬಾಹಿರವಾಗಿ ಉಪಯೋಗಿಸಿಕೊಳ್ಳಲು ಯತ್ನಿಸಿದ್ದೇ ಆದರೆ ನನ್ನನ್ನು ಸುಲಭವಾಗಿ ಬಯಲಿಗೆಳೆಯಲು ನಿಮ್ಮಲ್ಲಿ ಸಾಕಷ್ಟು ಪುರಾವೆಗಳಿವೆ. ಈ ಪರಿಸ್ಥಿತಿಯನ್ನು ಇಷ್ಟೊಂದು ಒರಟಾಗಿ ಬರೆದಿರುವುದಕ್ಕಾಗಿ ನೀವು ನನ್ನನ್ನು ಮನ್ನಿಸಬೇಕು. ನಿಮ್ಮ ಪ್ರಕಟಿತ ಗಣಿತ ಸಾಮರ್ಥ್ಯಗಳ ಉತ್ಕೃಷ್ಟ ಉಪಯೋಗ ಪಡೆಯಲು ನಿಮಗೆ ಸಮರ್ಪಕ ಸಂದರ್ಭವನ್ನು ಒದಗಿಸಿಕೊಡುವುದೊಂದೇ ನನ್ನ ಆಸಕ್ತಿ. ಇಲ್ಲದಿದ್ದರೆ ನಾನು ಮೇಲಿನಂತೆ ಬರೆಯುತ್ತಿರಲಿಲ್ಲ." ಮೃದು ಮನಸ್ಸಿನ ರಾಮಾನುಜನ್ ಅವರಿಗೆ ಈ ನೇರ ಬರವಣಿಗೆ ನೋವು ಮಾಡಿತು. ಏಪ್ರಿಲ್ ೧೭ ರಂದು ಅವರು ಹಾರ್ಡಿಯವರಿಗೆ ಉತ್ತರ ಬರೆದರು. "ನೀವು ಬರೆದುದನ್ನು ಓದಿ ನನಗೆ ನೋವಾಯಿತು. ನನ್ನ ವಿಧಾನಗಳನ್ನು ಇತರರು ಉಪಯೋಗಿಸಿಕೊಳ್ಳುವ ವಿಚಾರದಲ್ಲಿ ನನಗೆ ಕಿಂಚಿತ್ತು ಚಿಂತೆಯೂ ಇಲ್ಲ. ಬದಲಾಗಿ, ನನ್ನ ವಿಧಾನ ಕಳೆದ ಎಂಟು ವರ್ಷಗಳಿಂದಲೂ ನನ್ನೊಡನೆ ಇರುವುದಾದರೂ ಅದನ್ನು ಮೆಚ್ಚಬಲ್ಲ ಯಾರೊಬ್ಬರನ್ನೂ ನಾನು ಕಂಡಿಲ್ಲ. ನನ್ನ ಹಿಂದಿನ ಕಾಗದದಲ್ಲಿ ನಿಮಗೆ ಬರೆದಿರುವಂತೆ ನಿಮ್ಮಲ್ಲಿ ಓರ್ವ ಅನುಕಂಪಶೀಲಮಿತ್ರರನ್ನು ಕಂಡಿದ್ದೇನೆ. ನನ್ನಲ್ಲಿ ಇರುವ ಅಲ್ಪವನ್ನು ನಿಮ್ಮ ಕೈಗಳಲ್ಲಿ ಮುಕ್ತ ಮನಸ್ಸಿನಿಂದ ಇಡಲು ನಾನು ಸಿದ್ಧ. ನಾನು ಬಳಸಿರುವ ವಿಧಾನದ ಹೊಸತನವೊಂದೇ ಈಗಾದರೂ ನನ್ನನ್ನು, ನಾನು ಈಗಾಗಲೇ ನಿಮಗೆ ಕಳಿಸಿ

ರುವ ಫಲಿತಾಂಶಗಳನ್ನು ಹೇಗೆ ಪಡೆದೆನೆಂದು ತಿಳಿಸುವಲ್ಲಿ, ಹಿಂಜರಿಯುವಂತೆ ಮಾಡುತ್ತಿರುವುದು."

ಹಾರ್ಡಿಯವರ ಬೆಂಬಲ ದೊರೆತದ್ದರಿಂದ ಮದರಾಸು ವಿಶ್ವವಿದ್ಯಾಲಯ ತನ್ನ ತೀರ ಜಿಗುಟಾದ ಸಾಂಪ್ರದಾಯಿಕ ನಿಲುವನ್ನು ಸಡಿಲಿಸಿ ತೋರಿಕೆಗೆ ಯಾವ ಡಿಗ್ರಿಯೂ ಇಲ್ಲದಿದ್ದ ಆದರೆ ವಾಸ್ತವಿಕವಾಗಿ ಸರ್ವ ಡಿಗ್ರಿಗಳಿಗೂ ಅತೀತರಾಗಿದ್ದ ರಾಮಾನುಜನ್ ಅವರಿಗೆ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಿ ತನ್ನ ಓರ್ವ ಸಂಶೋಧನ ವಿದ್ಯಾರ್ಥಿಯಾಗಿ ಸೇರಿಸಿಕೊಂಡಿತು (ಮೇ ೧, ೧೯೧೩). ಅಂದಿನಿಂದ ಮುಂದಕ್ಕೆ ಅವರೊಬ್ಬ ಗಣಿತೋದ್ಯಮಿಯಾಗಿಯೇ ಬಾಳಿದರು. ಮುಂದೆ ಮದರಾಸು ವಿಶ್ವವಿದ್ಯಾಲಯ ಹಾರ್ಡಿಯವರ ಸತತ ಪ್ರಯತ್ನಗಳ ಫಲವಾಗಿ ರಾಮಾನುಜನ್ ಅವರನ್ನು ಇಂಗ್ಲೆಂಡಿಗೆ ಕಳಿಸಲು ಬೇಕಾಗುವ ಮೊತ್ತವನ್ನು ಭರಿಸಲು ಒಪ್ಪಿಕೊಂಡಿತು. ಪ್ರಸಕ್ತ ಶತಮಾನದ ತರುಣದಲ್ಲಿ ದಕ್ಷಿಣ ಭಾರತದ ಕರ್ಮಠ ಬ್ರಾಹ್ಮಣ ಯುವಕನೊಬ್ಬ ಸಾಗರಯಾನ ಮಾಡಲು ಮಾನಸಿಕವಾಗಿ ಸಿದ್ಧನಾಗುವುದು ಸಾಮಾನ್ಯ ಸಾಹಸವೇನೂ ಆಗಿರಲಿಲ್ಲ. ಸಾಕ್ಷಾತ್ ನಾಮಗಿರಿದೇವಿಯೇ ಕೋಮಲಮ್ಮಾಳ್ ಅವರಿಗೆ ಕನಸಿನಲ್ಲಿ ಕಾಣಿಸಿಕೊಂಡು ಈ ಯಾನ ಆಗಬೇಕು ಎಂಬುದಾಗಿ ಹರಸಿದಳಂತೆ. ಬೂಟು, ಸುರಾಲು, ಷರಟು, ಕಂಠಮಾಲೆ, ಕೋಟು, ಜುಟ್ಟುರಹಿತ ಕೇಶವಿನ್ಯಾಸ ಮುಂತಾದ ವಿದೇಶೀ ದುಸ್ತಿನಿಂದ ಅಲಂಕೃತರಾದ ರಾಮಾನುಜನ್ ೧೯೧೪ರ ಮಾರ್ಚ್ ೧೭ ರಂದು ಸಮುದ್ರಯಾನ ಪ್ರಾರಂಭಿಸಿದರು. ಭಾರತದ ಕೆಚ್ಚು ಗಣಿತ ಸಂಪತ್ತು ಪೂರೈಸಿದ ಶುದ್ಧ ರತ್ನಾಭರಣವಾಗಿ ಮರಳಲು ಇಂಗ್ಲೆಂಡಿಗೆ ತೆರಳಿತು. ಹಾರ್ಡಿಯವರ ಕನಸು ಮತ್ತು ಭಾರತೀಯ ಗಣಿತಜ್ಞರ ಬಯಕೆ ಓಗೆ ಒಂದು ನಿರ್ದಿಷ್ಟ ಘಟ್ಟವನ್ನು, ಸಿಮೋಲ್ಲಂಘನ ಘಟ್ಟವನ್ನು, ಮುಟ್ಟಿತು. ಕೇಂಬ್ರಿಜನ್ನು ತಲುಪಿದ ರಾಮಾನುಜನ್ ಟ್ರಿನಿಟಿ ಕಾಲೇಜಿನ ವಿದ್ಯಾರ್ಥಿಯಾಗಿ ಸೇರಿದರು. ಅವರ ಬಾಳಿನ ತೀವ್ರ ಪಟುತ್ವದ ಎರಡನೆಯ ಅವಧಿ (೧೯೧೪–೧೯) ಈಗ ತೊಡಗಿತು. ಅಲ್ಲಿ ಹಾರ್ಡಿ ಮತ್ತು ಅವರ ಸಹೋದ್ಯೋಗಿ ಲಿಟಲ್‌ವುಡ್ ರಾಮಾನುಜನ್ ಅವರ ಶಿಕ್ಷಣದ ಹೊಣೆಯನ್ನು ಹೊತ್ತುಕೊಂಡರು. "ಇಂಥ ಮನುಷ್ಯನನ್ನು ವ್ಯವಸ್ಥಿತ ಶಿಕ್ಷಣಕ್ಕೆ ಒಳಪಡುವಂತೆ, ಎಂದರೆ ಗಣಿತವನ್ನು ಪ್ರಾರಂಭದಿಂದ ಪುನರಪಿ ಕಲಿಯುವಂತೆ, ನಿರ್ಬಂಧಿಸುವುದು ಅಸಾಧ್ಯವಾಗಿತ್ತು. ಅಲ್ಲದೇ ರಾಮಾನುಜನ್ ತೊಡಕಿನದೆಂದು ಪರಿಗಣಿಸಬಹುದಾದ ವಿಧಿನಿಯಮಗಳ ಮೇಲೆ ಅವಧಾರಣೆ ಹೇರಿದರೆ ಅವರ ಆತ್ಮವಿಶ್ವಾಸವನ್ನೇ ಅದು ನಾಶಪಡಿಸಿಬಿಡಬಹುದು, ಇಲ್ಲವೇ ಅವರ ಸ್ಫೂರ್ತಿಯ ನಿರಂತರ ಸೆಲೆಯನ್ನೇ ಅದು ಬತ್ತಿಸಿಬಿಡಬಹುದು ಎಂಬ ಭಯ ಸಹ ನಮಗಿತ್ತು............ಆದ್ದರಿಂದ



"ಯಾರಿಗೆ ಕೊಡಬೇಕಾದ ಬಾಕಿ ನಿಲ್ಲಿಸಿದರೂ ಮುಸುರೆ ಕೆಲಸದವಳ ಬಾಕಿ ಮಾತ್ರ ನಿಲ್ಲಿಸಬೇಡಿ; ಅಂತ ಬಡ್ಕೊಂಡೆ..., ನೀವು ಕನ್ಯಾತು ಕೇಳಿದ್ರಾ...!?"

ಅವರಿಗೆ ಪಾಠ ಹೇಳಿಕೊಡಲು ನಾನು ಪ್ರಯತ್ನ ಪಡಬೇಕಾಯಿತು. ಇದರಲ್ಲಿ ನಾನು ತಕ್ಕ ಮಟ್ಟಿಗೆ ಯಶಸ್ವಿ ಆದೆನಾದರೂ ಅವರು ನನ್ನಿಂದ ಕಲಿತುದಕ್ಕಿಂತ ಹೆಚ್ಚನ್ನು ನಾನೇ ಅವರಿಂದ ಕಲಿತೆ......ಅವರೆಂದೂ ಆಧುನಿಕ ಚಿಂತನ ವಿಧಾನದ ಗಣಿತಜ್ಞರಾಗಿರಲಿಲ್ಲ. ಅವರನ್ನು ಹೀಗೆ ಮಾಡುವುದು ಅಪೇಕ್ಷಣೀಯವೂ ಆಗಿರಲಿಲ್ಲ......ಅವರಿಂದ ಪ್ರವಹಿಸುತ್ತಿದ್ದ ಮೂಲಭೂತ ಭಾವನೆಗಳು ಎಂದೂ ಹಿಂಗುವ ಲಕ್ಷಣ ಪ್ರಕಟವಾಗಲಿಲ್ಲ" ಎಂಬುದಾಗಿ ಹಾರ್ಡಿ ಬರೆದಿರುವರು. ೧೯೧೪–೧೮ ರ ಅವಧಿಯಲ್ಲಿ ಪ್ರಕಟವಾದ ರಾಮಾನುಜನ್ ಸಂಶೋಧನ ಪ್ರಬಂಧಗಳ ಸಂಖ್ಯೆ ೨೪. ಇವೆಲ್ಲವೂ ಪೂರೈಸಿದ ಉತ್ಕೃಷ್ಟ ಮಾಲುಗಳೇ. ಹಾರ್ಡಿಯವರು ೧೯೧೫ ರಲ್ಲಿ ಮದರಾಸು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ವರದಿಯಲ್ಲಿ ".........ಆಧುನಿಕ ಯುಗದ ಸರ್ವಶ್ರೇಷ್ಠ ಭಾರತೀಯ ಗಣಿತ ವಿದ್ವಾಂಸ ಇವರೆನ್ನುವುದು ಪ್ರಶ್ನಾತೀತ...... ಕೆಲವೊಂದು ರೀತಿಗಳಲ್ಲಿ ನಾನು ತಿಳಿದಿರುವ ಸಕಲ ಗಣಿತಜ್ಞರಲ್ಲೂ ಇವರೊಬ್ಬ ಅತಿ ಗಮನಾರ್ಹ ವ್ಯಕ್ತಿ" ಎಂದಿದ್ದಾರೆ,

ಕೇಂಬ್ರಿಜ್ ವಿಶ್ವವಿದ್ಯಾಲಯ ರಾಮಾನುಜನ್ ಅವರಿಗೆ ೧೯೧೬ ರಲ್ಲಿ ಗೌರವ ಬಿ. ಎ. ಪದವಿಯನ್ನು ನೀಡಿ ಸನ್ಮಾನಿಸಿತು. ಲಂಡನ್ನಿನ ವರಿಷ್ಠ ವಿಜ್ಞಾನ ಸಂಘವಾದ ರಾಯಲ್ ಸೊಸೈಟಿ ಇವರನ್ನು ತನ್ನ ಫೆಲೋ ಆಗಿ ಆಯ್ಕೆ ಮಾಡಿಕೊಂಡು (ಎಫ್.ಆರ್.ಎಸ್.) ಒಬ್ಬ ಗಣಿತ ವಿಜ್ಞಾನಿಗೆ ಸಲ್ಲಿಸಬಹುದಾದ ಅತ್ಯುನ್ನತ ಪದವಿಯನ್ನು ನೀಡಿತು (೧೯೧೮),

ಕಟ್ಟಾ ಸಸ್ಯಾಹಾರಿ, ಇಂಗ್ಲೆಂಡಿನ ಪ್ರತಿಕೂಲ ಹವೆ. ನಿರಂತರ ದುಡಿಮೆ. ಸ್ವಂತ ಪರಿಸರದಿಂದ ತೀರ ಭಿನ್ನವಾದ ಪರಿಸರದಲ್ಲಿ ಸುದೀರ್ಘ ವಾಸ. ಪ್ರಾರಂಭದಿಂದಲೂ ಅಷ್ಟೇನೂ ಆರೋಗ್ಯವಂತವಲ್ಲದ ದೇಹ. ಇವೆಲ್ಲ ಒಟ್ಟಾಗಿ ರಾಮಾನುಜನ್ ಅವರ ಆರೋಗ್ಯ ಪದ ತಪ್ಪಿತು. ಮೇ ೧೯೧೭ ರಲ್ಲಿ ಹಾರ್ಡಿಯವರು ಮದರಾಸು ವಿಶ್ವವಿದ್ಯಾಲಯಕ್ಕೆ ರವಾನಿಸಿದ ವರದಿ ಎಷ್ಟು ಅನಿರೀಕ್ಷಿತವಾಗಿತ್ತೋ ಅಷ್ಟೇ ಕಳವಳಕಾರಿಯೂ ಆಗಿತ್ತು. ರಾಮಾನುಜನ್ ತೀವ್ರ ಕ್ಷಯರೋಗಗ್ರಸ್ತರಾಗಿದ್ದರು. ಭಾರತದ ಬೆಚ್ಚಗಿನ ಹವೆಗೆ ಬಂಧುಬಳಗದವರ ನಡುವಿಗೆ ಕಳಿಸೋಣವೆಂದರೆ ಯುದ್ಧದ ದಿನಗಳಾದ್ದರಿಂದ ಇಂಥ ಪ್ರಯಾಣ ಸಾಧ್ಯವೇ ಇರಲಿಲ್ಲ. ಇಂಗ್ಲೆಂಡಿನಲ್ಲೇ ಒಂದು ವಿಶ್ರಾಂತಿ ಧಾಮದಲ್ಲಿ ರೋಗ ಶುಶ್ರೂಷೆ ಆರಂಭವಾಯಿತು. ೧೯೧೮ರ ನವಂಬರ ತಿಂಗಳಲ್ಲಿ ಹಾರ್ಡಿಯವರು ಮದರಾಸು ವಿಶ್ವವಿದ್ಯಾಲಯಕ್ಕೆ ಸುದೀರ್ಘ ಪತ್ರವೊಂದನ್ನು ಬರೆದರು. ".........ವಿಜ್ಞಾನ ರಂಗದಲ್ಲಿ ಈ ಮೊದಲು ಯಾವ ಭಾರತೀಯನೂ ಪಡೆಯದಿದ್ದಂಥ ಮಹೋನ್ನತ ಸ್ಥಾನವನ್ನೂ ಕೀರ್ತಿಯನ್ನೂ ಗಳಿಸಿ ಅವರು ಭಾರತಕ್ಕೆ ಮರಳುವವರಿದ್ದಾರೆ. ಅವರೆಂಥ ಅನರ್ಘ್ಯ ನಿಧಿ ಎನ್ನುವುದನ್ನು ಭಾರತ ಪರಿಗಣಿಸುವುದೆಂಬ ವಿಶ್ವಾಸ ನನಗುಂಟು. ಅವರ ನೈಜ ಸರಳತೆ ಹಾಗೂ ವಿನಯ ಯಶಸ್ಸಿನಿಂದ ತಿಲಮಾತ್ರವೂ ಮಾಸಲಿಲ್ಲ. ಆಗಬೇಕಾದದ್ದಿಷ್ಟೆ: ತಾನು ನಿಜವಾಗಿಯೂ ಒಬ್ಬ ಯಶಃಪುರುಷ ಎಂಬುದು ಅವರಿಗೆ ಮನವರಿಕೆ ಆಗಬೇಕು."

ರಾಮಾನುಜನ್ ಅವರ ಭೌತ ಶರೀರ ತೀವ್ರ ವ್ಯಾಧಿಪೀಡಿತವಾಗಿದ್ದಾಗಲೂ ಅವರ ಬುದ್ಧಿ ಎಂದಿನಂತೆಯೇ ನಿಶಿತವಾಗಿತ್ತು ಎನ್ನುವುದನ್ನು ನಿದರ್ಶಿಸಲು ಹಾರ್ಡಿಯವರು ಒಂದು ಆಖ್ಯಾನಕವನ್ನು ಬರೆದಿದ್ದಾರೆ. ಮಾಮೂಲಿನಂತೆ ಅವರು ರಾಮಾನುಜನ್ ಅವರನ್ನು ವಿಚಾರಿಸಿಕೊಂಡು ಬರಲು ವಿಶ್ರಾಂತಿ ಧಾಮಕ್ಕೆ ಹೋದರು, ತಾನು ಅಲ್ಲಿಗೆ ಕುಳಿತು ಬಂದ ಟ್ಯಾಕ್ಸಿಯ ಫಲಕ ಸಂಖ್ಯೆ 1729 ($=7\times 13\times 19$); ಇದೊಂದು ತೀರ ಜಡ ಮತ್ತು ಸಪ್ಪೆ ಸಂಖ್ಯೆಯಾಗಿ ತೋರುತ್ತದೆ ಎಂದು ಅವರು ನುಡಿದಾಗ ರಾಮಾನುಜನ್ ಸೆಟೆದು ಉದ್ಗರಿಸಿದರು. "ಅಲ್ಲಲ್ಲ, ಇದೊಂದು ಬಲು ಸ್ವಾರಸ್ಯಕರವಾದ ಸಂಖ್ಯೆ. ಎರಡು ಘನಗಳ ಮೊತ್ತವನ್ನು ಎರಡು ಬೇರೆ ಬೇರೆ ರೀತಿಗಳಲ್ಲಿ ನಿರೂಪಿಸಬಹುದಾದ ಕನಿಷ್ಠ ಸಂಖ್ಯೆಯೇ

1729." ಅಂದರೆ

$$1729 = 1 + 1728 = 1^3 + 12^3$$

$$1729 = 729+1000 = 9^3+10^3$$

ಇದನ್ನು ಕೇಳಿದ ಹಾರ್ಡಿಯವರು "ಹಾಗಾದರೆ ನಾಲ್ಕನೆಯ ಘಾತಗಳನ್ನು ಕುರಿತಂತೆ ಒಂದು ಕನಿಷ್ಠ ಸಂಖ್ಯೆ ಇದೆಯೇ? ಇದ್ದರೆ ಅದು ಯಾವುದು?" ಎಂದು ಪ್ರಶ್ನಿಸಿದರು. ತುಸು ಕಾಲ ಯೋಚಿಸಿ ರಾಮಾನುಜನ್ "ಅಂಥ ಸಂಖ್ಯೆಗೆ ಯಾವ ಸ್ಪಷ್ಟ ಉದಾಹರಣೆಯೂ ನನಗೆ ತಿಳಿಯದು. ಅದೇನಾದರೂ ಇದ್ದರೆ ಅದೊಂದು ಬೃಹತ್ಸಂಖ್ಯೆ" ಎಂದರು. ಅಂಥ ಸಂಖ್ಯೆ ಇದೆ:

$$63,53,18,657 = 59^4+158^4 = 133^4+134^4$$

ಪ್ರತಿಯೊಂದು ಧನಪೂರ್ಣಾಂಕವೂ ರಾಮಾನುಜನ್ ಅವರ ಆತ್ಮೀಯ ಸ್ನೇಹಿತನಾಗಿತ್ತು.

ವ್ಯಾಧಿಜರ್ಝರಿತ ಗಣಿತಧೀಮಂತನನ್ನು ಹೊತ್ತ ಹಡಗು ಮದರಾಸು ರೇವನ್ನು ೧೯೧೯ರ ಏಪ್ರಿಲ್ ೨ ರಂದು ಪ್ರವೇಶಿಸಿತು. ರಾಮಾನುಜನ್ ಅವರ ಬಂಧು ಬಾಂಧವರು ಅಲ್ಲಿ ಕಂಡದ್ದು ಚರ್ಮ ಮೂಳೆರೂಪದ ರಾಮಾನುಜನ್ ಛಾಯೆಯನ್ನು. ಬದಲಾಗದಿದ್ದುದು ಎರಡು: ಅವರ ಕಣ್ಣುಗಳಲ್ಲಿ ಮಿಂಚುತ್ತಿದ್ದ ಅಪೂರ್ವ ಕಾಂತಿ, ಅವರ ನಿಶಿತಮತಿ. ತಾಯಿ ನೆಲದ ಮೇಲೆಯೇ ಕೊನೆ ಉಸಿರು ಎಳೆಯಲೆಂದು ಅವರು ಮರಳಿದರೋ ಎನ್ನುವಂಥ ಕರುಣಾಜನಕ ದೃಶ್ಯವದು. ತೀವ್ರವಾದ ದೈಹಿಕ ಯಾತನೆಯಿಂದ ನರಳುತ್ತಿದ್ದಾಗ ಅದನ್ನು ಮರೆಯಲು ಅವರಿಗಿದ್ದ ಉಪಾಯವೊಂದೇ: ಗಣಿತ ಚಿಂತನೆ. ಯಮ ಬಾಗಿಲಲ್ಲಿ ಗುರುತರವಾಗಿ ತಟ್ಟುತ್ತಿದ್ದಾಗಲೂ ಅವರ ಮಿದುಳು ಗಣಿತಚಿಂತನೆಗಳಿಂದ ವಿಮುಖವಾಗಲಿಲ್ಲ: ಜಾನಕಿ ಅಮ್ಮಾಳ್ ತನ್ನ ಪತಿಯ ಬಳಿಯಲ್ಲಿಯೇ ಕುಳಿತು ಅವರಿಗೆ ಬರೆಯಲು ಖಾಲಿ ಕಾಗದದ ತಾನುಗಳನ್ನೂ ಸೀಸದ ಕಡ್ಡಿಯನ್ನೂ ಒದಗಿಸುತ್ತಿದ್ದರು. ಬರೆದಾದ ಹಾಳೆಗಳನ್ನು ಜೋಪಾನವಾಗಿ ಪೇರಿಸಿ ಇಡುತ್ತಿದ್ದರು. ೧೯೧೮–೨೦ ರ ಅವಧಿಯಲ್ಲಿ ಪ್ರಕಟವಾದ ಸಂಶೋಧನ ಪ್ರಬಂಧಗಳ ಸಂಖ್ಯೆ ೧೨ ಎನ್ನುವಾಗ ಅವರ ಮನಸ್ಸಿನ ಪುಟಿತತೆ ಆ ಕಂತುವ ದಿನಗಳಂದು ಸಹ ಎಂಥ ಉನ್ನತ ಮಟ್ಟದಲ್ಲಿತ್ತು ಎಂದು ಊಹಿಸಿಕೊಳ್ಳಬಹುದು,

ಈ ಗಣಿತಧೀಮಂತನನ್ನು, ಭಾರತರತ್ನವನ್ನು ಉಳಿಸಿಕೊಳ್ಳಲು ಸರ್ವ ಪ್ರಯತ್ನಗಳನ್ನೂ ಮಾಡಲಾಯಿತು. ಅತ್ಯುತ್ತಮ ವೈದ್ಯಕೀಯ ನೆರವು. ಯೋಗ್ಯ ಪರಿಸರ, ಬಂಧು ಬಾಂಧವರಿಂದ ಆತ್ಮೀಯ ಸೇವೆ, ಇತ್ಯಾದಿ. ಆದರೆ ಏರುತ್ತಿದ್ದ ರೋಗದ ಉಲ್ಬಣತೆಯ ಎದುರು ಇವು ಯಾವುವೂ ಪರಿಣಾಮಕಾರಿ ಆಗಲಿಲ್ಲ. ೧೯೨೦ರ ಏಪ್ರಿಲ್ ೨೬ ರಂದು ಈ ಪಾರಲೌಕಿಕ ಪ್ರತಿಭೆ ನಂದಿಯೇ ಹೋಯಿತು. ✿



ಬದನೇಕಾಯಿ ಮಾರುತ್ತಿದ್ದವನಲ್ಲಿ ಒಬ್ಬಾತ ಬಂದು, 'ಇದೆಲ್ಲಾ ಎಷ್ಟಾಗುತ್ತದಪ್ಪಾ?' ಎಂದು ಪ್ರಶ್ನಿಸಿದ. "ಹತ್ತು ಹದಿನೈದು ಕಿಲೋಗಳಷ್ಟಾದೀತು. ಮಹಾಸ್ವಾಮಿ," ಕಾಯಿಪಲ್ಲೆಯಾತ ಉತ್ತರಿಸಿದ. "ನೋಡು, ನಮ್ಮ ಹೋಟೆಲಿಗೆ ಬದನೆಕಾಯಿಗಳು ಬೇಕಾಗಿವೆ. ಆದ್ದರಿಂದ ಬಲಿತುಹೋದದ್ದೆಲ್ಲಾ ಒಂದು ಕಡೆ ತೆಗೆದಿಡು," ಹೋಟೆಲ್ ಮಾಲಕ ಹೇಳಿದ. ಬಲಿತ ಬದನೆಕಾಯಿಗಳನ್ನು ಕೊಳ್ಳುವಂಥ ದಪ್ಪ ತಲೆಯ ಗಿರಾಕಿ ಇನ್ನೆಂದಾದರೂ ಸಿಕ್ಕೀತೆ? ಅಂದುಕೊಂಡು ಉತ್ಸಾಹದಿಂದ ಆತ ಎಲ್ಲ ಬಲಿತ ಬದನೆಕಾಯಿಗಳನ್ನೂ ಒಂದು ಕಡೆ ಗುಡ್ಡೆ ಹಾಕಿದ. ಹೋಟೆಲ್ ಮಾಲಕ ಕೂಡಲೇ ಇನ್ನೊಂದು ಗುಂಪಿನ ಬದನೆಕಾಯಿಗಳನ್ನು ತೂಕಮಾಡುವಂತೆ ಹೇಳಿದ.

# ನೀವು ತಿಳಿದಿರಬೇಕು

## ಹುಳಿ-ಒಗರು

**ಸಿ**ಹಿ ತಿಂಡಿಯೆಂದರೆ ಬಾಯಿಚಪ್ಪರಿಸುವವರೇ ಎಲ್ಲರೂ. ಆದರೆ ಕೆಲವರಿಗೆ ಮಾತ್ರ ಹುಳಿ–ಒಗರು ತಿಂಡಿಗಳನ್ನು ಕಂಡಾಗ ಬಾಯಲ್ಲಿ ನೀರೂರದಿರುವದಿಲ್ಲ, ಇಂಥವರು ಕಹಿರುಚಿಯ ತಿಂಡಿಗಳನ್ನು ಬಯಸಬಹುದು.

ಕರ್ನಾಟಕದ ಶ್ರಮಿಕ ಜೀವಿಗಳು ಹುಳಿ–ಒಗರು ರುಚಿಯ ತಿಂಡಿಗಳನ್ನು ಮೆಚ್ಚಿಕೊಂಡಿದ್ದಾರೆಂಬುದು ಇತ್ತೀಚಿನ ಒಂದು ಪರೀಕ್ಷೆಯಲ್ಲಿ ಕಂಡುಬಂದಿದೆ. ಅಮೇರಿಕೆಯ ಮೆಸಾಚುಸೆಟ್ಸ್‌ದ ಸೈನ್ಯ ಶಾಖೆಯ ಆಹಾರ ಪ್ರಯೋಗ ಶಾಲೆ ಮತ್ತು ಬೆಂಗಳೂರಿನ ಸೇಂಟ್ ಜಾನ್ ಮೆಡಿಕಲ್ ಕಾಲೇಜ ಸಂಯುಕ್ತವಾಗಿ ನಡೆಸಿದ ಸಂಶೋಧನೆಯ ಫಲ ಇದು.

ಬೆಂಗಳೂರಿನ ಮೆಡಿಕಲ್ ಕಾಲೇಜಿನ ವಿದ್ಯಾರ್ಥಿಗಳ ತಿಂಡಿ ತಿನಸುಗಳ ಪದ್ಧತಿಯನ್ನು ಪರೀಕ್ಷಿಸಿದಾಗ ಪಾಶ್ಚಾತ್ಯರಂತೆ ಅವರಿಗೂ ಸಿಹಿ ತಿಂಡಿಗಳೇ ಹೆಚ್ಚಾಗಿ ಸೇರುತ್ತಿರುವದು ಕಂಡುಬಂದಿತು. ಬೆಂಗಳೂರಲ್ಲಿಯ ಕಾರ್ಮಿಕರು ಕೂಡ ತೀರ ಹಸಿದಿದ್ದಾಗ ಮತ್ತು ಭೋಜನಾನಂತರ ಸಿಹಿ ತಿಂಡಿಗಳನ್ನೇ ಬಯಸುತ್ತಿರುವದು ಕಂಡು ಬಂದಿತು. ಆದರೆ ಅವರ ದಿನಸಾಮಾನ್ಯ ಆಹಾರದಲ್ಲಿ ಹುಳಿ–ಒಗರು ರುಚಿಗೇ ಪ್ರಾಧಾನ್ಯವಿದ್ದುದು ಕಂಡುಬಂದಿತು. ಇವರು ಹುಣಸೇಹಣ್ಣು, ಮೆಣಸಿನಕಾಯಿ ಉಪಯೋಗಿಸುತ್ತಿರುವದೇ ಕಾರಣವಿರಬೇಕು. ಆದರೂ ಇವರ ರುಚಿ ರೂಢಿ ಹೀಗೇಕೆ ಎಂಬ ಬಗ್ಗೆ ಇನ್ನೂ ತೀವ್ರ ಸಂಶೋಧನ ಅಗತ್ಯ.

## ಇದು ಥಿಯೇಟರ್ ಅಲ್ಲ

**ಕ**ಳೆದ ಶತಮಾನದಲ್ಲಿ ಇಂಗ್ಲಂಡದಲ್ಲಿ ವಿಲಿಯಂ ಫರ್ಗ್ಯೂಸನ್ ಎಂಬ ಶಸ್ತ್ರ ಚಿಕಿತ್ಸೆ ನಿಪುಣನಿದ್ದ. ಇವನ ಗೆಳೆಯ ರಾಬರ್ಟ್ ಲಿಸ್ಟರ್ ಕೂಡ ಶಸ್ತ್ರ ಚಿಕಿತ್ಸೆಯಲ್ಲಿ ಪಾರಂಗತ. ಇವರ ಸ್ವಭಾವಗಳಲ್ಲಿ ಮಾತ್ರ ಮಹದಂತರವಿದ್ದಿತು.

ಒಮ್ಮೆ ವಿಲಿಯಂ ಪ್ರೇಕ್ಷಕರೆದುರು ಒಂದು ಜಟಿಲ ಶಸ್ತ್ರ ಚಿಕಿತ್ಸೆಯನ್ನು ಯಶಸ್ವಿಯಾಗಿ ನೇರವೇರಿಸಿದಾಗ ಆ ಜನ ಚಪ್ಪಾಳೆ ತಟ್ಟಿ ಹರ್ಷೋದ್ರೇಕ ಪ್ರದರ್ಶಿಸಿತು. ವಿಲಿಯಂ ಅಭಿಮಾನದಿಂದ, ಠೀವಿಯಿಂದ ಅವರ ಕರತಾಡನ ಸ್ವೀಕರಿಸಿದ.

ಕೆಲ ದಿನಗಳ ನಂತರ ರಾಬರ್ಟ್ ಲಿಸ್ಟರ ಅಷ್ಟೆ ಜಟಿಲವಾದ ಶಸ್ತ್ರ ಚಿಕಿತ್ಸೆಯೊಂದನ್ನು ಚಾಕಚಕ್ಯತೆಯಿಂದ ಕ್ಷಣಾರ್ಧದಲ್ಲಿ ಯಶಸ್ವಿಯಾಗಿ ಪೂರೈಸಿದ. ಆಗ ಕೂಡ ನೆರೆದಿದ್ದ ಪ್ರೇಕ್ಷಕರು ಚಪ್ಪಾಳೆ ತಟ್ಟಿ ಹರ್ಷೋದ್ಗಾರಗೈದರು.

ತಕ್ಷಣ ಲಿಸ್ಟರ್ ಅವರ ಕಡೆಗೆ ತಿರುಗಿ, "ಮಹನೀಯರೆ, ಇದು ಆಪರೇಶನ್ ಥಿಯೇಟರ್, ಆ ಥಿಯೇಟರ್ ಅಲ್ಲ," ಎಂದು ನುಡಿದು ಅವರೆಲ್ಲರನ್ನು ತೆಪ್ಪಗಾಗಿಸಿದ.

## ವೃದ್ಧರ ಆತ್ಮ ಹತ್ಯೆ

**ಪಾ**ಶ್ಚಾತ್ಯ ದೇಶಗಳಲ್ಲಿ ಕೌಟುಂಬಿಕ ವ್ಯವಸ್ಥೆ ಭಾರತದಲ್ಲಿಯಷ್ಟು ವ್ಯವಸ್ಥಿತವಾಗಿಲ್ಲ. ಅಲ್ಲಿ ವೃದ್ಧರು ತಮ್ಮ ಪುತ್ರ ಪೌತ್ರರಿಂದ ಬೇರೆಯಾಗಿ ವೃದ್ಧ ಶುಶ್ರೂಷಾಲಯಗಳಲ್ಲಿ ವಾಸ ಮಾಡಬೇಕಾದ ಸಂದರ್ಭಗಳೇ ಹೆಚ್ಚು. ನೀರಿನಿಂದ ಹೊರಬಿದ್ದ ಮೀನಿನಂತೆ ಅಲ್ಲಿ ಬಾಳುವ ಈ ವೃದ್ಧರ ಮಾನಸಿಕ ಸಮಸ್ಯೆಗಳು ಬೆಳೆಯತೊಡಗುತ್ತವೆ. ಕುಟುಂಬದ ಪ್ರೀತಿ ಆರೈಕೆಗೆ ಎರವಾದ ಈ ವೃದ್ಧರು ಹತಾಶರಾಗಿ ಆತ್ಮಹತ್ಯೆಗೆ ಎಳಸುತ್ತಾರೆ. ಪಶ್ಚಿಮ ಜರ್ಮನಿಯ ವೆಸ್ಟಫಾಲಿಯಾ ರಾಜ್ಯವೊಂದರಲ್ಲಿಯೆ ೬೫ಕ್ಕೆ ಮಿಕ್ಕಿದ್ದ ವೃದ್ಧರ ಆತ್ಮಹತ್ಯೆಯ ಸಂಖ್ಯೆ ವರ್ಷಂಪ್ರತಿ ೬೦೦ಕ್ಕೂ ಮಿಕ್ಕಿದೆ ಎಂದು ತಿಳಿಯುತ್ತದೆ. ✡

# ಪರಸಂಗದ ಗೆಂಡೆತಿಮ್ಮ

ಮೂಲ: ಶ್ರೀಕೃಷ್ಣ ಆಲನಹಳ್ಳಿ
ಸಂಗ್ರಹ: ರಾಮದೇವ ರಾಕೆ



# ಪರಸಂಗದ ಗೆಂಡೆತಿಮ್ಮ

**['ಕಾಡು' ಖ್ಯಾತಿಯ ಶ್ರೀಕೃಷ್ಣ ಆಲನಹಳ್ಳಿ ಅವರ ಮತ್ತೊಂದು ಕಾದಂಬರಿ ಈ 'ಪರಸಂಗದ ಗೆಂಡೆತಿಮ್ಮ'. ತನ್ನ ಕಥಾ ಪ್ರಸಂಗಗಳ ಕಾರಣದಿಂದಾಗಿ ಜನಮನ ಸೆಳೆದ ಗೆಂಡೆತಿಮ್ಮ ಪರಿಸ್ಥಿತಿಯ ಸೆಳೆತಕ್ಕೆ ಸಿಕ್ಕಿ ಸಮಾಜದ ಕಣ್ಣಲ್ಲಿ ದ್ರೋಹಿಯಾಗಿ ಕಾಣುತ್ತಾನೆ. ತಾನು ಮೆಚ್ಚಿದ ಮಡದಿ ವಂಚನೆ ಮಾಡಿದ್ದರಿಂದ ಗೃಹಸುಖಕ್ಕೂ ಎರವಾಗುತ್ತಾನೆ. ಹೀಗೆ ತನ್ನ ಮೆಚ್ಚಿದ ಸಮಾಜದಲ್ಲೇ ಅನಾಥನಾಗಿ ಜೀವಕ್ಕೆ ಹೇಸಿ ಆತ್ಮಹತ್ಯೆ ಮಾಡಿಕೊಳ್ಳಬೇಕಾದ ಪ್ರಸಂಗ ಗೆಂಡೆತಿಮ್ಮನಿಗೆ ಬಂದುದು ವಿಧಿವಿಲಾಸವೇ ಸೈ. ಶ್ರೀ ಆಲನಹಳ್ಳಿಯವರ ಸರಸ ಕಥಾ ನಿರೂಪಣೆ ಕಾದಂಬರಿಗೆ ಕಳೆಕಟ್ಟಿದೆ. ಅದನ್ನು ಇಲ್ಲಿ ಸಂಗ್ರಹಿಸಿ ನೀಡಲಾಗಿದೆ.]**

ಗೆಂಡೆತಿಮ್ಮನಿಗೆ ಕತ್ತಲಾಗುವ ಮುಂಚೆ ಗೌವಳ್ಳಿಯನ್ನು ಮುಟ್ಟುವ ಅವಸರ. ಅವನು ಇವತ್ತು ಇಷ್ಟು ಅವಸರಿಸಲು ಬೇರೆ ಕಾರಣವಿತ್ತು. ತನ್ನ ಏನೂ ಸಂಭವಿಸಿಯೇ ಇಲ್ಲದಿದ್ದ ಬದುಕಿನಲ್ಲಿ ನಿನ್ನೆಯಷ್ಟೆ ಅದ್ಭುತ ಘಟನೆಯೊಂದು ಸಂಭವಿಸಿ ಅದನ್ನು ತಕ್ಷಣ ತನಗೆ ಅತ್ಯಂತ ಆಪ್ತವಾದ ವ್ಯಕ್ತಿಗೆ ಹೇಳಬೇಕೆನ್ನುವ ಆತುರ.

ಗೆಂಡೆತಿಮ್ಮನ ಊರು ಸಾಲುಂಡಿ ಮೈಸೂರು–ಮಾನಂದವಾಡಿ ರಸ್ತೆಯಲ್ಲಿದ್ದ ಈ ಊರಿಗೆ ಬಸ್ಸಿನ ಅನುಕೂಲವಿತ್ತು. ಅವನು ಅಲ್ಲಿಂದ ಮೈಸೂರಿಗೆ ಬಂದು ತನ್ನ ವ್ಯಾಪಾರದ ಸಾಮಾನುಗಳನ್ನು ಕೊಂಡುಕೊಂಡು ಅಲ್ಲಿಂದ ಯಾವುದೇ ನಾಗರಿಕ ಸಾರಿಗೆ ವ್ಯವಸ್ಥೆ ಇಲ್ಲದ ಹದಿಮೂರು ಮೈಲಿ ದೂರದ ಗೌವಳ್ಳಿಗೆ ಕಾಲು ನಡಿಗೆಯಲ್ಲೋ, ಗೌವಳ್ಳಿಯ ಸೌದೆಗಾಡಿಗಳೇನಾದರೂ ಮೈಸೂರಿಗೆ ಬಂದಿದ್ದರೆ, ಅವು ಸಿಕ್ಕಿದರೆ ಅವುಗಳ ಮೇಲೂ ಹೋಗಿ ಬರುವುದಾಗಿತ್ತು.

ಗೌವಳ್ಳಿಯ ಅಂಗಡಿಯೆಂದರೆ ಗೆಂಡೆತಿಮ್ಮನ ತಲೆಯ ಮೇಲಿನ ದೊಡ್ಡ ಗೂಡೆ. ಮೊದ ಮೊದಲು ಊರ ಜನರ ಮಿತ ಅಗತ್ಯ ವಸ್ತುಗಳಿಗಷ್ಟೆ ಮೀಸಲಾಗಿದ್ದ ಗೂಡೆ ಆಗ ಚಿಕ್ಕದಾಗಿದ್ದುದು ಕ್ರಮೇಣ ಊರಿನಲ್ಲೂ ತರಾವರಿ ಸಾಮಾನುಗಳ ಬಳಕೆ ಬೆಳೆದಂತೆಲ್ಲ ಇವನ ಗೂಡೆ– ಅಂಗಡಿಯೂ ಬೆಳೆದು ದೊಡ್ಡದಾಗಿ ಗೌವಳ್ಳಿಯ ಬೀದಿಗಳ ಉದ್ದಕ್ಕೂ ಮನೆಯಿಂದ ಮನೆಗೆ ಬಯಸಿದ ವಸ್ತುಗಳನ್ನು ಸರಬರಾಜು ಮಾಡುತ್ತ ಆ ಊರಿನ ಪಾಲಿಗೆ ಕಾಮಧೇನುವಾಗಿತ್ತು.

ಗೆಂಡೆತಿಮ್ಮ ವ್ಯಾಪಾರ ಮುಗಿಸಿ ಗೌವಳ್ಳಿಯಿಂದ ವಾಪಸು ಹೋಗುವಾಗ ಮಾತ್ರ ಸೌದೆ ಗಾಡಿ ಕಾಯದೆ ಬೇರೆ ಗತಿ ಇರಲಿಲ್ಲ. ಯಾಕೆಂದರೆ ತಾನು ತರುತ್ತಿದ್ದ ಸಾಮಾನುಗಳಷ್ಟು ಹಗುರವಾಗಿರಲಿಲ್ಲ, ಅದಕ್ಕೆ ಪ್ರತಿಯಾಗಿ ತೆಗೆದುಕೊಳ್ಳುತ್ತಿದ್ದ ರಾಗಿ, ಜೋಳ ಮತ್ತು ಹುರುಳಿ.

ಅವನು ಗೌವಳ್ಳಿಗೆ ಬಂದಾಗಲೆಲ್ಲ ತಂಗುತ್ತಿದ್ದುದು ಊರಿಗೇ ಹೆಸರಾದ ಕುಳ ಮಾಲೇಗೌಡರ ಹಟ್ಟಿ ಜಗಲಿ ಮೇಲೆ. ಆ ಮನೆಯ ಯಜಮಾನಿ ದೇವೀರವ್ವನಿಗೂ ಇವನು ನಿಯತ್ತಿನ ಮನುಷ್ಯ ಅನ್ನಿಸಿತ್ತು.

ಎಲ್ಲಕ್ಕಿಂತ ಗೆಂಡೆತಿಮ್ಮನಿಗೆ ಆ ಮನೆಯಲ್ಲಿ ಅತ್ಯಂತ ಆಪ್ತ ವ್ಯಕ್ತಿಯೆಂದರೆ ಮಾಲೇಗೌಡರ ಮಗ ಹತ್ತು ವರ್ಷದ ಮುದ್ದ. ಮುದ್ದನಿಗೂ ಗೆಂಡೆತಿಮ್ಮ ಅಂದರೆ ತುಂಬಾ ಇಷ್ಟ. ಕಾರಣ ಗೆಂಡೆತಿಮ್ಮನ ಪರಸಂಗಗಳು. ಗೆಂಡೆತಿಮ್ಮನಿಲ್ಲದ ರಾತ್ರಿಗಳು ಗೌಡರ ಪಟ್ಟಿ ಜಗಲಿ ಮೇಲೆ ಬಿಕೊ ಅನ್ನುತ್ತಿದ್ದವು. ಅವನಿದ್ದ ಅಂದರೆ ಗೌಡರ ಮಕ್ಕಳ ಜೊತೆಗೇ ಮಕ್ಕಳ ಹಿಂಡೇ ನೆರೆದು ಬಿಡುತ್ತಿತ್ತು. ಗೆಂಡೆತಿಮ್ಮನ ಪರಸಂಗಗಳೆಂದರೆ ಮುದ್ದನಿಗಂತೂ ಪ್ರಾಣ.

ಹೀಗೆ ಸುಮಾರು ವರ್ಷಗಳ ಕಾಲ ನೂಕಿದ್ದ ಗೆಂಡೆತಿಮ್ಮನ ಒಂದೇ ರೀತಿಯ ಬದುಕಿನಲ್ಲಿ ನಿನ್ನೆಯಷ್ಟೆ ಒಂದು ಹೊಸ ಘಟನೆ ಆಗಿ ಹೋಗಿತ್ತು. ಅದೆಂದರೆ ಅವನ ಮದುವೆಯ ನಿಶ್ಚಯ. ಗೆಂಡೆತಿಮ್ಮನ ದೂರದ ನೆಂಟರ ಮಗಳೇ ಗೊತ್ತಾಗಿತ್ತು. ನಂಜನಗೂಡಿನ ಪಕ್ಕದಲ್ಲೇ ಇದ್ದ ಉಳಿಮಾವು ಅವಳ ಊರು. ಅವಳ ಹೆಸರು ಮರಂಕಿ.

ಊರು ಸಮೀಪಿಸಿದಂತೆಲ್ಲ ಗೆಂಡೆತಿಮ್ಮನಿಗೆ ನಿನ್ನೆಯ ವಿಷಯವನ್ನು ದೇವೀರವ್ವನಿಗೆ ಮತ್ತು ಮುದ್ದನಿಗೆ ಆದಷ್ಟು ಬೇಗ ಹೇಳಬೇಕೆನ್ನುವ ತವಕ ಉತ್ಕಟವಾಗತೊಡಗಿತು. ತನ್ನ ಈ ಪರಿಯ ಉತ್ಕಟತೆಗೆ ಗೆಂಡೆತಿಮ್ಮ ತನಗೆ ತಾನೇ ಬೆರಗಾದ.

೨

ರಾತ್ರಿ ಕತ್ತಲಲ್ಲಿ ಬಂದಿದ್ದ ಗೆಂಡೆತಿಮ್ಮನನ್ನು ಮುದ್ದ ಸರಿಯಾಗಿ ನೋಡಿರಲಿಲ್ಲ. ಬೆಳಗಾದ ಕೂಡಲೆ ಕಣ್ಣುಜ್ಜುತ್ತ ಹೊರಗೆ ಬಂದ ಮುದ್ದನಿಗೆ ಜಗಲಿ ಮೇಲೆ ಕೂತಿದ್ದ ವ್ಯಕ್ತಿ ಯಾರೆಂದು ಗೊತ್ತೇ ಆಗಲಿಲ್ಲ. ಅವನನ್ನೆ ಮಿಕಿ ಮಿಕಿ ನೋಡಿದ. 'ಇದ್ಯಾಕೆ ಮುದ್ದಪ್ಪರೆ ಇಂಗ್ನೋಡಿರಿ' ಎಂದ ಗೆಂಡೆತಿಮ್ಮನ ಅವತಾರ ಮುದ್ದನನ್ನು ದಿಗ್ಭ್ರಮೆಗೊಳಿಸಿತು. ಇವನು ಗೆಂಡೆತಿಮ್ಮನೆ ಅಂತ ಕ್ಷಣ ಅನುಮಾನ ಕೂಡ ಆಯಿತು.

ಗೆಂಡೆತಿಮ್ಮನ ವೇಷವೇ ಪರಿಪೂರ್ಣವಾಗಿ ಪರಿವರ್ತನೆಗೊಂಡು ಬಿಟ್ಟಿದೆ.

ಗೆಂಡೆತಿಮ್ಮನಿಗೆ ಏನಾಯಿತು ಅನ್ನಿಸಿತು ಮುದ್ದನಿಗೆ. ಹೋದ ವಾರವೆಲ್ಲ ಆವ ಬರದಿದ್ದುದಕ್ಕೆ ಕಾರಣ ಹೀಗಾಗುವುದಕ್ಕೆ ಇರಬೇಕು ಅಂದುಕೊಂಡವನೆ 'ಇಷ್ಟು ದಿನ ಎಲ್ಗೆ ಓಗಿದ್ದೆ ಗೆಂಡೆತಿಮ್ಮ?' ಅಂತ ಕೇಳಿದ. ಅಷ್ಟರಲ್ಲಿ ಮುದ್ದನ ಅಕ್ಕ ರತ್ನಿ ಬಾಗಿಲಲ್ಲಿ ಬಂದು ನಿಂತಿದ್ದವಳು 'ಗೆಂಡೆತಿಮ್ಮ ನಿಂಗೆ ಮದ್ವೆ ಗೊತ್ತಾಯ್ತಂತೆ' ಅಂದಾಗ 'ಊಂ ಕಣ್ರವ್ವ, ಅದಕ್ಕೇ ಇತ್ಲಾಕಡಿಕೆ ಒಸಿ ಬರಕಾಗ್ನಿಲ್ಲ' ಎಂದ. ಈ ಸುದ್ದಿ ತನಗೆ ತಿಳಿಯುವ ಮುಂಚೆ ತನ್ನ ಅಕ್ಕನಿಗೆ ತಿಳಿದಿದ್ದುದಕ್ಕೆ ಮುದ್ದನಿಗೆ ತುಂಬಾ ಕೋಪ ಬಂತು. ತನ್ನ ಮದುವೆಯ ವಿಚಾರವನ್ನೂ ಗೆಂಡೆತಿಮ್ಮ ರಾತ್ರಿಯೇ ಮಾಲೇಗೌಡರ ಹತ್ತಿರ ಮತ್ತು ದೇವೀರವ್ವನ ಹತ್ತಿರ ಹೇಳಿದ್ದ. ಅಷ್ಟರಲ್ಲಾಗಲೇ ಮುದ್ದ ಮಲಗಿ ಬಿಟ್ಟಿದ್ದರಿಂದ ಅವನಿಗದು ತಿಳಿಗಿರಲಿಲ್ಲ.

ಆಗ ಪಟ್ಟಿಯ ಜಗಲಿಯಲ್ಲಿ ಮಕ್ಕಳ ಜೊತೆ ಮಾತಾಡುತ್ತಿದ್ದ ಗೆಂಡೆತಿಮ್ಮನ ಸದ್ದು ಕೇಳಿ ದೇವೀರವ್ವ ಅಡಿಗೆ ಮನೆಯಿಂದ ಹೊರಗೆ ಬಂದು ಮತ್ತೊಮ್ಮೆ ಕೇಳಿದರು. ಆಗ ತನ್ನ ಹೆಂಡತಿಯ ಹೆಸರು, ಕುಲ, ಗೋತ್ರ ಮತ್ತು ಮದುವೆಯ ಬಗೆಗೆ ಆಗಿದ್ದ ಮಾತುಕತೆಯನ್ನೆಲ್ಲ ಸವಿವರವಾಗಿ ದೇವೀರವ್ವನಿಗೆ ನಿವೇದಿಸಿದ ಗೆಂಡೆತಿಮ್ಮ. ಉಳಿಮಾವ್ನಲ್ಲೆ ಮದ್ವೆ ಅಂತಲೂ ಹೇಳಿದವ 'ನೀವು ಎಲ್ಲಾರು ಬರ್ನೇ ಬೇಕು' ಎಂದು ಆಗ್ರಹದಿಂದ ಪ್ರಾರ್ಥಿಸಿದ.

ಗೆಂಡೆತಿಮ್ಮ ದೇವೀರವ್ವ ನೀಡಿದ ತಂಗಳೂಟ ಉಂಡವನೇ ತರಾವರಿ ವಸ್ತುಗಳಿದ್ದ ಗೂಡೆಯನ್ನು ಹೊತ್ತು ಗೌವಳ್ಳಿಯ ಬೀದಿಯುದ್ದಕ್ಕೂ ವ್ಯಾಪಾರಕ್ಕೆ ಹೊರಟ. ಅವನ ಜ್ಞಾಪಕಶಕ್ತಿ ಅಸಾಧಾರಣವಾದದ್ದು. ಗೌವಳ್ಳಿಯ ಯಾವ ಮನೆಗೆ ಏನು ಬೇಕು, ತಾನು ಮಾಮೂಲು ತರುವ ವಸ್ತುಗಳ ಜೊತೆಗೆ ಪ್ರತ್ಯೇಕವಾಗಿ ಯಾವ ಮನೆಯವರು ಬೇರೆ ಏನು ತರಲು ಹೇಳಿದ್ದಾರೆ ಎಂಬುದನ್ನೆಲ್ಲಾ ಕಿಂಚಿತ್ತೂ ಮರೆಯದೆ ತಂದು ಕೊಡುತ್ತಿದ್ದ.

ವ್ಯಾಪಾರ ಮುಗಿಸಿದ ಗೆಂಡೆತಿಮ್ಮ ಗೌಡರ ಜಗಲಿಗೆ ಬಂದ.

ರಾತ್ರಿ ಊಟ ಮುಗಿದಿತ್ತು. ಮುದ್ದನಿಗೆ ಪರಸಂಗಗಳನ್ನೂ ಗೆಂಡೆತಿಮ್ಮ ಸಾಮಾನ್ಯ ವಾಗಿ ಕತ್ತಲಾದ ಮೇಲೆ ಹೇಳುತ್ತಿದ್ದುದು. ಆಗಲೆ ಮೂರು ನಾಕು ಅಕ್ಕಪಕ್ಕದ ಮನೆಯ ಐಕಳು ಮುದ್ದನ ಜೊತೆ ಕತಾಸ್ವಾದನಕ್ಕೆ ಹಸಿದು ಕೂತಿದ್ದವು. ಗೆಂಡೆತಿಮ್ಮನ ಕತೆಯ ನಿರೂಪಣೆ ಈದಿನ ತುಂಬಾ ರಸಭರಿತ ವಾಗಿತ್ತು.

ಗೌವಳ್ಳಿಗೆ ಬಂದಾಗ ಗೆಂಡೆತಿಮ್ಮ ಅಲ್ಲಿ ಮೂರು ದಿನವಾದರೂ ಇರುವುದು ವಾಡಿಕೆ. ತಂದಿದ್ದ ಸಾಮಾನೆಲ್ಲ ಒಂದೇ ದಿನಕ್ಕೆ ಮಾರಾಟವಾಗಿಬಿಟ್ಟರೂ ಅವನು ಊರು ಬಿಡುವುದು ಮೂರನೇ ದಿನವೆ. ಈ ಸಲ ಮಾತ್ರ ಗೆಂಡೆತಿಮ್ಮ ಮೂರನೇ ದಿನದ ರಾತ್ರಿಯೇ ಚೆಂಡಣ್ಣನ ಸೌದೆ ಗಾಡಿಯಲ್ಲಿ ಹೊರಟುಬಿಟ್ಟ. ಹೋಗುವಷ್ಟರಲ್ಲಿ ಕಡಮೆ ಅಂದರೆ ಹತ್ತು ಸಲವಾದರೂ ತನ್ನ ಮದುವೆಗೆ ಬಂದೇ ಬರಬೇಕೆಂದು ಗೌಡರ ಪಟ್ಟೆಯವರ ನ್ನೆಲ್ಲಾ ಒತ್ತಾಯಿಸಿದ್ದ.

೩

ನಿರೀಕ್ಷಿಸಿದ್ದ ದಿನಕ್ಕೂ ಮುಂಚೆಯೇ ಮುಂಗಾರು ಮಳೆ ಜಡಿಯತೊಡಗಿತ್ತು. ಯಾರು ಬಂದರೂ ಬಿಟ್ಟರೂ ಗೆಂಡೆತಿಮ್ಮನ ಮದುವೆಯಂತೂ ನಿಲ್ಲಲಿಲ್ಲ. ಸಾಲುಂಡಿಯಿಂದ ಸಾಕಷ್ಟು ಜನ ಗೆಂಡೆತಿಮ್ಮನ ಕಡೆಯವರು ಬಂದಿದ್ದು ಉಳಿಮಾವಿನ ಪರಿವಾರದ ಕೇರಿ ಯಲ್ಲಿ ಮದುವೆ ಶಾಸ್ತ್ರ ಮುಗಿದಿತ್ತು.

ಮರಂಕಿಯ ಅಪ್ಪ ಸಾಕಷ್ಟು ಡೌಲಿ ನಿಂದಲೇ ಮದುವೆ ಮಾಡಿದ. ಬಂದಿದ್ದ ನೆಂಟರು ಊಟ ಉಪಚಾರಗಳನ್ನು ಬಾಯಿ ತುಂಬಾ ಕೊಂಡಾಡಿದರಾದರೂ ಒಳಗೊಳಗೇ ಇಂಥ ಚೆಂದುಳ್ಳಿ ಹೆಣ್ಣನ್ನು ವಯಸ್ಸಾದ ಗೆಂಡೆತಿಮ್ಮನಿಗ ಕೊಡಬೇಕಾದರೆ ಏನೋ.ಒಳಗೆ ಹುಳುಕು ಇರಲೇಬೇಕೆಂದು ಅನುಮಾನಿಸಿ ದರು. ಕೆಲವರ ಕಿವಿಗೆ ಮರಂಕಿ ಪ್ಯಾಟೆ ರುಚಿ ಕಂಡು ಬಂದ ಹೆಣ್ಣು ಅನ್ನುವ ಪಿಸು ಮಾತು ಗಳು ಅದಾಗಲೇ ಮುಟ್ಟಿದ್ದವು.

ಗೆಂಡೆತಿಮ್ಮನ ಅಣ್ಣ ಗೂಳನಾಯ್ಕ ಮತ್ತು ಅವ್ವ ಬೇದಿಯಮ್ಮ ಹೆಣ್ಣು ಗಂಡನ್ನು ಆ ದಿನವೇ ಕರೆದೊಯ್ಯಲು ನಿರ್ಧರಿ ಸಿದರು.

ಸಾಲುಂಡಿಯ ಗಾಡಿಗಳೆಲ್ಲ ಹೊರಟು ನಿಂತವು. ಮರಂಕಿ ಹೆಣ್ಣಿಗೆ ಸಹಜವಾದ ದುಃಖ ದುಮ್ಮಾನಗಳೊಡನೆ ತೌರನ್ನು ಅಗಲಿ ಗೆಂಡೆತಿಮ್ಮನ ಅರ್ಧಾಂಗಿಯಾಗಿ ಗಾಡಿಯ ನ್ನೇರಿ ಕೂತಳು. ಸಾಲು ಗಾಡಿಗಳ ಮಧ್ಯೆ ಇದ್ದ ಹೆಣ್ಣು–ಗಂಡಿನ ಗಾಡಿಗೆ ಕಟ್ಟಿದ್ದ ಎತ್ತು ಗಳು ಜೋರಾಗಿದ್ದವು. ದಾರಿಯಲ್ಲಿ ಸಾಗು ತ್ತಿದ್ದಾಗ ಅನಾಯಾಸವಾಗಿ ಮರಂಕಿಯ ಮೈ ಗೆಂಡೆತಿಮ್ಮನ ಮೈಗೆ ತಾಕುತ್ತಿತ್ತು. ಮೊದ ಮೊದಲು ಯಾರಾದರೂ ಕಂಡುಬಿಟ್ಟಾ ರೇನೋ ಎಂದು ದೂರ ಸರಿದುಕೊಳ್ಳುತ್ತಿದ್ದ ವನು ಕತ್ತಲು ಕವಿದುಕೊಳ್ಳುತ್ತಿದ್ದಂತೆ ನಿರ್ಭಯವಾಗಿ ಮರಂಕಿಯನ್ನು ಒತ್ತರಿಸಿಯೇ ಕೂತುಬಿಟ್ಟ.

ಅಂದುಕೊಂಡಂತೆ ಊಟದ ಹೊತ್ತಿಗೆ ಗಾಡಿ ಗಳು ಸಾಲುಂಡಿ ಸೇರಿದವು. ಮದುವೆಗೆ ಬರ ದಿದ್ದ ಪರಿವಾರದ ಕೇರಿಯವರು ಗೆಂಡೆ ತಿಮ್ಮನ ಹೆಂಡತಿಯನ್ನು ನೋಡುವ ಸಲು ವಾಗಿ ಅವನ ಮನೆಯ ಮುಂದೆ ಗೇರಾಯಿ ಸಿದ್ದರು. ಮರಂಕಿಯ ಚೆಲುವು ಎಲ್ಲರ ಕಣ್ಣನ್ನೂ ಕುಕ್ಕದಿರಲಿಲ್ಲ. ಅಸೂಯೆಯಿಂದ ಕೆಲವರು 'ಈ ಕೆಂಚಿ ತುದವ್ವಲ್ಲ, ಇವಳ ಜೊತೆಗೆ ನೀಗಕ್ಕೆ ಆದದ' ಅಂತ ಅಂದು ಕೊಂಡಿದ್ದೂ ಉಂಟು.

ಐದನೆಯ ದಿನಕ್ಕೆ ಬೀಗರೂಟ. ಒಂದು ಮಜಬೂತದ ಟಗರನ್ನು ಕಡಿದರು. ಉಳಿ ಮಾವಿನಿಂದ ಬಂದ ಹೆಣ್ಣಿನ ಕಡೆಯವರಿಗೆ ಸಾಕು ಅನ್ನುವಂತೆ ಬಾಡಿನ ಸಮಾರಾಧನೆ. ಅಂತೇ ಸಾಲುಂಡಿಯಲ್ಲಿ ಹೆಂಡಕ್ಕೂ ಕೊರತೆ ಯಿರಲಿಲ್ಲ. ಹೀಗೆ ಕುಡಿವ, ತಿನ್ನುವ ಸಂಭ್ರಮದಲ್ಲಿ ಆ ರಾತ್ರಿ ಕಳೆದದ್ದೇ ಯಾರಿಗೂ ಅರಿವಾಗಲಿಲ್ಲ.

ಉಳಿವಾವಿಗೆ ಮತ್ತೆ ಹೆಣ್ಣು-ಗಂಡನ್ನು ಕರೆದು ತಂದ ದಿನವೇ ಪ್ರಸ್ತವನ್ನೂ ಮಾಡಿ ಬಿಟ್ಟರು. ಮರಂಕಿಯ ಆರೋಗ್ಯಪೂರ್ಣ ಅಂಗಾಂಗಗಳ ಏರಿಳಿವಿನಲ್ಲಿ ಗೆಂಡೆತಿಮ್ಮ ಕರಗಿ ಬಿಟ್ಟ. ಅಲ್ಲದೆ ಬೇರೆ ಹೆಂಗಸರಂತಲ್ಲದೆ ತನ್ನ ಹೆಂಡತಿ ರವಿಕೆಯೊಳಗೊಂದು ಬಾಡಿ ಮತ್ತೆ ತನ್ನೂರಲ್ಲಾಗಲಿ ಗೌವಳ್ಳಿಯಲ್ಲಾಗಲಿ ಯಾರೂ ಉಟ್ಟಿರದ ಸೀರೆಯೊಳಗೆ ಒಂದು ಬಿಳಿಯ ಲಂಗವನ್ನೂ ಉಟ್ಟುಕೊಂಡಿದ್ದುದು ಗೆಂಡೆತಿಮ್ಮನಿಗೆ ಸೋಜಿಗವೆನಿಸಿದಂತೆ ಖುಷಿಯನ್ನೂ ಉಂಟುಮಾಡಿತ್ತು. ಅಲ್ಲದೆ ಘಮ ಘಮಿಸುತ್ತಿದ್ದ ತನ್ನ ಹೆಂಡತಿಯ ಬಗ್ಗೆ ಯಾಕೋ ಒಂದು ಬಗೆಯ ಭಯವೂ ಉಂಟಾಗಿತ್ತು.

೪

ಗೌವಳ್ಳಿಯಲ್ಲಿ ಎಳ್ಳು ಜೋಳದ ಬಿತ್ತನೆ ಕೆಲಸ ಮುಗಿದ ವಾರಕ್ಕೆ ಸರಿಯಾಗಿ ಗೆಂಡೆತಿಮ್ಮ ತನ್ನ ಮದುವೆಯ ಸಡಗರವೆಲ್ಲ ಮುಗಿಯಲು ಮಾಮೂಲಿ ತನ್ನ ಗೂಡೆ ಅಂಗಡಿಯೊಡನೆ ಗೌವಳ್ಳಿಗೆ ಹಾಜರಾದ. ಸಿಕ್ಕವರೆಲ್ಲ ಗೆಂಡೆತಿಮ್ಮನ ಮದುವೆಯ ವಿಚಾರವನ್ನೂ, ತಾವು ಬರಲಾಗದಿದ್ದುದಕ್ಕೆ ಮಳೆ ಬಿದ್ದು ಬಿತ್ತನೆಗೆ ತೊಡಗಿದ್ದ ಸಬೂಬನ್ನೂ ಹೇಳಿದರು.

ಮಾಲೇಗೌಡರ ಹಟ್ಟಿಯೊಳಗೆ ಕಾಲಿಡುತ್ತಿದ್ದಂತೆ ಮುದ್ದ ಓಡಿ ಬಂದ. ಮದುವೆಯಾದ ಮೇಲೆ ಗೆಂಡೆತಿಮ್ಮ ಗೌವಳ್ಳಿಗೆ ಬರುವುದೇ ಇಲ್ಲವೇನೋ ಅಂದುಕೊಂಡಿದ್ದ ಮುದ್ದನಿಗೆ ಇವತ್ತು ಅವನು ಹಠಾತ್ತನೇ ಎಲ್ಲಿಂದಲೋ ಇಳಿದು ಬಂದವನಂತೆ ಬಂದಿದ್ದು ಕಂಡು ತುಂಬಾ ಆನಂದವಾಯಿತು. ಗೆಂಡೆತಿಮ್ಮನಿಗೆ ಗೌಡರ ಮನೆಯಿಂದ ಮದುವೆಗೆ ಯಾರೂ ಬರದಿದ್ದರೂ ಅದರ ಬಗ್ಗೆ ಅಸಮಾಧಾನವೇನೋ ಆಗಿರಲಿಲ್ಲ. ಮೊದಲೇ ಗೌಡರು ಹೇಳಿದ್ದರು ಮಳೆಯೇನಾದರೂ ಬಿದ್ದರೆ ಯಾರೂ ಬರಲಾಗುವುದಿಲ್ಲ ಎಂಬುದನ್ನು.

ರಾತ್ರಿ ಉಂಡು ಮಲಗುವ ಹೊತ್ತಾದರೂ ಗೆಂಡೆತಿಮ್ಮನ ಮದುವೆಯ ವಿಚಾರದ ಮಾತು ಮುಗಿಯಲಿಲ್ಲ.

ತಮಾಷೆಯೆಂದರೆ ಗೆಂಡೆತಿಮ್ಮ ಕಡೆಯಲ್ಲಿ ಮುದ್ದನಿಗೆ ಹೇಳಿದ ಅವನ ಹೆಂಡತಿಯ ಬಾಡಿ, ಲಂಗದ ವಿಷಯಗಳು. ಮುದ್ದನ ಮನೆಯಲ್ಲಿ ಅವನ ಅವ್ವನಾಗಲಿ, ಅಥವಾ ಊರಲ್ಲಿ ಇನ್ನ್ಯಾರೇ ಆಗಲಿ ಅವನ್ನು ಉಡುವುದು ಗೊತ್ತಿಲ್ಲದ್ದರಿಂದ ಅವುಗಳ ವಿಚಾರ ಮುದ್ದನಿಗೆ ತುಂಬಾ ಕುತೂಹಲವನ್ನುಂಟು ಮಾಡಿತು.

ಹೊಸದಾಗಿ ಬಂದಿದ್ದ ಹೆಂಡತಿಯನ್ನು ಬಿಟ್ಟುಬಂದ ಗೆಂಡೆತಿಮ್ಮನಿಗೂ ನಿದ್ದೆ ಹತ್ತಲಿಲ್ಲ. ಅವಳ ಹುಚ್ಚು ಹಿಡಿಸುವಂತ ಕಣ್ಣುಗಳು ಅವನನ್ನು ಕಾಡತೊಡಗಿದವು.

ಗೆಂಡೆತಿಮ್ಮ ಬೆಳಗ್ಗೆ ಎದ್ದದ್ದೇ ವ್ಯಾಪಾರ ಮುಗಿಸಿ ಸಂಜೆಯ ಹೊತ್ತಿಗೆ ಊರಿಗೆ ಹೊರಟು ಬಿಟ್ಟ. ಹೀಗೆ ಹಿಂದೆಂದೂ ಆಗಿರಲಿಲ್ಲ. ಎಲ್ಲಾ ಹೊಸದು ಅನಿಸಿತು. ಹಾಗೆಯೇ ಗೆಂಡೆತಿಮ್ಮನಿಗೂ ಅನಿಸದಿರಲಿಲ್ಲ. ಅವನೆಂದೂ ಗೌವಳ್ಳಿಯನ್ನು ಬಿಡಲು ಆತುರಪಟ್ಟವನಲ್ಲ, ಈ ಸಲ ಸೌದೆಗಾಡಿಯನ್ನೂ ಕಾಯಲಿಲ್ಲ. ತಾನು ಹೊರಲು ಸಾಧ್ಯವಾದಷ್ಟು ರಾಗಿಯನ್ನು ಮಾತ್ರ ಗೂಡೆಗೆ ತುಂಬಿ 'ಮುಂದಿನ ಸ್ವಾವ್ಮಾರ ಬರ್ತೀನಿ ಕಣ್ರವ್ವ' ಎಂದು ದೇವೀರವ್ವನಿಗೆ ಹೇಳಿ ಹೊರಟ. ದೇವೀರವ್ವನಿಗೆ ಗೆಂಡೆತಿಮ್ಮನ ಅವಸರ ಅರ್ಥವಾಗಿತ್ತು.

೫

ಮರಂಕಿ ಸೊಸೆಯಾಗಿ ಮನೆಗೆ ಕಾಲಿಕ್ಕುತ್ತಿದ್ದಂತೆ ಗೆಂಡೆತಿಮ್ಮನ ಮನೆಯ ಸ್ಥಿತಿಯೇ ಬದಲಾಗತೊಡಗಿತ್ತು. ಸದಾ ಗಲೀಜಾಗಿದ್ದ ಮನೆಯೀಗ ಅಚ್ಚುಕಟ್ಟಾಗತೊಡಗಿತು. ಅವರ ಕೋಳಿ ನಾಯಿಗಳಿಗೆ ಅಂಗಳವೇ ಆಶ್ರಯವಾಯಿತು. ಇದನ್ನೆಲ್ಲ ಕಂಡು ಬೇದಿಯಮ್ಮ ನಗಾಡುತ್ತ 'ಒಳ್ಳೆ ಅರುವಗಿತ್ತಿ ಸುದ್ದ ಆಯ್ತಲ್ಲ ಇವಳ್ದು' ಅನ್ನುತ್ತಿದ್ದಳು.

ಬಂಗಾರದಂಥ ಸೊಸೆ ಸಿಕ್ಕಿದಳೆಂದು ಬೇದಿಯಮ್ಮ ಬೀಗುತ್ತಿದ್ದಳಾದರೂ ಕ್ರಮೇಣ ಮರಂಕಿಯ ರೀತಿ ನೀತಿಗಳು ತಾವು ಇಷ್ಟ

ದಿನ ಬದುಕುತ್ತಿದ್ದ ಬದುಕಿಗೆ ತುಂಬಾ ವಿರುದ್ಧವಾದುದು ಎಂಬುದು ಅರಿವಾಗುತ್ತ, ಅವಕ್ಕೆ ಹೊಂದಿಕೊಳ್ಳುವುದು ಸಾಧ್ಯವೇ ಆಗದ ಅನುಭವವಾಗುತ್ತಿದ್ದಂತೆ ಮನೆಯಲ್ಲಿ ಕಿರಿಕಿರಿ ಪ್ರಾರಂಭವಾಗತೊಡಗಿತು. ಮರಂಕಿಗೂ ಸಹ ತನ್ನ ಇಡೀ ಬದುಕೆಲ್ಲ ಹೆಣಗಾಡಿದರೂ ಈ ಮನೆಯ ರಿಪೇರಿ ಆಗುವುದಿಲ್ಲವೆಂದೆ ಅನಿಸಿತು. ಈ ನಡುವೆ ಸಂಕಟಕ್ಕೆ ಸಿಕ್ಕವನೆಂದರೆ ಗೆಂಡೆತಿಮ್ಮನೆ. ಯಾರಿಗೂ ನಿಷ್ಠುರವಾಗಲಾರ.

ಮರಂಕಿ ಬೆಳಗೆದ್ದು ಮುಖ ತೊಳೆದು ತಲೆ ಬಾಚಿಕೊಂಡೇ ಎಲ್ಲಾ ಕೆಲಸಗಳಿಗೂ ತೊಡಗುವುದು, ವಾರಕ್ಕೆ ಎರಡು ಸಲವಾದರೂ ಸ್ನಾನ ಮಾಡುವುದು, ದಿನ ಬಿಟ್ಟು ದಿನ ಸೀರೆ ಉಡುವುದು, ಮಾಸಿದ ಸೀರಿಬಟ್ಟೆಗಳನ್ನು ಅತ್ತೆ ಮತ್ತು ವಾರಗಿತ್ತಿಯಂತೆ ಚೌಳುಮಣ್ಣಿನಲ್ಲಿ ಒಗೆಯದೆ ಸಾಬೂನಿನಿಂದಲೆ ಒಗೆಯುವುದು, ತಲೆಗೆ ಕೈಯೆಣ್ಣೆಗೆ ಬದಲಾಗಿ ಗಮನದ ಎಣ್ಣೆ, ಒಳಗಿನ ಲಂಗ ಕಾಣುವಂತೆ ತೆಳ್ಳನೆ ಸೀರೆ, ಒಂದೊಂದು ಸಲ ಜಡೆ ಹಾಕಿಕೊಂಡು ಅದಕ್ಕೆ ಬಣ್ಣದ ಟೇಪು ಕಟ್ಟಿಕೊಳ್ಳುವುದು, ಇವೆಲ್ಲ ಆ ಮನೆಗೇನು ಊರಿಗೂ ಸಾಕಷ್ಟು ಹೊಸದಾಗಿದ್ದವು.

ಗೆಂಡೆತಿಮ್ಮ ಗೌವಳ್ಳಿಗೆ ಹೋದರೆ ಮೊದಲ ಹಾಗೆ ಮೂರು ನಾಕು ದಿನ ಮಾಡದೆ ಮಾರನೆಯ ರಾತ್ರಿಯೇ ಬಂದುಬಿಡುತ್ತಿದ್ದ. ಬೇದಿ-ಯಮ್ಮನಿಗೆ ಇದೂ ತಪ್ಪೆನಿಸಿತು...! 'ಈ ಮಾಯಗಾತಿ ಬಂದು ಬಸವಣ್ಣನಂಥ ನನ್ನ ಮಗನ್ನ ಕೋತಿ ಕುಣಿಸ್ದಂಗೆ ಕುಣಿಸ್ತಾಳೆ' ಎಂದು ಆಡುತ್ತಿದ್ದಳು. ದಿನವೂ ಮನೆಯ ವಾತಾವರಣ ಬಿಗಡಾಯಿಸತೊಡಗುತ್ತಾ—ಲೊಳ್ಳೆ ಲೊಟ್ಟೆ ಅಂತ ಏನಾದರೊಂದು ಜಗಳ ಇದ್ದುದೆ. ಗೆಂಡೆತಿಮ್ಮನಿಗೆ ಇತ್ತೀಚೆಗೆ ಇದೆಲ್ಲ ತಲೆ ಚಿಟ್ಟೆನಿಸಿತು. ಒಂದು ದಿನ ಮರಂಕಿಯ ಮೇಲೆ ನಿಜವಾಗಿಯೂ ಕೋಪಗೊಂಡು ಬಾಯಿಗೆ ಬಂದದ್ದನ್ನು ಆಡಿ ಮುನಿಸಿಕೊಂಡಿದ್ದ. ಮರಂಕಿ ಅತ್ತೂ ಕರೆದು ರಂಪ ಮಾಡಿದಳು.

ಇದಾದ ವಾರಕ್ಕೆ ಉಳಿಮಾವಿನಿಂದ ಮರಂಕಿಯ ಅಪ್ಪ ಕರೆಯಲು ಬಂದ. ಬೇದಿಯಮ್ಮ ಅವನ ಮುಂದೆ ಮರಂಕಿಯ ನಡತೆಯ ಸುದೀರ್ಘ ಉಪಾಖ್ಯಾನ ಮಾಡಿದಳು. ತನ್ನ ಮಗಳ ರೀತಿ ಚೆನ್ನಾಗಿ ಗೊತ್ತಿದ್ದ ಅವನು 'ಏನೊ ತಿಳೀದವಳು, ಅಂಗೆಲ್ಲ ಮಾಡಿದ್ನೆಲ್ಲ ನೀವೂ ತಿದ್ದಕಬೇಕು, ಅವ್ವಿಲ್ಲದ ಮೊಗ ಅಂತ ನಾನೂ ವಸಿ ಮುಂದ್ನಲ್ಲೆ ಸಾಕ್ಬುಟ್ಟೆ, ಬೈದು ವಗತಾನ ಕಲ್ಸಿ' ಎಂದು ಬೇದಿಯಮ್ಮನ ಬೊಬ್ಬಾಟವನ್ನು ಒಳ್ಳೆಯ ಮಾತಿನಲ್ಲೆ ತೇಲಿಸಿದ.

ಬೆಳಿಗ್ಗೆ ಮರಂಕಿ ಅಪ್ಪನ ಜೊತೆ ಹೊರಟಾಗ ಗೆಂಡೆತಿಮ್ಮನೂ ವ್ಯಾಪಾರದ ಸಲುವಾಗಿ ಗೌವಳ್ಳಿಗೆ ಹೋಗಲು ಅವರನ್ನು ಕೂಡಿಯೇ ಹೊರಟ. ಇದನ್ನು ಕಂಡು ಬೇದಿಯಮ್ಮ ಕಿಡಿಕಿಡಿಯಾದಳು. ಅಪ್ಪ ಮಗಳು ಒಟ್ಟಿಗೇ ಮಗನ ತಲೆ ಕೆಡಿಸುತ್ತಾರೆಂದು ಗೊಣಗಾಡಿದಳು.

ಹೆಂಡತಿ ಮಾವರ ಜೊತೆ ಮೈಸೂರಿನ ತನಕ ಬಂದ ಗೆಂಡೆತಿಮ್ಮ ತಾನು ಸಾಮಾನು ಕೊಳ್ಳಲು ಇನ್ನು ಹೋಗುತ್ತೇನೆ ಅಂದಾಗ ಅವನ ಮಾವ 'ಕಾಪಿ ಕುಡ್ಕಂಡೋಗಯಿ' ಎಂದು ಹೊಟಲಿಗೆ ಕರೆದೊಯ್ದ. ಅಲ್ಲಿ ಗೆಂಡೆತಿಮ್ಮನಿಗೆ ಮುಂದುವರಿಯುವ ಮಾರ್ಗದ ಬಗೆಗೆ ಉಪದೇಶ ನೀಡಿದ. ಮಾಡುವ ವ್ಯಾಪಾರದಲ್ಲಿ ಬರುವುದನ್ನೆಲ್ಲ ಮನೆಗೆ ಕೊಟ್ಟರೆ ಹೇಗೆ? ಒಂದಿಷ್ಟು ಉಳಿಸಿ ಇಟ್ಟುಕೊಂಡರೆ ಆಪತ್ತಿಗೆ ಆಗುತ್ತೆ. ಕೈಕಾಲು ಗಟ್ಟಿಯಾಗಿರುವ ತನಕ ಯಾವುದೂ ತಿಳಿಯುವುದಿಲ್ಲ. ಆಮೇಲೆ ತಾನೆ ಎಲ್ಲ. ಮಾವನ ಮಾತುಗಳು ಗೆಂಡೆತಿಮ್ಮನಿಗೆ ತುಂಬಾ ಅಲಾಲ-ಕೋರತನದ ಮಾತುಗಳೆನಿಸಿದವು. ಯಾಕೆಂದರೆ ಗೆಂಡೆತಿಮ್ಮ ಇದನ್ನೆಲ್ಲ ಎಂದೂ ಯೋಚಿಸಿದವನೂ ಕೂಡ ಅಲ್ಲ, ಏನೂ ಮಾತಾಡದೆ ಹೋಟಲಿಂದ ಹೊರಗೆ ಬಂದವನೆ 'ನಾನಿನ್ನು ಬತ್ತೀನಿ' ಎಂದು ಮರಂಕಿಗೆ ಮೆಲ್ಲಗೆ ಮಾವ ಕಾಣದಂತೆ ರೂಪಾಯಿನ ನೋಟೊಂದನ್ನು ಕೊಟ್ಟು ಅವರಿಂದ ಬೇರೆಯಾದ.

೬

ಮದುವೆಯಾಗಿ ಮೂರು ತಿಂಗಳಾಗಿತ್ತು. ಯಾವತ್ತೂ ಹೀಗೆ ಗಾಢವಾಗಿ ಗೆಂಡೆತಿಮ್ಮ ಯೋಚನೆಗೆ ಒಳಗಾಗಿರಲಿಲ್ಲ. ಮರಂಕಿಯದೂ ತಪ್ಪಿಲ್ಲ ಅಂದುಕೊಂಡ. ಅವಳು ಹೇಳುವುದೆಲ್ಲ ಒಳ್ಳೆಯದಕ್ಕೆ ಅಲ್ಲವ? ಅವ್ವ, ಅತ್ತಿಗೆ ಅದಕ್ಯಾಕೆ ವ್ಯಾಜ್ಯಮಾಡಬೇಕೋ ಅರ್ಥವಾಗದು.

ಈ ಸಲ ಗೆಂಡೆತಿಮ್ಮ ಗೌವಳ್ಳಿಗೆ ಬಂದವನು ಮಾರನೇ ದಿನವೇ ಹೊರಟು ನಿಲ್ಲಲಿಲ್ಲ.

ಅವತ್ತು, ಗೌವಳ್ಳಿಯಿಂದ ವ್ಯಾಪಾರ ಮುಗಿಸಿ ಬಂದವನೆ ತಾನಾಗಿಯೆ ಅವ್ವನ ಹತ್ತಿರ ಮರಂಕಿಯನ್ನೂ ಕರೆದು ತರುವ ಪ್ರಸ್ತಾಪ ಮಾಡಿದ. ಮಗನ ಮಾತನ್ನು ಕೇಳುತ್ತಿದ್ದ ಹಾಗೆ ಬೇದಿಯಮ್ಮ ತುಂಬಾ ಸಿಡಿಮಿಡಿಗೊಂಡಳು. ಮರಂಕಿ ತೌರಿಗೆ ಹೋಗಿ ಒಂದು ತಿಂಗಳಾಗುತ್ತ ಬಂದರೂ ಯಾರೂ ಅದರ ಬಗ್ಗೆ ಚಕಾರವೆತ್ತಲಿಲ್ಲ. ಗೆಂಡೆತಿಮ್ಮನಿಗೆ ತುಂಬಾ ನಿರಾಶೆಯಾಗಿತ್ತು. ಬೇದಿಯಮ್ಮನಿಗೆ ಯಾಕೋ ಮರಂಕಿಯನ್ನೂ ಕರೆದು ತರುವುದಕ್ಕೇ ಭಯವಾಗುತ್ತಿತ್ತು. ಬೇದಿಯಮ್ಮ ಗೆಂಡೆತಿಮ್ಮನಿಗೆ 'ಅಷ್ಟು ಅವಸರ ಆಗಿದ್ರೆ ನೀನೇ ಕರ್ಕಂಡು ಬರೋಗು. ಅವಳ ಕೈಲೆ ಅಟ್ಟಿಸ್ಕಂಡು ಉಂಡ್ರೆ ನಿಂಗೆ ಮೈಯುತ್ತದು ಅಲ್ವ' ಅಂತ ರೇಗಿ ಮಾತಾಡಿದಳು. ಗೆಂಡೆತಿಮ್ಮನಿಗೆ ಅವ್ವನ ಮಾತು ಕೇಳಿ ತಾನು ಯಾಕಾದರೂ ಈ ಸುದ್ದಿ ಎತ್ತಿದನೋ ಅನ್ನಿಸಿತು. ಅವ್ವನ ಬಾಯಿ ನಿಂತಿರಲಿಲ್ಲ. ಅವನ ತಲೆ ಚಿಟ್ಟಿಡಿದಂತಾಗಿ ಮನೆಯಿಂದ ಹೊರಗೆ ಬಂದ. ಜಗಲಿಯ ಮೇಲೆ ಬೀಡಿ ಸೇದುತ್ತ ಅಣ್ಣ ಕೂತಿದ್ದ. ಒಳಗೆ

ತನಗೂ ಅವ್ವನಿಗೂ ನಡೆದ ಮಾತುಕತೆಲ್ಲ ಅವನಿಗೆ ಕೇಳಿಸಿತ್ತಾದರೂ ಅವನು ಅದರ ಬಗ್ಗೆ ತುಟಿಪಿಟ್ಟೆನ್ನದೆ ಕೂತಿದ್ದ. ಗೆಂಡೆತಿಮ್ಮನಿಗೆ ಅವನನ್ನಾದರೂ ಒಂದು ಸಲ ಕೇಳಬೇಕೆನ್ನಿಸಿತಾದರೂ ಕೇಳದೆ ಊರ ಮಾರಿಗುಡಿಯತ್ತ ನಡೆದ.

## ೨

ಉಳಿಮಾವಿನಲ್ಲಿದ್ದ ಮರಂಕಿಗೆ ಇಷ್ಟು ದಿನವಾದರೂ ತನ್ನ ಅತ್ತೆ ಮನೆಯಿಂದ ತನ್ನನ್ನು ಕರೆಯಲು ಯಾರೂ ಬರದಿದ್ದುದು ಯಾವ ಬಗೆಯ ದುಗುಡವನ್ನಾಗಲಿ ಇಲ್ಲವೆ ಆತಂಕವನ್ನಾಗಲಿ ಉಂಟುಮಾಡಿರಲಿಲ್ಲ. ಆದರೆ ಅವಳ ಅಪ್ಪ ಮತ್ತು ಅವಳ ಚಿಕ್ಕವ್ವ (ಮಲತಾಯಿ) ಕಳವಳಕ್ಕೆ ಒಳಗಾಗಿದ್ದರು. ಮರಂಕಿಗೆ ಅದರ ಪರಿವೆಯೇ ಇರಲಿಲ್ಲ. ವಾರಕ್ಕೆ ಎರಡು ಸಲವಾದರೂ ಏನಾದರೂ ಮನೆಗೆ ಬೇಕಾದ ಸಾಮಾನು ತರುವ ನೆಪದಲ್ಲಿ ನಂಜನಗೂಡಿಗೆ ಹೋಗಿ ಬರುತ್ತಿದ್ದಳು. ಮರಂಕಿಯ ಸೋದರಮಾವನ ಮನೆ ನಂಜನಗೂಡಿನಲ್ಲೇ ಇತ್ತು. ಅವಳ ಮಾವನ ಮಗ ಮಹದೇವನಾಯಕನ ನೆನಪಾದರೆ ಸಾಕು, ಮರಂಕಿಗೆ ಮೈ ಜುಮ್ಮೆನ್ನುತ್ತಿತ್ತು. ಅವನಿಗೆ ಮದುವೆಯಾಗಿ ಎರಡು ಮಕ್ಕಳೂ ಇದ್ದರು. ಅವನ ಹೆಂಡತಿ ಯಾವಾಗಲೂ ರೋಗದ ಮುದ್ದೆ. ಆದ್ದರಿಂದ ಅವನು ಮರಂಕಿಯನ್ನು ಕಂಡರೆ ತಟ್ಟನೆ ಪ್ರಾಯದ ಹುಡುಗನಾಗಿ ಚೆಲ್ಲಾಟಕ್ಕೆ ಹಾತೊರೆಯುತ್ತಿದ್ದ.

ಮರಂಕಿಗೆ ಸಿನಿಮಾ ಅಂದರೆ ಪ್ರಾಣ. ಅವಳ ನಂಜನಗೂಡಿನ ಆಕರ್ಷಣೆಗೆ ಇದೂ ಒಂದು ಮುಖ್ಯ ಕಾರಣವೆ. ಯಾವ ಹೊಸ ಸಿನಿಮಾ ಬಂದರೂ ಅವಳಿಗೆ ಹೇಗೋ ಗೊತ್ತಾಗಿ ಬಿಡುತ್ತಿತ್ತು. ಅವಳು ನಂಜನಗೂಡಿಗೆ ಹೊರಟಾಗ, ಚಿಕ್ಕವ್ವ ಅಪ್ಪ ಉಳಿಯದೆ ಬಂದುಬಿಡಬೇಕೆಂದು ಆಜ್ಞಾಪಿಸಿದರೂ ಅದನ್ನು ಉಲ್ಲಂಘಿಸಿ ಒಂದು ರಾತ್ರಿ ಕಳೆದೇ ಬರುತ್ತಿದ್ದಳು. ಮದುವೆಯ ನಂತರ ಅವಳೀಗ ಯಾವ ಭಯವೂ ಇಲ್ಲದೆ ನಂಜನಗೂಡಿಗೆ ಹೋಗಿ ಒಂದೆರಡು ದಿನದಮಟ್ಟಿಗೆ ಅಲ್ಲೇ ಉಳಿದು ಬರುತ್ತಿದ್ದಳು.

ಹೀಗಿದ್ದಾಗ ಗಗೌಡ್ರ ಶಿವಣ್ಣ ನಾಳೆ ಮರಂಕಿಯನ್ನು ಕರೆದುಕೊಂಡು ಹೋಗಲು ಅವಳ ಅತ್ತೆ ಮನೆಯಿಂದ ಬರುತ್ತಾರೆ ಎಂಬ ಸುದ್ದಿಯನ್ನು ಹೊತ್ತು ತಂದ. ಅವನು ಉಳಿಮಾವಿನವನೇ ಆಗಿದ್ದು ವಸಿದಿನದಿಂದ ಸಾಲುಂಡಿ ಇಸ್ಕೂಲಲ್ಲಿ ಮೇಸ್ತ್ರ ಚಾಕರಿಗೆ ಸೇರಿದ್ದ.

ಮರಂಕಿಗೆ ಗಂಡನ ಮನೆಗೆ ಹೋಗುವ ವಿಷಯ ಅಂಥ ಆನಂದದ್ದೇನೂ ಆಗಿರಲಿಲ್ಲ. ತನ್ನ ಗಂಡನ ಬಗ್ಗೆ ನಿಜವಾದ ಪ್ರೀತಿ ಇದ್ದಿತಾದರೂ ಆ ಮನೆಯಲ್ಲಿನ ಕಿರಿ ಕಿರಿ ಅವಳಿಗೆ ಸಾಕಾಗಿ ಹೋಗಿತ್ತು.

ಬೆಳಿಗ್ಗೆ ಹೇಳಿದ್ದ ಹೊತ್ತಿಗೆ ಸರಿಯಾಗಿ ಗೂಳನಾಯಕ ಮತ್ತು ಅವನ ಹೆಂಡತಿ ಕರೆಯಲು ಬಂದರು. ಮಧ್ಯಾಹ್ನ ಉಂಡು ಮರಂಕಿಯನ್ನು ಕರೆದುಕೊಂಡು ಹೊರಟರು. ಮರಂಕಿ ಮಾಮೂಲು ದುಃಖತಪ್ಪಳಾಗಿ ತೌರನ್ನು ಅಗಲಿದಳು.

## ೩

ಗೆಂಡೆತಿಮ್ಮನಿಗೆ ಮರಂಕಿಯ ಪುನರಾಗಮನದಿಂದ ಪರಮಾನಂದವಾಗಿತ್ತು. ಆದರೆ ಮರಂಕಿಗೆ ಮಾತ್ರ ತಿಂಗಳು ಬಿಟ್ಟು ಗಂಡನ ಮನೆಗೆ ಕಾಲಿಟ್ಟ ಕ್ಷಣವೆ ಭಯಂಕರ ಅಸಹನೀಯವೆನಿಸಿತು. ತಾನು ಆ ಮನೆಯ ಸೊಸೆಯಾಗಿ ಜಾರಿಗೆ ತಂದಿದ್ದ ಸಮಸ್ತ ಸುಧಾರಣೆಗಳೂ ವಿಫಲಗೊಂಡು ಬಿಟ್ಟಿದ್ದವು. ಮರಂಕಿ ಬಂದ ಕೂಡಲೆ ಆ ಮನೆ ಮತ್ತೆ ಮನುಷ್ಯರ ವಸತಿಗೆ ಲಾಯಕ್ಕಾಗಲು ಪ್ರಯತ್ನಪಟ್ಟಳು. ಅವಳ ಆಗಮನದಿಂದ ಮನೆಗೆ ಹೊಸ ಗಾಳಿ ಬೆಳಕುಗಳ ಪ್ರವೇಶವಾಯಿತು. ಬೇದಿಯಮ್ಮನಿಗೆ ಸೊಸೆಯ ಬಡಿವಾರ ಕಿರುಕುಳವೆನಿಸಿತ. ಅತ್ತೆ–ಸೊಸೆಯರ ನಡುವಿನ ಅಂತರ ಅಗಾಧವಾಗತೊಡಗಿತು.

ಆದರೆ ಗೆಂಡೆತಿಮ್ಮನ ಪಾಲಿಗೆ ಮುರಂಕಿ ಹೆಚ್ಚು ಹೆಚ್ಚು ಪ್ರಿಯಳೂ ಒಂದು ಕ್ಷಣವೂ ಬಿಟ್ಟಿರಲಾಗದಷ್ಟು ಆಪ್ತಳೂ ಆದಳು.

ಅಂದು ಗೆಂಡೆತಿಮ್ಮ ಉಣ್ಣುವಾಗ ಮುರಂಕಿಯನ್ನು ನೋಡಿದ. ಮುರಂಕಿ ತಮ್ಮ ಕೇರಿಯ ಉಳಿದ ಹೆಂಗಸರಂತೆ ಒಣಕಲು ಕಡ್ಡಿಯಂತೆ ಸೊರಗಿರಲಿಲ್ಲ. ಮೈಕೈ ತುಂಬಿಕೊಂಡು ರಕ್ತ ಚಿಮ್ಮುವಂತಿದ್ದಳು. ಹೆಂಡತಿಯ ಮೈ ಗಮಗುಡುವಂತೆ. ಅವಳು ಮಾಡಿದ ಸಾರು ಕೂಡ ಗಮಗಮ ಅನ್ನುತ್ತಿತ್ತು. ಅತ್ತೆ ಎಷ್ಟೇ ಪ್ರತಿಭಟಿಸಿದರೂ ಲೆಕ್ಕಿಸದೆ ಮುರಂಕಿ ವಗ್ಗರಣೆ ಇಲ್ಲದ ಸಾರು ಮಾಡುತ್ತಿರಲಿಲ್ಲ. ನೆಲಗುಡಿಸುವಂತೆ ಸೀರೆ ಉಡುವುದು, ಲಂಗ ಬಾಡಿ ಹಾಕಿಕೊಳ್ಳುವುದು, ಸೋಪು ಗಮನದೆಣ್ಣೆ ಉಪಯೋಗಿಸುವುದು ಇತ್ಯಾದಿ ಮುರಂಕಿಯ ಒಂದೊಂದು ವಿಷಯಕ್ಕೂ ಆ ಮನೆಯಲ್ಲಿ ದೊಡ್ಡ ದೊಡ್ಡ ಹಗರಣಗಳೇ ಆಗಿ ಹೋಗಿದ್ದವು. ಮುರಂಕಿ ಮಾತ್ರ ಯಾವುದಕ್ಕೂ ಜಗ್ಗಲಿಲ್ಲ. ಗೆಂಡೆತಿಮ್ಮ ಉಂಡು ವ್ಯಾಪಾರಕ್ಕೆ ಹೊರಟವನೆ ಹೆಂಡತಿಗೆ ಬರುವಾಗ ಏನಾದರೂ ತರಬೇಕೆ ಅಂತ ಪಿಸುಗುಟ್ಟಿದ. ಅವನು ಪುಕ್ಕಲು ತನಕ್ಕೆ ಮುರಂಕಿಗೆ ನಗು ಬಂತು.

ಆಗ ಮುರಂಕಿ ಬೇಕೆಂದೇ ಜೋರಾಗಿ 'ಬಟ್ಟೆ ಸಾಬೂನು ತಿರ್‍ಹೋಗದೆ, ಬರಾಗ ತನ್ನಿ' ಅಂದಳು. ಗೆಂಡೆತಿಮ್ಮನಿಗೆ ಜೀವ ಹೋದಂತಾಯಿತು, ಅಲ್ಲೇ ಸಮೀಪದಲ್ಲಿದ್ದ ಅವ್ವನನ್ನು ಕಂಡು. ಬೇದಿಯಮ್ಮನಿಗೆ ಇಂಥ ಅವಮಾನವನ್ನು ಸಹಿಸಲು ಸಾಧ್ಯವೇ ಆಗಲಿಲ್ಲ. ಮಗನಿಗೆ 'ಕೇಳಿದ್ಯೇನೋ ನಿನ್ನೇಡ್ತಿ ಧಿಮಾಕ. ತಂದ್ಕೊಡು ತಂದ್ಕೊಡು ನಾಯಕಸಾನಿ ಕೇಳಿದ್ನೆಲ್ಲ ತಂದ್ಕೊಡು. ಈ ಮನೆ ಉದ್ಧಾರ ಮಾಡಕ್ಬಂದವಳ ಇವ್ಳು ಚಿನಾಲಿ' ಎನ್ನುತ್ತಿದ್ದಂತೆ, ಗೆಂಡೆತಿಮ್ಮ 'ನಿಂಬೊಳ್ಳೆ ಕಣೆ ಕಣವ್ವ ಅವಳೇನು ಚಿನ್ನ ತನ್ನಿ ಅಂದ್ಲ 'ಅಂತ ಅಂದ. ಬೇದಿಯಮ್ಮನಿಗೆ ಮನೆಯ ಮಾಡೇ ತನ್ನ ತಲೆಯ ಮೇಲೆ ದೊಪ್ಪನೆ ಕಳಚಿ ಬಿದ್ದಂತಾಯಿತು. ತನ್ನ ಮಗ ತನಗೆ ಎದುರಾಡೋದು ಅಂದ್ರೆ? ಬೇದಿಯಮ್ಮನ ಕೋಪ ಪರಾಕಾಷ್ಠೆಗೇರಿತ್ತು. ಅವಳು ಮಗನ ಮುಖಕ್ಕೆ ಉಗಿದೇ ಬಿಟ್ಟಳು.

ಗೆಂಡೆತಿಮ್ಮ, ಉತ್ಸಾಹಹೀನನಾಗಿಯೇ ಗೌವಳ್ಳಿಗೆ ಬಂದ. ಮಾಲೇಗೌಡರ ಮನೆಯಲ್ಲಿ ದೇವೀರವ್ವ 'ಯಾಕ್ಲ ಗೆಂಡೆತಿಮ್ಮ ಯೆಂಡ್ತಿ ಬುಟ್ಟಿರಕಾಗ್ದೆ ಇಂಗಿದೀಯ?' ಅಂದಾಗ ಗೆಂಡೆತಿಮ್ಮ ಆದುದನ್ನೆಲ್ಲ ವಿವರಿಸಿದ. ದೇವೀರವ್ವ ಮುರಂಕಿಯ ನಡತೆಯನ್ನೂ ಒಪ್ಪಲಿಲ್ಲ. 'ಅಲ್ಲ ಗೆಂಡೆತಿಮ್ಮ ನಿನ್ನೆಡ್ತಿ ಆದ್ರೂ ಯಾಕೆ ಅಷ್ಟು ಹಠ ಮಾಡದು? ಅತೆ ಬ್ಯಾಡ ಅನ್ನದ ಬುಟ್ಬುಟ್ರಾಯ್ತು' ಅಂದಳು. ಗೆಂಡೆತಿಮ್ಮನಿಗೆ ತನ್ನ ಹೆಂಡತಿ ಆವನ್ನೆಲ್ಲ ತೊಡುವುದು ಇಷ್ಟವಾಗಿದ್ದರೂ ದೇವೀರವ್ವ ಹೇಳಿದ ಮೇಲೆ ಮುರಂಕಿಯದೆ ಸರಿಯಲ್ಲ ಅನಿಸಿತು.

ಗೆಂಡೆತಿಮ್ಮ ವ್ಯಾಪಾರಕ್ಕೆ ಹೊರಟ. ಆಗಲೇ ಅವನು ಬೆಳಿಗ್ಗೆಯೇ ಊರಿಗೆ ಮರಳುವುದನ್ನು ನಿರ್ಧರಿಸಿದ.

ಅವನು ಹಿಂತಿರುಗುವಾಗ ದೀಪ ಹಚ್ಚುವ ಹೊತ್ತಾಗಿತ್ತು. ಗೆಂಡೆತಿಮ್ಮ ಗೌಡರ ಜಗಲಿಗೆ ಬಂದಾಗ ಒಂದಿಬ್ಬರು ಅಪರಿಚಿತರು ಅಲ್ಲಿ ಕೂತಿದ್ದರು. ಯಾರೋ ಪ್ಯಾಟೆಯವರೇ ಇದ್ದಂತೆ ಕಂಡರು. ಅಲ್ಲಿದ್ದವರು ಮೈಸೂರು ಪಡವಾರಳ್ಳಿಯವರಾಗಿದ್ದು, ಅವರು ಗೌಡರ ಮಗಳು ರತ್ನವ್ವನನ್ನು ನೋಡಲು ಬಂದಿದ್ದರು.

ಆ ರಾತ್ರಿ ಪಡುವಾರಳ್ಳಿಯಿಂದ ಬಂದಿದ್ದ ನೆಂಟರು ಜಗಲಿಯಲ್ಲೇ ಮಲಗಿದರು. ಬೆಳಿಗ್ಗೆ ಗೆಂಡೆತಿಮ್ಮ ಎದ್ದು ಊರಿಗೆ ಹೊರಟಾಗ ದೇವೀರವ್ವ ನೆಂಟರ ಗಾಡಿಯಲ್ಲೇ ಹೋಗು ಅಂದರು. ಬಂದಿದ್ದವರು ರತ್ನಿಯನ್ನೂ ಒಪ್ಪಿಕೊಂಡಿದ್ದರು. ಬರುವವಾರ ಗಂಡನ್ನು ಕಳಿಸುವುದಾಗಿಯೂ ಹೇಳಿದ್ದರು. ಬಂದಿದ್ದವರಲ್ಲಿ ಒಬ್ಬಳು ದೇವೀರವ್ವನಿಗೆ 'ಬಂಗಾರ ದಂಗದೆ ಹೆಣ್ಣೇನೋ, ಆದ್ರೆ, ಒಂದಿಷ್ಟು ನಾಜೂಕಾಗಿ ಬಟ್ಟೆ ಬರೆ ಆಕಾಳಕ್ಕೇಳಿ, ನಮ್ಮೈದ ಒಸಿ ಓದ್ದೋನು'ಎಂದು ಕಿವಿಯಲ್ಲಿ ಪಿಸುಗುಟ್ಟಿದಳು.

ಗೆಂಡೆತಿಮ್ಮ ಅವರ ಜೊತೆಗೇ ಹೊರಟ. ದೇವೀರವ್ವ ತಟ್ಟನೆ ಏನೋ ನೆನಪಾದವರಂತೆ ಅವನನ್ನೂ ಒಳಗೆ ಕರೆದು ಅವನ ಕೈಯಲ್ಲಿ ಇಪ್ಪತ್ತು ರೂಪಾಯಿ ಕೊಟ್ಟು 'ಪ್ಯಾಟಿಯಂಗಸ್ರು ಆಕಳದ್ನೆಲ್ಲಾ ನಮ್ಮ ರತ್ನಿಗೂ ನಾಡಿದ್ದು ಬರಾಗ ತಕ್ಕಂಬಾ' ಅಂದರು. ಗೆಂಡೆತಿಮ್ಮನಿಗೆ ವಿಸ್ಮಯವಾಯಿತು.

೬

ಗೆಂಡೆತಿಮ್ಮ ಮನೆಗೆ ಬಂದಾಗ ರಾತ್ರಿಯಾಗಿತ್ತು. ಎಲ್ಲರೂ ಉಂಡು ಮಲಗಿದ್ದರು. ಮರಂಕಿಯೇ ಬಂದು ಬಾಗಿಲು ತೆರೆದಳು. ಕುಪ್ಪಿಯ ಬೆಳಕಿನಲ್ಲಿ ಅವಳ ಕಣ್ಣುಗಳು ಕೆಂಪಗೆ ರಕ್ತ ತುಂಬಿಕೊಂಡಿದ್ದವು. ಕೆನ್ನೆಯ ಮೇಲೆ ಗೀರಿದ್ದ ಗಾಯಕ್ಕೆ ಪೌಡರ್ ಮೆತ್ತಿದ್ದಳು. ಗೆಂಡೆತಿಮ್ಮನಿಗೆ ಗಾಬರಿಯಾಯಿತು. ಒಳಗೆ ನಡೆದು ತನ್ನ ಸಾಮಾನಿನ ಗೂಡೆಯನ್ನು ಹಜಾರದ ಮೋಟುಗೋಡೆಯ ಮೇಲೆ ಇಟ್ಟ. ತಾನು ಹೆಂಡತಿಗೆ ಗುಪ್ತವಾಗಿ ಕೊಡಲು ತಂದಿದ್ದ ಸಾಮಾನುಗಳನ್ನು ಅದರಿಂದ ತೆಗೆಯಲಿಲ್ಲ. ಮಿಕ್ಕಿದ್ದನ್ನೇ ಉಣ್ಣಲು ಇಕ್ಕಿ ಏನೊಂದು ಮಾತನ್ನೂ ಆಡದ ಮರಂಕಿಯನ್ನು, ಇವತ್ತೇ ಹೊಸದಾಗಿ ಒಂದು ಭಾಷೆಯನ್ನು ಕಲಿತವನಂತೆ ಗೆಂಡೆತಿಮ್ಮ ಏನು ಎತ್ತ ಅಂತ ಪೀಡಿಸಿ ಕೇಳಿದ. ಮರಂಕಿ ಮಾತ್ರ 'ಏನೂ ಇಲ್ಲ' 'ಸುಮ್ನೆ' ಈ ಎರಡು ಶಬ್ದಗಳನ್ನಷ್ಟೇ ಆಡಿದ್ದು.

ಉಂಡಾದ ಮೇಲೆ ಇಬ್ಬರೂ ತಾವು ಮಲಗುವ ಮನೆಗೆ ಹೋಗಿ ಬಾಗಿಲು ಮುಚ್ಚಿದರು. ಗೆಂಡೆತಿಮ್ಮ ನಿರ್ಭಯವಾಗಿ ದೀಪ ದೊಡ್ಡದು ಮಾಡಿ ಹೆಂಡತಿಯ ಅಂಗಾಂಗಗಳನ್ನು ಪರೀಕ್ಷಿಸಿದ. ಮೈಯ ಮೇಲೆಲ್ಲ ಬಾಸುಂಡೆಗಳು. ಗೆಂಡೆತಿಮ್ಮ ಎಷ್ಟು ಒತ್ತಾಯ ಮಾಡಿದರೂ ಮರಂಕಿ ನಡೆದುದನ್ನು ಹೇಳಲಿಲ್ಲ. ಬರಿದೆ ಬಿಕ್ಕಿ ಬಿಕ್ಕಿ ಅತ್ತಳು. ಅವಳು ಬಾಯಿ ಬಿಟ್ಟು ಹೇಳಿರದಿದ್ದರೂ ಗೆಂಡೆತಿಮ್ಮನಿಗೆ ಅರ್ಥವಾಗಿತ್ತು. ಅವಳಿಗೆ ಸಾಯಬೀಳ ಅವರು ಹೊಡೆದಿರುವುದು. ಮಲಗಿರುವ ಅವ್ವ, ಅಣ್ಣ, ಅತ್ತಿಗೆಯರನ್ನೆಲ್ಲ ಎಬ್ಬಿಸಿ ಚೆನ್ನಾಗಿ ಬೈದು ಅವರು ಮುಖ ಎತ್ತದ ಹಾಗೆ ಮಾಡಬೇಕೆಂದು ನಿರ್ಧರಿಸಿ, ಉರಿಯುತ್ತಲೇ ಮೇಲೆದ್ದ. ಮರಂಕಿಯೇ ಗಂಡನನ್ನು ತಡೆದಳು.

ಇಡೀ ರಾತ್ರಿ ಗೆಂಡೆತಿಮ್ಮ ಕಣ್ಣು ಮುಚ್ಚಲಿಲ್ಲ. ಮರಂಕಿಯ ಮೇಲಿನ ಪ್ರೀತಿ ಇನ್ನಷ್ಟು ಗಾಢವಾಯಿತು. ಅವಳಿಗಾಗಿ ಯಾವ ನಿರ್ಧಾರವನ್ನಾದರೂ ಸರಿಯೆ ಮಾಡುವ ಸ್ಥಿತಿಯಲ್ಲಿದ್ದ.

ಮನೆಯ ಮೌನವನ್ನು ಮುರಿಯದೆ ಬೆಳಗಾಯಿತು. ಗೆಂಡೆತಿಮ್ಮ ಹಜಾರದ ಕಟಿಕಟಿಯ ಮೇಲೆ ಕೂತು ಬೀಡಿ ಹಚ್ಚಿದ. ಬೆಳಗಾದದ್ದೇ ಎಲ್ಲರಿಗೂ ಸರಿಯಾಗಿ ಬೈಯಬೇಕು ಅಂದುಕೊಂಡಿದ್ದ ಗೆಂಡೆತಿಮ್ಮನಿಗೆ ಈಗ ದಾರಿಯೇ ತೋರಲಿಲ್ಲ. ಒಬ್ಬೊಬ್ಬರೂ

ಒಂದೊಂದು ಕಡೆ. ಊಟದ ಹೊತ್ತಿಗೆ ಮಾತಾಡುವ ಅಂದುಕೊಂಡು ಕೆರೆಯ ಕಡೆ ಹೊರಟ.

ಕೆರೆಯಿಂದ ಮರಳಿ ಮನೆಗೆ ಬಂದಾಗ ಅಣ್ಣ ಹಜಾರದಲ್ಲಿ ಕೂತಿದ್ದ. ಅವ್ವ, ಅತ್ತಿಗೆ ಅಂಗಳದಲ್ಲಿದ್ದರು. ಗೆಂಡೆತಿಮ್ಮ ಬಂದವನೇ ಮರಂಕಿಯನ್ನು ಕೂಗಿದ. ಮನೆಯವರೆಲ್ಲರೆದುರು ಎಂದೂ ಹಾಗೆ ಕೂಗಿರದಿದ್ದ ಗಂಡನ ಇವತ್ತಿನ ಧೈರ್ಯಕ್ಕೆ ಒಳಗೇ ಹಿಗ್ಗುತ್ತ ಬಂದ ಹೆಂಡತಿಗೆ 'ನೋಡಮ್ಮ ಯಾಪಾರದ ಕುಕ್ಕೇಲಿ ಮೊನ್ನೆ ಯೇಳಿದ್ನಲ್ಲ ಸಾಬೂನು, ಗವುನದೆಣ್ಣೆ ಎಲ್ಲಾ ತಂದಿವ್ನಿ ತಕ್ಕೊ' ಅಂದ ಎಲ್ಲರಿಗೂ ಕೇಳಿಸುವಷ್ಟು ಜೋರಾಗಿ. ಮರಂಕಿ ಯಾವ ಭಯವೂ ಇಲ್ಲದೆ ಗಂಡನ ಆಜ್ಞೆಯನ್ನು ಪಾಲಿಸಿದಳು.

ಇಂಥ ಮಟ್ಟಕ್ಕೆ ತನ್ನ ತಮ್ಮ ಇಳಿಯುತ್ತಾನೆಂದು ಎಂದೂ ಅಂದುಕೊಂಡಿರದಿದ್ದ ಗೂಳನಾಯಕ ಕೋಪ, ಅವಮಾನ ಹಾಗೂ ಸಂಕಟದಿಂದ ಎದ್ದು ಹೊರಗೆ ಹೋದ. ಮಗ ಮುಖ ಕೆಳಗೆ ಮಾಡಿ ಹೊರಗೆ ಹೋಗಿದ್ದನ್ನು ಕಂಡ ಬೇದಿಯಮ್ಮ ರೋಷ ತಡೆದುಕೊಳ್ಳಲಾಗದೆ ಎದ್ದು ನಿಂತಳು.

ಗೆಂಡೆತಿಮ್ಮನೂ ತಾಳ್ಮೆ ಕಳೆದುಕೊಂಡಿದ್ದ. ಅಂತೆಯ ಮನೆಯ ಮಾಡೇ ಕಿತ್ತು ಹೋಗುವಂತೆ 'ಲೇ ಮುದ್ಕಿ ಸಾಕು ನಿಲ್ಸು ನಿನ್ನ ಚಿರಚಾಟ' ಎಂದು ಕೂಗಿದ. ಗೆಂಡೆತಿಮ್ಮನ ಕೂಗಿಗೆ ಎಲ್ಲರಿಗೂ ಭಯವಾಯಿತು. ಗೂಳನಾಯಕ ಜಗಲಿಯಿಂದ ಎದ್ದು ಬಂದು ಅವ್ವನನ್ನು ಬಾಯಿ ಮುಚ್ಚಿಕೊಂಡು ಕೂರಲು ಹೇಳಿದ. ಗೆಂಡೆತಿಮ್ಮನಿಗೆ ಒಂದೂ ಅನ್ನಲಿಲ್ಲ; ಗೆಂಡೆತಿಮ್ಮ ಅಣ್ಣನೂ ಬಾಯಿ ಹಾಕಬಹುದು ಅವನಿಗೂ ಸರಿಯಾಗಿ ಅನ್ನಬೇಕು ಅಂದುಕೊಂಡಿದ್ದ.

ಗೆಂಡೆತಿಮ್ಮನಿಗೆ ಅಲ್ಲಿ ಒಂದು ಕ್ಷಣವೂ ನಿಲ್ಲಲಾಗಲಿಲ್ಲ. ಬುಸುಗುಡುತ್ತ ಹೊರಗೆ ಹೊರಟ. ಮರಂಕಿ ಅದಾಗಲೇ ಅಡಿಗೆ ಮನೆಯಲ್ಲಿ ತನ್ನ ಕೆಲಸದಲ್ಲಿ ನಿರತಳಾಗಿದ್ದಳು. ಅವಳಿಗೆ ನಿಜವಾಗಿಯೂ ಅತ್ಯಂತ ಖುಷಿಯುಂಟಾಗಿತ್ತು. ಗಂಡನ ಬಗ್ಗೆ ಎಂದೂ ಇಲ್ಲದ ಗೌರವ ತುಂಬಿ ಬಂದಿತ್ತು.

ಬೇದಿಯಮ್ಮ ಅವತ್ತೇ ದೊಡ್ಡ ಮಗನಿಗೆ ಹಂಪಾಪುರದ ಮಂತ್ರದವನನ್ನು ಕರೆಸಿ ಒಂದು ಕಟ್ಟಾದರೂ ಮಾಡಿಸು ಎಂದು ಹೇಳಿದಳು. ಗೂಳನಾಯಕನಿಗೂ ಅದು ನಿಜವೆನಿಸಿತು.

## ೧೦

ಮಂತ್ರದವನು ಬಂದು ಕಟ್ಟು ಮಾಡಿ ಹೋದ ಮೇಲೆ ಎಲ್ಲಾ ಮತ್ತೆ ಸರಿಯಾದಂತಾದರೂ ಮರಂಕಿ ತುಂಬಾ ಅಸ್ವಸ್ಥಳಾದಳು. ಯಥಾ ಪ್ರಕಾರ ಹಳೆಯ ರೂಢಿಗಳೆಲ್ಲ ಮತ್ತೆ ಚಲಾವಣೆಗೆ ಬಂದವು. ಬಿಚ್ಚಿದ್ದ ಕಿಟಕಿ ಬಾಗಿಲುಗಳು ಮತ್ತೆ ಬಿಚ್ಚದ ಹಾಗೆ ಗೂಳನಾಯಕ ಅವಕ್ಕೆಲ್ಲ ಮೊಳೆ ಜಡಿದುಬಿಟ್ಟ. ಹಂಪಾಪುರದಿಂದ ಬಂದಿದ್ದ ಮಂತ್ರದವನು

ಈ ಮನೆಯ ಜಾಯಮಾನಕ್ಕೆ ಸೇರದ ಆಚಾರಗಳನ್ನು ಮಾಡಿದ್ದರಿಂದಲೇ ಹೀಗಾಯಿತು ಅಂದಿದ್ದ. ಎಲ್ಲಕ್ಕೂ ಮರಂಕಿಯೇ ತಪ್ಪಿತಸ್ಥಳಾಗಿದ್ದಳು. ಅವಳಿಂದಾಗಿಯೇ ಎಲ್ಲಾ ಅನಾಹುತಗಳೂ ಆಗಿದ್ದವೆಂದು ಮನೆಯವರೆಲ್ಲಾ ಅಂದುಕೊಂಡಂತೆ ಗೆಂಡೆತಿಮ್ಮನಿಗೂ ಒಳಗೇ ಅನ್ನಿಸಿತ್ತು. ಮರಂಕಿ ಅಸಹಾಯಕಳಾಗಿ ಮಾತಿಲ್ಲದೆ ಇನ್ನೆರಡು ದಿನಗಳನ್ನು ಕಳೆದಳು. ಹೆಂಡತಿಯ ಮೂಕ ಸಂಕಟ ಗೆಂಡೆತಿಮ್ಮನಿಗೂ ತಟ್ಟಿತ್ತು. ಅವಳು ಗೆಲುವಾಗಿರಲು ಅನೇಕ ಆಶ್ವಾಸನೆಗಳನ್ನು ಕೊಟ್ಟ. ಆದರೆ ಮರಂಕಿಗೆ ಈ ಮನೆಯಲ್ಲಿ ಇವರ ಜೊತೆಯಲ್ಲಿ ಬದುಕುವುದಕ್ಕೆ ಸಾಧ್ಯವಿಲ್ಲ ಅನ್ನುವುದು ದೃಢವಾಗಿ ಬಿಟ್ಟಿತ್ತು. ಮರಂಕಿ ತೌರಿಗೆ ಹೋಗಿಬಿಡಲು ನಿರ್ಧರಿಸಿ ಗಂಡನಿಗೆ ಹೇಳಿದಳು. ಆದರೆ ಅವನು ನಿರುತ್ತರನಾಗಿದ್ದ.

ಆ ಬೆಳಿಗ್ಗೆ ಅವನು ವ್ಯಾಪಾರಕ್ಕೆ ಹೊರಡಬೇಕಿತ್ತು. ಅಲ್ಲದೆ ರತ್ನವ್ವನಿಗೆ ಬೇಕಿದ್ದ ಸಾಮಾನುಗಳನ್ನು ತರಲು ದೇವೀರವ್ವ ಕೊಟ್ಟಿದ್ದ ದುಡ್ಡು ಬೇರೆ ಜೇಬಿನಲ್ಲೇ ಇತ್ತು. ತಾನು ಹಿಂದುಮುಂದು ನೋಡದೆ ಒಪ್ಪಿ ಬಂದಿದ್ದ. ಆದರೀಗ ಹೇಗೆ ಕೊಳ್ಳುವುದು. ಅವನೆಂದೂ ಅಂಥ ಸಾಮಾನುಗಳನ್ನು ವ್ಯಾಪಾರ ಮಾಡಿರಲಿಲ್ಲ. ಮರಂಕಿಯಾದರೂ ಜೊತೆಗಿದ್ದರೆ ತೊಂದರೆಯಾಗುವುದಿಲ್ಲ. ಅವಳಿಗೆ ಅಂಥ ವ್ಯಾಪಾರ ನೀರು ಕುಡಿದಂತೆ.

ಬೆಳಿಗ್ಗೆ ಇಬ್ಬರೂ ಸದ್ದಿಲ್ಲದೆ ಮನೆಯಿಂದ ನಿರ್ಗಮಿಸಿದರು. ಹೀಗೆ ಎಂದೂ ಆಗಿರಲಿಲ್ಲ. ಇಬ್ಬರೂ ಹೊರಟಿದ್ದು ಎಲ್ಲಿಗೆ ಯಾಕೆ ಮನೆಯಲ್ಲಿ ಯಾರಿಗೂ ತಿಳಿಯಲಿಲ್ಲ. ಯಾರೂ ನಿಲ್ಲಿಸಿ ಅವರನ್ನು ಕೇಳಲೂ ಇಲ್ಲ.

ಮೈಸೂರು ತಲುಪುತ್ತಲೇ ಗೆಂಡೆತಿಮ್ಮ ತುಂಬಾ ಅವಸರದಿಂದ ತನ್ನ ವ್ಯಾಪಾರದ ಸಾಮಾನುಗಳನ್ನು ಕೊಂಡು ಮುಗಿಸಿದ.

ಮರಂಕಿ ಸಹಾಯದಿಂದ ಸಲೀಸಾಗಿ ರತ್ನವ್ವನಿಗೆ ಬೇಕಿದ್ದ ನಾಜೂಕಿನ ಸಾಮಾನನ್ನೆಲ್ಲ ಕೊಂಡು ಮುಗಿಸಿದ. ಮರಂಕಿ ತನ್ನನ್ನು ಉಳಿಮಾವಿನ ಬಸ್ಸು ಹತ್ತಿಸಲು ಕೇಳಿದಳು. ಗೆಂಡೆತಿಮ್ಮ ಮರಂಕಿಗೆ ಮಾರ್ಕೆಟ್ಟಿನ ಮೂಲೆಯಲ್ಲಿದ್ದ ಮಿಠಾಯಿ ಅಂಗಡಿಯಲ್ಲಿ ಜಿಲೇಬಿ ಕಾರಸೇವೆ ಪೊಟ್ಟಣ ಕಟ್ಟಿಸಿಕೊಟ್ಟು ಮುಂದಿನ ವಾರ ತಾನೂ ಬರುವುದಾಗಿ, ಹೇಳಿ ಉಳಿಮಾವಿನ ಬಸ್ಸು ಹತ್ತಿಸಿದ. ತಾನು ಅಲ್ಲಿಗೆ ಬಂದಿದ್ದ ಗಾಡಿಯೊಂದರಲ್ಲಿ ಗೌವಳ್ಳಿಗೆ ಹೊರಟ.

## ೧೨

ಮರಂಕಿಯ ಸಹಕಾರದಿಂದ ಗೆಂಡೆತಿಮ್ಮ ಖರೀದಿಸಿ ತಂದಿದ್ದ ವಸ್ತುಗಳು ದೇವೀರವ್ವನಿಗೆ ಆನಂದವನ್ನು ಉಂಟುಮಾಡುವುದರ ಜೊತೆಗೇ ದೊಡ್ಡ ಸಮಸ್ಯೆಯೂ ಆದವು. ಲಂಗವನ್ನೇನೋ ರತ್ನಿಯೇ ಕಟ್ಟಿಕೊಂಡು ಮೇಲೆ ಸೀರೆ ಉಟ್ಟಳು. ಬಾಡಿ ತುಂಬಾ ವಿಚಿತ್ರವಾಗಿತ್ತು. ಅದನ್ನು ಯಾವ ಕಡೆಯಿಂದ ಕಟ್ಟಿಕೊಳ್ಳಬೇಕೆಂದು ಗೊತ್ತಾಗದೆ ರತ್ನಿ ಅವ್ವನನ್ನು ಕೇಳಿದಳು. ಅದಕ್ಕೆ ಪಳಪಳನೆ ಹೊಳೆಯುವ ಕೊಕ್ಕೆ ಗುಂಡಿಗಳಿದ್ದು ಅವನ್ನು ಬೆನ್ನಕಡೆಗೆ ಹಾಕಿಕೊಳ್ಳಬೇಕಾಗಿತ್ತು. ದೇವಿರವ್ವನೂ ಮಗಳನ್ನು ಕಿರುಮನೆಯಲ್ಲಿ ನಿಲ್ಲಿಸಿಕೊಂಡು ಅದನ್ನು ಹಾಕಲು ಶತಪ್ರಯತ್ನಪಟ್ಟು ಅಂತೂ ಕಡೆಗೆ ಹಾಕಿದಳು. ನಂತರ ರವಿಕೆಯನ್ನು ತೊಟ್ಟುಕೊಂಡ ರತ್ನಿಗೆ ಒಳಗೆ ಬಿಗಿತ ಶುರುವಾಗಿ ತುಂಬಾ ಹಿಂಸೆಯಾಗತೊಡಗಿತು. ದೇವೀರವ್ವ ತಾನೇ ವಂಗಳನ್ನು ಕೂರಿಸಿಕೊಂಡು ತಲೆಗೆ ಗಮನದೆಣ್ಣೆ ತೀಡಿ ಬಾಚಿದಳು. ಗಮನದೆಣ್ಣೆಯ ಹೊಸ ವಾಸನೆ ಕ್ಷಣ ಕಿರಿಕಿರಿಯನ್ನುಂಟು ಮಾಡಿದರೂ ಕ್ರಮೇಣ ಅವ್ವ, ಮಗಳು ಅದಕ್ಕೆ ತಮ್ಮ ಮೂಗನ್ನು ಪ್ರಯತ್ನಪೂರ್ವಕವಾಗಿ ಒಗ್ಗಿಸಿಕೊಳ್ಳತೊಡಗಿದರು. ರತ್ನಿ ತಲೆ ಬಾಚಿಸಿಕೊಂಡಾದ ಮೇಲೆ ಗಮುಗುಡುವ ಸಾಬೂನಿನಲ್ಲಿ ಮುಖ ತೊಳೆದು ಬಂದಳು. ಮತ್ತೆ ಪೌಡರಿನ ಡಬ್ಬದ ಮುಚ್ಚಳ ತೆಗೆದರೆ ಅದೂ ಎಲ್ಲಾ ವಸ್ತುಗಳಿಗಿಂತ ಪರಿಮಳವನ್ನು ಬೀರುತ್ತಿತ್ತು. ರತ್ನಿಗೆ ಇದೆಲ್ಲ ಅದ್ಭುತವೆನಿಸಿತು. ಕನ್ನಡಿ ನೋಡುತ್ತ ಮುಖಕ್ಕೆ ಪೌಡರನ್ನು

ಬಳಿದುಕೊಳ್ಳುತ್ತಿದ್ದಂತೆ ಎಣ್ಣೆಗೆಂಪು ಬಣ್ಣದ ರತ್ನಿಯ ಮುಖ ಬದಲಾಯಿತು.

ಎಲ್ಲೋ ಹೊರಗೆ ಹೋಗಿದ್ದ ಮುದ್ದ ಮನೆಗೆ ಬಂದವನೆ ಅಕ್ಕನ ಮುಖ ನೋಡಿ 'ಅಯ್ಯೋ ಇದ್ಯಾಕೆ ಮೊಕಕ್ಕೆಲ್ಲ ಬೂದಿ ಬಳ್ಕಂಡು ಕುಂತಿದ್ದಿ' ಅಂತ ಜೋರಾಗಿ ನಗತೊಡಗಿದ. ರತ್ನಿ 'ಥೂ ಬೂದಿ ಅಲ್ಲ ಕಣ್ಣ ಮುದ್ದ, ಪೌಡ್ರು ಗೊತ್ತ, ಯಾಪಾಟಿ ಗಮ್ಮಂತದೆ ವಸಿಮೂಸು' ಅಂದಳು, ಮುದ್ದ ವಿಸ್ಮಯದಿಂದ ಅಕ್ಕನ ಮುಖವನ್ನು ಮೂಸಿದ, ಅವಳು ಅಂದಂತೆಯೇ ಇತ್ತು. ಅವತ್ತು ಅವನು ಆಡಲು ಹೋದಾಗ ತನ್ನ ವಾರಿಗೆಯವರ ಹತ್ತಿರ ತನ್ನ ಅಕ್ಕ ಹಾಕಿ ಕೊಳ್ಳುವ ಪೌಡರು, ಗಮನದೆಣ್ಣೆಯ ವಾಸನೆ ಗಳನ್ನು ಮುಟ್ಟಿಸಿದ.

ಈ ಮಧ್ಯೆ ಗೆಂಡೆತಿಮ್ಮ ಮೂರು ದಿನ ವಾದರೂ ಗೌವಳ್ಳಿಯಿಂದ ಕಾಲು ಕೀಳಲಿಲ್ಲ. ದೇವಿರಮ್ಮ ರತ್ನಿಗೆ ಬೇಕಿರುವ ತೆಳ್ಳನೆಯ ರವಿಕೆ ಸೀರೆಯ ವಿಚಾರವನ್ನು ಗೌಡರಿಗೆ ಹೇಳಿ, ತರಿಸಲು ಒಪ್ಪಿಗೆಯನ್ನು ಪಡೆದು ಕೊಂಡವಳು ಅವತ್ತೇ ಗೆಂಡೆತಿಮ್ಮನನ್ನು ಮೈಸೂರಿಗೆ ಹೋಗಲು ಹೇಳಿದರು. ಪಡು-ವಾರಳ್ಳಿಯಿಂದ ಗಂಡು ಬರಲು ಇನ್ನು ಎರಡೇ ದಿನ ಉಳಿದಿತ್ತು. ಗೆಂಡೆತಿಮ್ಮ 'ನಾಳಿಕ್ಕೆ ಬಂದ್ಬುಡೀನಿ ಕಣ್ರವ್ವ. ಸಾಲುಂಡಿಗೋಗಾ ಕಿಲ್ಲ. ಅವಳು ಅಪ್ಪನ ಮನೇಲಿ ಅವ್ಳೆ' ಎಂದು ಆ ರಾತ್ರಿಯೇ ಸೌದೆ ಗಾಡಿಯಲ್ಲಿ ಹೊರಟ.

ಮರುದಿನವೇ ಗೆಂಡೆತಿಮ್ಮ ಗೌಡರ ಮಗಳ ಸೀರೆ ರವಿಕೆ ತಂದು ಗೌವಳ್ಳಿಗೆ ಮುಟ್ಟಿಸಿದ.

ನಿರೀಕ್ಷಿಸಿದಂತೆ ಪಡುವಾರಳ್ಳಿಯ ಹುಡುಗ ಮೂರನೆ ದಿನವೇ ಬಂದ. ರತ್ನಿ ಹುಡುಗನಿಗೆ ಒಪ್ಪಿಗೆಯಾಗಿದೆ ಅನ್ನುವುದು ಅವನು ಹೋಗುವ ಮುಂಚೆ ಆಡಿದ ಮಾತುಗಳಿಂದ ವ್ಯಕ್ತವಾಗಿತ್ತು.

ಮೂರು ದಿನ ಬಿಟ್ಟು ಉಳಿವಾವಿಗೆ ಪಡು-ಹೋಗುವುದೆಂದು ನಿರ್ಧರಿಸಿದ್ದ ಗೆಂಡೆತಿಮ್ಮ ತಕ್ಷಣ ಮನಸ್ಸು ಬದಲಾಯಿಸಿ ಪಡುವಾರಳ್ಳಿ ಯಿಂದ ಬಂದಿದ್ದ ಗಾಡಿಯಲ್ಲಿ ಗಂಡಿನ ಜೊತೆಗೇ ಹೊರಟುಬಿಟ್ಟ. ಗಾಡಿ ಮೈಸೂರನ್ನು ತಲುಪುವ ಹೊತ್ತಿಗೆ ನಡುರಾತ್ರಿ ಯಾಗಿತ್ತು. ಪಡುವಾರಳ್ಳಿಯವರು ರಾತ್ರಿ ಅವರ ಮನೆಯಲ್ಲೆ ಮಲಗಿದ್ದು ಹೋಗಲು ಹೇಳಿದರು. ಗೆಂಡೆತಿಮ್ಮ ಹಾಗೇ ಮಾಡಿ ಬೆಳಿಗ್ಗೆ ಹೊತ್ತಿಗೆ ಮುಂಚೆ ಎದ್ದು ಹೊರ-ಟವನೆ ತನ್ನ ಗೂಡೆಯನ್ನು ಮಿಠಾಯಿ ಸಂಗಣ್ಣನ ಅಂಗಡಿಯಲ್ಲೇ ಇಟ್ಟು, ಪೊಟ್ಟಣ ಮಿಠಾಯಿ, ಒಂದು ಮಾರು ಹೂವು. ಗೌಳಿಗೆ ಚಿಗುರೆಲೆ ತೆಗೆದುಕೊಂಡವನೆ ಉಳಿವಾವಿನ ಬಸ್ಸು ಹತ್ತಿದ,

ಒಂದು ದಿನದ ಮಟ್ಟಿಗೆ ಇದ್ದುಬರಲು ಉಳಿಮಾವಿಗೆ ಹೋಗಿದ್ದ ಗೆಂಡೆತಿಮ್ಮ ಎರಡು ದಿನವಾದರೂ ಅಲ್ಲಿಂದ ಕಾಲು ಕೀಳಲಿಲ್ಲ. ಈ ದಿನಗಳಲ್ಲಿ ಮಾವ ಮುಂದುವರಿಯುವ ಮಾರ್ಗಗಳನ್ನು ಹೇಳುವಾಗ ಅವು ಮೊದಲ ಹಾಗೆ ಅಲಾಲಕೋರತನದ ಮಾರ್ಗಗಳಾಗಿ ಕಾಣಿಸಲಿಲ್ಲ, ಮರಂಕಿಯಂತೂ ತನ್ನ ತುಂಬಿದ ಹೆಣ್ಣುತನದಿಂದ ಗಂಡನನ್ನು ತುಂಬಾ ತೋಯ್ಸಿಬಿಟ್ಟಿದ್ದಳು. ಗೆಂಡೆತಿಮ್ಮ ಯಾವ ಆತಂಕವೂ ಇಲ್ಲದೆ ಅವಳಲ್ಲೆ ಸಂಪೂರ್ಣವಾಗಿ ಮುಳುಗಿ ಜೀವನೋತ್ಸಾಹದಿಂದ ತುಳುಕುತ್ತಿದ್ದ. ಮರಂಕಿ ತನ್ನ ಗಂಡ ಹೀಗೆ ಹದವಾಗಿರುವಾಗಲೇ ತನ್ನ ಮನಸ್ಸಿನಲ್ಲಿದ್ದ ಬಯಕೆಯನ್ನು ಬಿತ್ತಿದಳು. ಅದೆಂದರೆ ಪಾಲಾಗುವ ವಿಚಾರ. ಒಂದು ಕ್ಷಣ ಗೆಂಡೆತಿಮ್ಮ ಈ ಮಾತು ಕೇಳಿದ್ದೆ ಸಿಡಿಲು ಬಡಿದಂತೆ ಆಘಾತಕ್ಕೆ ಒಳಗಾದನಾದರೂ ತಕ್ಷಣ ಚೇತರಿಸಿಕೊಂಡು ಹೆಂಡತಿಗೆ ಪ್ರಿಯವಾಗುವಂತೆ ಉತ್ತರಿಸಿದ. ಮರಂಕಿ ಇದೇ ಮೊದಲ ಬಾರಿಗೋ ಅನ್ನುವಂತೆ ಗಂಡನನ್ನು ಗಾಢವಾಗಿ ಅಪ್ಪಿ ರಮಿಸಿದಳು. ಗೆಂಡೆತಿಮ್ಮನ ಮನಸ್ಸಿನಲ್ಲಿ ಇಷ್ಟರಲ್ಲಾಗಲೆ ಅವಳು ಬಿತ್ತಿದ್ದ ಬೀಜ ಮೊಳಕೆಯೊಡೆಯಲು ಬಾಯಿ ಬಿಟ್ಟುಕೊಂಡಿತ್ತು.

ಇಷ್ಟು ದಿನಗಳು ನಾಕು ಗಳಿಗೆಯಂತೆ ಕಳೆದು ಹೋಗಿದ್ದರ ಅನುಭವ ಗೆಂಡೆತಿಮ್ಮನಿಗೆ ಅರಿವಿಗೆ ಬಂದಿದ್ದು ಅವನು ಉಳಿಮಾವನ್ನು ಬಿಟ್ಟಾಗಲೆ. ಜೊತೆಗೆ ಮರಂಕಿಯೂ ಬರುತ್ತಾಳೆಂದುಕೊಂಡಿದ್ದ ಅವನಿಗೆ ಅವಳು ಪಾಲಾಗಿ ಬೇರೆ ಮನೆ ಮಾಡುವ ತನಕ ಆ ಮನೆಗೆ ಕಾಲಿಡುವುದಿಲ್ಲವೆಂದು ಹೇಳಿ ತೌರಿನಲ್ಲೆ ಉಳಿದುಕೊಂಡಳು.

ನಂಜನಗೂಡಿಂದ ಮೈಸೂರಿಗೆ ಹೊರಟ ಬಸ್ಸಿನಲ್ಲಿ ಕೂತ ಗೆಂಡೆತಿಮ್ಮನಿಗೆ ಮರಂಕಿ ಹಾಗೂ ಅವಳ ಅಪ್ಪನ ಮಾತುಗಳು ಮತ್ತೆ ಮತ್ತೆ ನೆನಪಾಗಿ ಅಸ್ವಸ್ಥನಾಗತೊಡಗಿದ. ಯಾಕೋ ತನ್ನ ಬಗೆಗೇ ಅಸಹ್ಯವೆನಿಸ ತೊಡಗಿತು.

ಮೈಸೂರು ತಲುಪಿದಾಗ ಗೆಂಡೆತಿಮ್ಮ ಬಸ್ಸಿಂದ ಇಳಿದವನೆ ನೇರವಾಗಿ ಮಿಠಾಯಿ ಸಂಗಣ್ಣನ ಅಂಗಡಿಯಲ್ಲಿದ್ದ ತನ್ನ ವ್ಯಾಪಾರದ ಗೂಡೆಯನ್ನು ತೆಗೆದುಕೊಂಡು ಸಾಲುಂಡಿ ದಾರಿ ಹಿಡಿದ.

ಸಾಲುಂಡಿಯೊಳಗೆ ಕಾಲಿಟ್ಟಾಗ ಗೆಂಡೆತಿಮ್ಮನ ಮನಸ್ಸಿಗೆ ನೆಮ್ಮದಿಯೆನಿಸಿತು. ಇಷ್ಟು ದಿನ ಊರನ್ನು ಬಿಟ್ಟು ಹೋಗಬೇಕಾಗಿ ಬಂದ ತನ್ನ ದುಡುಕಿಗೆ ಪಶ್ಚಾತ್ತಾಪಪಡುತ್ತ ಮನೆ ಮುಟ್ಟಿದಾಗ ಮನೆಯೆಲ್ಲಾ ಬಿಮ್ಮನೆ ಬಿಗಿದುಕೊಂಡಿತ್ತು. ಗೆಂಡೆತಿಮ್ಮ ತನ್ನ ಗೂಡೆಯನ್ನು ಮಾಮೂಲು ಜಾಗದಲ್ಲಿಟ್ಟು ಮನೆಯೊಳಗೆ ಒಂದು ನಿಮಿಷ ಇರುವುದು ಸಾಧ್ಯವಾಗದೆ ಹೊರಗೆ ನಡೆದ. ಎಲ್ಲಿಗೆ ಅನ್ನುವುದರ ಪರಿವೆಯೂ ಇಲ್ಲದೆ ತನ್ನ ಕೇರಿಯನ್ನು ದಾಟಿ ಊರಾಚೆ ನಡೆದ. ಅವನ ಕಾಲುಗಳು ಕೊಳದ ಬಸಪ್ಪನ ಗುಡಿಯತ್ತ ಸಾಗಿದವು. ಗೆಂಡೆತಿಮ್ಮನ ಮನಸ್ಸು ತುಂಬಾ ಗಾಸಿಯಾಗಿತ್ತು.

ಸಂಜೆ ಮನೆಗೆ ಬರುವಷ್ಟರಲ್ಲಿ ದೀಪ ಹಚ್ಚುವ ಹೊತ್ತಾಗಿತ್ತು. ಮನೆ ಇನ್ನೂ ಬಿಗಿದುಕೊಂಡೇ ಇತ್ತು. ಅವನಾಗಿಯೇ ಉಣ್ಣಲು ಇಕ್ಕಿ ಅಂತ ಕೇಳುವತನಕ ಯಾರೂ ಅವನನ್ನು ಊಟಕ್ಕೆ ಕರೆಯಬಾರದೆಂದು ಗೂಳನಾಯಕ ಆಜ್ಞಾಪಿಸಿದ್ದ. ಗೆಂಡೆತಿಮ್ಮ ತಾನಾಗಿ ಕೇಳಲೂ ಇಲ್ಲ. ಮನೆಯವರು ಅವನನ್ನು ಮೇಲೆ ಬಿದ್ದು ಕರೆಯಲೂ ಇಲ್ಲ. ರಾತ್ರಿಯಲ್ಲಾ ನಿದ್ದೆ ಬರದೆ ಒದ್ದಾಡಿದ ಅವನ ಮನಸ್ಸು ಎರಡು ತುಂಡಾಗಿ ಹೋಗಿತ್ತು.

ಬೆಳಗಿನ ಜಾವ ಕೋಳಿ ಕೊಕ್ಕೆನ್ನುತ್ತಿದ್ದಂತೆ ಎದ್ದು ಕೆರೆಯ ಕಡೆ ಹೋಗಿಬಂದವನೆ ಹೊತ್ತು ಮೂಡುವತನಕ ಜಗಲಿಯ ಮೇಲೆ ಕಾಲು ನೀಡಿ ಕೂತಿದ್ದು ಎಲ್ಲಾ ಎದ್ದಮೇಲೆ ಅವರೆಲ್ಲ ನೋಡುತ್ತಿದ್ದಂತೆ ತನ್ನ ವ್ಯಾಪಾರದ ಗೂಡೆಯನ್ನು ತೆಗೆದುಕೊಂಡು ಹೊರಗೆ

ಒಂದ. ಈಗಲಾದರೂ ಯಾರಾದರೂ ಮಾತನಾಡಿಸಬಹುದೆಂದುಕೊಂಡ ಗೆಂಡೆತಿಮ್ಮನ ಬಯಕೆ ಮತ್ತೆ ಭಗ್ನವಾಯಿತು. ಗೆಂಡೆತಿಮ್ಮ ಎಂದೂ ಕಾಲಿಟ್ಟಿರದ ಸಿದ್ಧಲಿಂಗಪ್ಪನ ಹೋಟೆಲಿಗೆ ನುಗ್ಗಿದವನೆ ಸುಡುವ ಕಡುಬು ವಡೆ ತಿಂದು ಟೀ ಕುಡಿದು ಹೊರಟ.

ಗೆಂಡೆತಿಮ್ಮ ಸಂಜೆಗೆ ಮುಂಚೆ ತನ್ನ ಕೇರಿಯ ಮೂರು ಜನ ಯಜಮಾನರನ್ನು ಹಾಗೂ ಶಿವಾಚಾರದ ಸಣ್ಣ ಪುಟ್ಟಪ್ಪನವರನ್ನು ಕರೆದುತಂದು ಪಾಲಿಗೆ ಕೂತ ಸುದ್ದಿ ತಿಳಿದ ಗೂಳನಾಯಕನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ತನ್ನ ತಮ್ಮ ಈ ಮಟ್ಟಕ್ಕೆ ಇಳಿಯುತ್ತಾನೆ ಅಂತ ಕನಸಿನಲ್ಲೂ ಕಂಡಿರಲಿಲ್ಲ.

ಮಾತು ಕತೆ ಮುಂದುವರಿಯಿತು. ಬೇದಿಯಮ್ಮ ಬಾಗಿಲ ಅಂಚಿನಲ್ಲಿ ದುಃಖತಪ್ತಳಾಗಿ ಮಾತಿಲ್ಲದೆ ಕೂತಿದ್ದಳು. ಅತ್ಯಂತ ನೋವಿನಿಂದ ಗೂಳನಾಯಕ 'ಆಯ್ತು ಶಿವ ಮಾಡ್ದಂಗಾಗಲಿ ನಾಳಿಕ್ಕೆ ಮಾಡೇಬುಡಿ ಸಣ್ಣಪ್ಪರೆ' ಎಂದ. ಮನೆಯ ಸ್ಥಿತಿ ದುರಸ್ತಿ ಮಾಡಲಾಗದಷ್ಟು ಹದಗೆಟ್ಟಿದೆಯೆಂಬುದು ಸಣ್ಣ ಪುಟ್ಟಪ್ಪನವರಿಗೂ ವೇದ್ಯವಾಗಿ ಅವರು ಪಾಲು ಮಾಡಿಸಿ ಬುಡುವುದೇ ಸರಿಯೆಂದು ನಿರ್ಧರಿಸಿ ಬೆಳಿಗ್ಗೆಯೇ ಬಂದು ಮಾಡುವುದಾಗಿ ಆಶ್ವಾಸನೆ ಕೊಟ್ಟು ಉಳಿದ ಯಜಮಾನರೊಡನೆ ಅಲ್ಲಿಂದ ನಿರ್ಗಮಿಸಿದರು. ಅಂತೂ ಮರಂಕಿಯ ತಂತ್ರ ಸಾಧಿಸಿತ್ತು.

## ೧೩

ಗೆಂಡೆತಿಮ್ಮ ಪಾಲಾದ ಸುದ್ದಿ ಸಾಲುಂಡಿಯ ಪರಿವಾರದ ಕೇರಿಗೆ ನಂಬಲಾಗದ ಸುದ್ದಿಯೆನಿಸಿತು. 'ಕೆಲವರು ಅಂಥ ತಳುಕಿನ ಸೊಸೆ ಕಾಲಿಟ್ಟಾಗ್ಲೇ ಇನ್ನು ಆ ಮನೆ ಒಂದಾಗಿರಕ್ಕಾಗಲ್ಲ ಅಂತ ಅನ್ಸಿತ್ತು' ಅಂತ ರಾಗ ಎಳೆಯದೆಯೂ ಇರಲಿಲ್ಲ. ಗೆಂಡೆತಿಮ್ಮ ಪಾಲಾದ ಸಂಜೆಯೇ ಉಳಿಮಾವಿಗೆ ತಾನೇ ಹೋಗಿ ಈ ವಾರ್ತೆಯನ್ನೂ ಮುಟ್ಟಿಸಿದ. ಮರಂಕಿ ಆ ರಾತ್ರಿ ತನ್ನ ಗಂಡನನ್ನು ಅತ್ಯಂತ ಸಡಗರದಿಂದ ಉಪಚರಿಸಿದಳಾದರೂ ಗೆಂಡೆತಿಮ್ಮ ಅನ್ಯಮನಸ್ಕನಾಗಿಯೇ ನಿದ್ದೆಯಿಲ್ಲದೆ ರಾತ್ರಿ ಕಳೆದ.

ಬೆಳಿಗ್ಗೆ ಎದ್ದ ಕೂಡಲೆ ಗೆಂಡೆತಿಮ್ಮ ಮಾವನಿಗೆ ತನ್ನ ಪಾಲಿಗೆ ಬಂದ ಆಸ್ತಿಯ ವಿವರಗಳನ್ನೂ ಹೇಳುವಾಗ ಮರಂಕಿಯೂ ಹತ್ತಿರದಲ್ಲೇ ಕೂತು ಏಕಾಗ್ರತೆಯಿಂದ ಎಲ್ಲವನ್ನೂ ಕೇಳಿದಳು. ಅವಳಿಗೆ ಪಾಲಾದರೂ ಅದೇ ಮನೆಯೊಳಗೆ, ದಿನ ಬೆಳಗಾದರೆ ಅದೇ ಅತ್ತಿಗೆ ಅತ್ತೆಯವರ ಮುಖ ನೋಡುತ್ತಲೇ ಇರಬೇಕಿರುವುದು ತಿಳಿದು ತುಂಬಾ ನಿರಾಶೆಯಾಯಿತು. ಇದನ್ನು ಗ್ರಹಿಸಿದ ಅವಳ ಅಪ್ಪ ತಕ್ಕ ವ್ಯವಸ್ಥೆ ಮಾಡುವುದಾಗಿ ಆಶ್ವಾಸನೆ ಕೊಟ್ಟ.

ಗೆಂಡೆತಿಮ್ಮ ಸಾಲುಂಡಿಗೆ ಮರಳಿದ್ದು ತನ್ನ ಮಾವನ ಜೊತೆಯಲ್ಲೇ. ಅವನ ಮಾವನಿಗೆ ಮುಖ್ಯವಾಗಿ ತನ್ನ ಮಗಳು ಅಳಿಯ ಪ್ರತ್ಯೇಕವಾಗಿರಲು ಏನಾದರೊಂದು ವ್ಯವಸ್ಥೆ ಮಾಡಿಕೊಡಬೇಕಿತ್ತು. ಅದರಿಂದಾಗಿ ವಾಸವಾಗಿದ್ದ ಹಳೆಯ ಮನೆ ಮತ್ತು ಅದರ ಪಕ್ಕದಲ್ಲಿ ಇದ್ದ ದನದ ಹಟ್ಟಿ ಇವೆರಡರಲ್ಲಿ ಒಂದೊಂದನ್ನು ಇಡಿಯಾಗಿ ಒಬ್ಬೊಬ್ಬರು ವಹಿಸಿಕೊಂಡರೆ ಸರಿಯಾಗುತ್ತೆ ಅಂದು ಗೂಳನಾಯಕನಿಗೆ ಹೇಳಿದಾಗ ಅವ ಹಳೆಯ ಮನೆ ತಾನೇ ವಹಿಸಿಕೊಂಡು ದನದ ಹಟ್ಟಿ ಗೆಂಡೆತಿಮ್ಮನಿಗೆ ಬಿಟ್ಟು ಅದರ ಗಾರೆಗಚ್ಚಿಗೆ ಹಣ ಕಟ್ಟಿಕೊಡಲು ಒಪ್ಪಿಕೊಂಡ. ಮಾವ ಹಿಂತಿರುಗಿದ.

ಗೆಂಡೆತಿಮ್ಮ ತನ್ನ ಹೊಸ ಮನೆ ಸಜ್ಜುಗೊಳಿಸಿ ತನ್ನ ಸಾಮಾನುಗಳನ್ನೆಲ್ಲ ಅಲ್ಲಿಗೆ ಸಾಗಿಸಿದ. ಮರುದಿನವೆ ಮುಹೂರ್ತಕ್ಕೆ ಸರಿಯಾಗಿ ಪೂಜೆ ಮಾಡಿಸಿ, ಬಂದಿದ್ದವರಿಗೆಲ್ಲಾ ಊಟಕ್ಕೆ ಕೂರಿಸಿದರು. ಒಟ್ಟಾರೆ ಇಡೀ ಮನೆ ಸಂಭ್ರಮದಿಂದ ತುಳುಕುತ್ತಿತ್ತು. ಇದಲ್ಲದರಿಂದ ಮರಂಕಿ ತುಂಬಾ ಸಂತೋಷಗೊಂಡಿದ್ದಳು. ಮತ್ತೊಂದೇನೆಂದರೆ ಮೇಸ್ಟ್ರು ಶಿವಣ್ಣನವರು ಊಟಕ್ಕೆ ಬಂದಿದ್ದುದೂ ಅತಿಶಯವಾದ ಆನಂದಕ್ಕೆ ಕಾರಣವಾಗಿತ್ತು.

## ೧೪

ಗೆಂಡೆತಿಮ್ಮ ಪಾಲಾಗಿ ಪ್ರತ್ಯೇಕವಾಗಿ ಒಲೆ ಹೂಡಿದ ಮೇಲೆ ಅವನ ಜೀವನಕ್ಕೆ ಹೊಸ ಆಯಾಮ ಬಂದಂತಾಯಿತು. ಈಗ ಏನು ಮಾಡುವುದಾದರೂ ನಿರ್ಭಯದಿಂದ ಮಾಡ ಬಹುದು. ತಾನು ಮತ್ತು ತನ್ನ ಹೆಂಡತಿ ಇನ್ನು ಮುಂದೆ ಅನ್ನಿಸಿದಂತೆ ಬದುಕ ಬಹುದು. ಗೆಂಡೆತಿಮ್ಮನ ಪಾಲಿಗೆ ಸ್ವರ್ಗವೇ ಸಿಕ್ಕಿ ಬಿಟ್ಟಿತ್ತು.

ಇತ್ತ ಗೌವಳ್ಳಿಯಲ್ಲಿ ರತ್ನಿಯ ಲಂಗ ಬಾಡಿ ಗಳು ಊರಿನ ಈ ತುದಿಯಿಂದ ಆ ತುದಿಯ ತನಕ ಕುತೂಹಲದ ಸುದ್ದಿಗೆ ಕಾರಣವಾಗಿ ಅನೇಕ ಮನೆಗಳ ಹೆಣ್ಣು ಮಕ್ಕಳು ಮತ್ತು ಹೊಸದಾಗಿ ಬಂದ ಸೊಸೆಯರ ಮನಸ್ಸಿನಲ್ಲಿ ಪ್ರಬಲವಾದ ಕಾಮನೆಗಳನ್ನೂ ಉಂಟು ಮಾಡಿದ್ದವು. ಗಂಡಸರು ಹೊಲಕ್ಕೆ ಹೋದ ಸಮಯ ನೋಡಿಕೊಂಡು ಮೂರು ನಾಕು ಮನೆಯ ಹೆಣ್ಣು ಮಕ್ಕಳು ರತ್ನಿಯ ಮನೆಗೆ ಬಂದು ಅವಳು ಉಪಯೋಗಿಸಲು ತೊಡಗಿದ್ದ ವಸ್ತುಗಳ ಪರಿಚಯಮಾಡಿಕೊಂಡು ಹೋಗಿದ್ದ ಗೆಂಡೆತಿಮ್ಮನ ಬರುವಿಗಾಗಿ ತುದಿಗಾಲಿನಲ್ಲಿ ಕಾದು ನಿಂತರು.

ಅವತ್ತು ಇಳಿಹೊತ್ತಾಗಿತ್ತು. ಗೆಂಡೆತಿಮ್ಮ ವ್ಯಾಪಾರ ಮುಗಿಸಿ ಗೌಡರ ಕೇರಿಗೆ ಕಾಲಿಡು ತ್ತಿದ್ದಂತೆಯೇ ಚೆನ್ನೇಗೌಡರ ಮನೆಯಿಂದ ಯಾರೋ ಕೂಗಿದಂತಾಗಿ ಅತ್ತ ತಿರುಗಿದ. ಗೌಡರ ಸೊಸೆ ಬಾಗಿಲಲ್ಲಿ ನಿಂತಿದ್ದಳು. ಬೆಳಿಗ್ಗೆ ಅವರ ಮನೆಗೆ ಹೋಗಿ ಬಂದಾಗಿತ್ತು. ಮತ್ತೆ ಯಾಕೆ ಕೂಗಿದರು ಅಂತ ಅಲ್ಲಿಗೆ ಅಡಿಯಿಡು ತ್ತಿದ್ದಂತೆ ಕೆಂಪವ್ವ ಹಟ್ಟಿಯೊಳಗೆ ಕರೆದಳು. ಹಟ್ಟಿಯೊಳಗೆ ಬೇರೆ ಯಾರೂ ಇದ್ದಂತಿರಲಿಲ್ಲ. ಗೆಂಡೆತಿಮ್ಮ 'ಏನ್ಬೇಕಿತ್ತು ಕೆಂಪವ್ವರೆ?' ಎಂದು ನಿಂತುಕೊಂಡ. ಕೆಂಪವ್ವ ಕೂಡಲು ಹೇಳಿ ಭಯದಿಂದಲೇ ಅತ್ತ ಇತ್ತ ನೋಡಿ ಅವನಿಗೆ ತಗ್ಗಿದ ದನಿಯಲ್ಲಿ ತನ್ನ ಬಯಕೆಯನ್ನು ತೋಡಿಕೊಂಡು 'ಎಷ್ಟು ಸೇರು ಜ್ವಾಳ ಆಯ್ತದೆ ಯೇಳು, ಈಗ್ಲೆ ಕೊಡ್ತೀನಿ' ಅಂದಳು. ಗೆಂಡೆತಿಮ್ಮನಿಗೆ ಸ್ವಲ್ಪ ಹೊತ್ತು ದಿಕ್ಕೇ ತೋರಲಿಲ್ಲ. ಮತ್ತೆ ಯಾಕೋ ಭಯ ಕೂಡ ಆಯಿತು. ಆದರೆ ಕೆಂಪವ್ವ ಅಷ್ಟು ಹಲುಬಾಡಿದ್ದು ಕಂಡು ಪಾಪ ಅಂತ ಅನ್ನಿ ಸಿತು. ಎಷ್ಟಾದ್ರು ಯೆಣ್ಮಕ್ಳು ಅವ್ಕೆ ಯಿಂಗೆ ಆಸೆ ಆಗದ್ರಲ್ಲೇನು ತಪ್ಪಿಲ್ಲ' ಅಂದುಕೊಂಡ ವನೇ 'ಅತ್ತು ಸೇರಾಯ್ತದೆ ಕಣವ್ವ' ಅನ್ನು ತ್ತಿದ್ದಂತೆಯೇ ಕೆಂಪವ್ವ ಅಲ್ಲಿಂದ ಕಿರುಮನೆಗೆ ಹಾರಿದವಳೇ ಅಳೆಯುತ್ತ ಕೂತರೆ ಹೊತ್ತಾ- ಗುತ್ತದೆಂದು ಎರಡು ಮೊರ ಜೋಳ ತುಂಬಿ ತಂದು ಸುರಿದಳು. ಗೆಂಡೆತಿಮ್ಮ ಮುಂದಿನ ವಾರ ಬರುವಾಗ ತರುವುದಾಗಿಯೂ, ಇಂಥ ಹೊತ್ತಲ್ಲೆ ಬಂದು ಯಾರಿಗೂ ಕಾಣದಂತೆ ಕೊಟ್ಟು ಹೋಗುವುದಾಗಿಯೂ ಭರವಸೆ ಕೊಟ್ಟು ಹೋಗಿದ್ದ.

ಗೆಂಡೆತಿಮ್ಮ ಅವತ್ತು ಗೌವಳ್ಳಿಯನ್ನು ಬಿಟ್ಟು ಸಾಲುಂಡಿ ಸೇರುವ ತನಕ ತಾನು ಮಾಡಿದ್ದು ತಪ್ಪೇ ಸರಿಯೇ ಅನ್ನುವ ದ್ವಂದಕ್ಕೆ ಸಿಕ್ಕಿ ನುಗ್ಗಾಗಿ ಬಿಟ್ಟ. ರಾತ್ರಿ ಮರಂಕಿಗೆ ಹೇಳಿದಾಗ ಮರಂಕಿ ಅದರಲ್ಲಿ ಒಂದು ಚೂರೂ ತಪ್ಪಿಲ್ಲ ಎಂದು ವಾದಿಸು ವುದರ ಜೊತೆಗೆ ಇಂಥ ವ್ಯಾಪಾರದಿಂದ ಆದಾ ಯವೂ ಒಂದಕ್ಕೆ ಹತ್ತರಷ್ಟು ಲಾಭದಾಯಕ- ವಾಗಿರುವ ಒಳಗುಟ್ಟನ್ನು ಸೂಕ್ಷ್ಮವಾಗಿ ಹೇಳಿ, ಗಂಡನನ್ನು ಭಯಂಕರ ಪ್ರಲೋಭನೆಗೆ ಒಳ ಗಾಗುವಂತೆ ಮಾಡಿಬಿಟ್ಟಳು.

## ೧೫

ಗೆಂಡೆತಿಮ್ಮ ಮದುವೆಯಾದ ದಿನದಿಂದ ಇವತ್ತಿನ ತನಕ ದಿನವೂ ಒಂದಲ್ಲ ಒಂದು ಹೊಸ ಅನುಭವಗಳಿಗೆ ಒಳಗಾಗುತ್ತಲೇ ಇದ್ದ. ಅವನ ಜಗತ್ತು ದಿನ ಕಳೆದಂತೆ ದೊಡ್ಡದಾಗ ತೊಡಗಿತ್ತು. ಸಾಲುಂಡಿ, ಮೈಸೂರು ಮತ್ತು ಗೌವಳ್ಳಿಯ ಸರಹದ್ದಿನಲ್ಲೇ ತೃಪ್ತವಾಗಿದ್ದ ಮನಸ್ಸಿಗೆ ಉಳಿವಾವು ಹೊಸ ಹೊಸ ಸಾಧ್ಯತೆ ಗಳನ್ನು ತೆರೆದು ತೋರಿತ್ತು.

ಗೆಂಡೆತಿಮ್ಮ ಹೊತ್ತು ಇಳಿಯುತ್ತಿದ್ದಂತೆ ಗೌವಳ್ಳಿಯ ಬೀದಿಗಳಲ್ಲಿ ವ್ಯಾಪಾರಕ್ಕೆ

ಹೊರಟ. ಈ ಸಲ ನಾಕು ಮನೆಯ ಹೆಣ್ಣು ಮಕ್ಕಳಿಗೆ ಸ್ನೋ, ಪೌಡರ್, ಗಮನದೆಣ್ಣೆ, ಲಂಗ, ಬಾಡಿ, ಟೇಪು, ಮೈ ಸಾಬೂನು ಇತ್ಯಾದಿ ಹತ್ತಾರು ವಸ್ತುಗಳನ್ನು ತಂದಿದ್ದ. ಮುಂದೆ ಹೆಜ್ಜೆ ಇಟ್ಟಂತೆ ತಾನು ಮಾಡುತ್ತಿರುವುದು ಸರಿಯಲ್ಲ ಅನ್ನಿಸಿತು. ಮತ್ತೆ ತನ್ನ ಬರುವಿಗಾಗಿ ಕಾದುನಿಂತ ಹೆಣ್ಣುಮಕ್ಕಳ ಜ್ಞಾಪಕವಾಯಿತು. ಗೆಂಡೆತಿಮ್ಮನಿಗೆ ತನ್ನಿಂದ ಮನೆಯವರು ಕಾಣದ ಹಾಗೆ ಏನನ್ನಾದರೂ ತರಿಸಿಕೊಳ್ಳುವ ಹೆಣ್ಣು ಮಕ್ಕಳೆಲ್ಲಾ ತನ್ನ ಹೆಂಡತಿ ಮರಂಕಿಯಾಗಿ, ಅವರ ಅತ್ತೆಯರೆಲ್ಲಾ ತನ್ನ ಅವ್ವ ಬೇದಿಯಮ್ಮನಾಗಿ ಕಾಣಿಸಿದರು. ತಕ್ಷಣ ತಾನು ಮಾಡುವುದು ತಪ್ಪಲ್ಲ ಅನ್ನಿಸಿತು. ಅಂದು ಗುರುವಾರ ಗೌವಳ್ಳಿಯಿಂದ ಸಾಲುಂಡಿಗೆ ಹಿಂತಿರುಗುವಾಗ ಗೆಂಡೆತಿಮ್ಮನಿಗೆ ಮೇಸ್ಟ್ರು ಶಿವಣ್ಣ ದಾರಿಯಲ್ಲಿ ಗಂಟು ಬಿದ್ದ. 'ಸೋಮವಾರವೇ ಹಬ್ಬ, ಉಳಿಮಾವಿಗೆ ಬರೋಲ್ವೆ. ನಾನು ಹೋಗ್ತೇನಿ' ಅಂದ. ಗೆಂಡೆತಿಮ್ಮ ತನ್ನ ತೊಂದರೆ ಹೇಳಿಕೊಂಡು ಮರಂಕಿಯನ್ನು ಅವನ ಜೊತೆ ಕಳಿಸಲು ನಿರ್ಧರಿಸಿ, ಒಪ್ಪಿಸಿದ.

ಗೆಂಡೆತಿಮ್ಮ ಆ ರಾತ್ರಿಯೇ ಹೆಂಡತಿಗೆ ಆದುದನ್ನೆಲ್ಲ ಹೇಳಿದ. ಮರಂಕಿಗೆ ಸಂತೋಷವಾಯಿತು. ಚಿಗುರು ಮೀಸೆ ಬಿಟ್ಟು, ಯಾವಾಗಲೂ ಇಸ್ತ್ರಿ ಮಾಡಿದ ಬಿಳಿಯ ಶರಟು ಪ್ಯಾಂಟು ತೊಟ್ಟಿರುತ್ತಿದ್ದ ಅವರನ್ನು ಕಂಡಿದ್ದ ಮರಂಕಿಗೆ ಮೈಯೆಲ್ಲ ಒಂದು ಥರ ಜುಮುಗುಡುತ್ತಿತ್ತು. ಈ ಹಿಂದೆ ದೀಪಾವಳಿಗೆ ಅಳಿಯ ಮಗಳು ಉಳಿಮಾವಿಗೆ ಬರಬೇಕೆಂದು ಅವಳ ಅಪ್ಪ ಶಿವಣ್ಣನ ಮೂಲಕವೇ ಹೇಳಿ ಕಳಿಸಿದ್ದ. ಅವತ್ತು ತಾನು ಮಾಡಿಕೊಟ್ಟ ಉಪ್ಪಿಟ್ಟನ್ನು ಬಾಯ್ತುಂಬ ಹೊಗಳಿದ ಶಿವಣ್ಣ ಕಾಫೀ ತೆಗೆದುಕೊಳ್ಳುವಾಗ ತನ್ನ ಸ್ತನಗಳನ್ನೇ ತಿನ್ನುವವನಂತೆ ನೋಡುತ್ತ ಪಂಚೆಯ ಮೇಲೆಲ್ಲಾ ಕಾಫೀ ಚೆಲ್ಲಿಕೊಂಡಿದ್ದ. ಅವತ್ತೇ ಮರಂಕಿ ಅವನಿಗೆ ತನ್ನ ಮೇಲೆ

ದಳು. ಈಗ ಅವರ ಜೊತೆಯೇ ಹೋಗುವುದು ಅವಳಿಗೆ ಒಳಗೊಳಗೆ ಸಂತೋಷಕ್ಕೆ ಕಾರಣವಾಗಿತ್ತು.

ಶನಿವಾರ ಗೆಂಡೆತಿಮ್ಮ ಹೆಂಡತಿಯ ಜೊತೆ ಮಧ್ಯಾಹ್ನದ ಬಸ್ಸಿಗೆ ಮೈಸೂರಿಗೆ ಹೊರಟ. ಅವರು ಕೂತ ಬಸ್ಸಿನಲ್ಲೇ ಶಿವಣ್ಣ ಕೂಡ ಇದ್ದು ಮೈಸೂರಿನಲ್ಲಿ ಒಟ್ಟಿಗೇ ಇಳಿದರು. ಗೆಂಡೆತಿಮ್ಮ ತನ್ನ ಗೂಡೆಯನ್ನು ತೆಗೆದುಕೊಂಡು 'ಸಂಗೂ ವೊತ್ತಾಯ್ತು' ಬತ್ತೀನಿ ಅನ್ನುತ್ತ ಮರಂಕಿಗೆ ಬೇಗ ಬಂದುಬಿಡುವಂತೆ ಹೇಳಿ ಅವರಿಂದ ಬೇರೆಯಾದ.

ಆಗ ಇನ್ನೂ ಮೂರು ಗಂಟೆಯಾಗಿತ್ತು. ಶಿವಣ್ಣ ಮರಂಕಿಗೆ 'ಒಳ್ಳೆ ಸಿನಿಮ ಬಂದದೆ ನೋಡ್ಬುಟ್ಟು ಸಂಜೆ ಬಸ್ಗೆ ಹೋಗೋಣ' ಅಂದಾಗ ಅವಳು ಖುಷಿಯಿಂದ ಒಪ್ಪಿಕೊಂಡಳು.

ಸಿನಿಮಾ ಬಿಟ್ಟಾಗ ಸಂಜೆಯಾಗಿತ್ತು. ಹೋಟೆಲಿಗೆ ಹೋಗಿ ಚೆನ್ನಾಗಿ ತಿಂದವರೆ ನಂಜನಗೂಡಿನ ಬಸ್ಸಿನಲ್ಲಿ ಕೂತರು. ಬಸ್ಸು ಉಳಿಮಾವಿನ ಗೇಟಿನ ಹತ್ತಿರ ನಿಂತಾಗ ಕತ್ತಲು ಕವಿದುಕೊಂಡಿತ್ತು. ಶಿವಣ್ಣ ಮರಂಕಿ ಇಳಿದು ಊರ ದಾರಿ ಹಿಡಿದರು. ನಡೆಯುತ್ತಿದ್ದಂತೆ ಏನೋ ಸರಕ್ಕನೆ ಓಡಿ ಹೋದಂತಾಗಿ ಮರಂಕಿ ಭಯದಿಂದ ಪಕ್ಕದಲ್ಲಿದ್ದ ಶಿವಣ್ಣನನ್ನು ತಬ್ಬಿಕೊಂಡಳು. ಶಿವಣ್ಣ ಅವಳಿಂದ ಬಿಡಿಸಿಕೊಳ್ಳುವ ಬದಲಾಗಿ ತಾನೂ ಇನ್ನಷ್ಟು ಬಿಗಿಯಾಗಿ ತಬ್ಬಿ ಅವಳನ್ನು ಅನಾಮತ್ತಾಗಿ ಎತ್ತಿಕೊಂಡು ದಾರಿ ಪಕ್ಕದ ಹುಚ್ಚೆಳ್ಳು ಹೊಲದೊಳಕ್ಕೆ ನಡೆದ. ಹುರುಳಿಯ ಗಿಡಗಳೇ ಹಾಸಿಗೆಯಾದವು. ಅಂಗಾತ ಮಲಗಿದ್ದ ಮರಂಕಿ ಸುಖದಿಂದ ನರಳಿದಳು. ಶಿವಣ್ಣನಿಗೆ ಮರಂಕಿ ಎಂಥ ಸುಖ ಕೊಡುವ ಹೆಣ್ಣು ಅನ್ನುವುದು ಅರಿವಾಗಿ ಇಷ್ಟು ದಿನ ಅವಳ ಬಗ್ಗೆ ತಾನು ಉಪೇಕ್ಷೆ ಮಾಡಿದ್ದು ಸರಿಯಲ್ಲ ಅನ್ನಿಸಿತು.

ದಾರಿಯಲ್ಲಿ ಬಸ್ಸು ಕೆಟ್ಟು ನಿಂತದ್ದಕ್ಕಾಗಿ ತಡವಾಯಿತು ಎಂದು ಮರಂಕಿ ತಂದೆಗೆ ನೆವ

೧೬

ಗೌವ್ವಳ್ಳಿಯಲ್ಲಿ ಸಮೃದ್ಧವಾಗಿ ಮಳೆ ಬೆಳೆಯಾಗಿ ಈ ವರ್ಷ ಸುಭಿಕ್ಷದ ವರ್ಷವೆನಿಸಿ ತಾದ್ದರಿಂದ ಊರಿಗೆ ಊರೇ ದೀವಳಿಗೆಯನ್ನು ಸಂಭ್ರಮದಿಂದ ಆಚರಿಸಿತು.

ಆ ರಾತ್ರಿ ಗೌಡರ ಜಗಲಿ ಮೇಲೆ ಮಲಗಿದ್ದ ಗೆಂಡೆತಿಮ್ಮನಿಗೆ ಯಾಕೊ ನಿದ್ದೆಯೇ ಬರು-ತ್ತಿಲ್ಲ? ಏನೇನೋ ವಿಚಾರಗಳು. ತಾನು ಮರಂಕಿಯನ್ನು ಶಿವಣ್ಣನವರ ಜೊತೆ ಕಳಿಸಿದ್ದು ಸರಿಯೆ? ನಿದ್ದೆಯಿಲ್ಲದೆ ಒದ್ದಾಡು ತ್ತಿದ್ದು ಕಡೆಗೆ ನಿದ್ದೆ ಬಂತು. ಅನಿಷ್ಟದ ಕನಸಿಗೆ ಭಯಪಟ್ಟು ಕಣ್ಣುಬಿಟ್ಟಾಗ ಆಗಲೇ ಬೆಳಕು ಹರಿದಿತ್ತು. ಗೆಂಡೆತಿಮ್ಮ ಎಷ್ಟು ಪ್ರಯತ್ನ ಪಟ್ಟರೂ ಕನಸನ್ನೂ ಮರೆಯಲಾಗಲಿಲ್ಲ. ಮರಂಕಿಗೆ ಒಂದು ದೊಡ್ಡ ಘಟಸರ್ಪ ಸುತ್ತಿಕೊಂಡಂತೆ ತಾನು ಭಯದಿಂದ ಕಿರುಚುತ್ತ ಬಿಡಿಸಿಕೊಳ್ಳಬೇಕೆ ನ್ನುವಷ್ಟರಲ್ಲಿ ಮರಂಕಿಯೇ ಘಟಸರ್ಪವಾಗಿ ಬಿಟ್ಟಂತೆ. ಗಡಗಡ ನಡುಗುತ್ತ ನಿಂತ ತನ್ನನ್ನು ಅಟ್ಟಿಸಿಕೊಂಡು ಬಂದಂತೆ ಅದರಿಂದ ತಪ್ಪಿಸಿ ಕೊಳ್ಳಲು ತಾನೆಷ್ಟೇ ಪ್ರಯತ್ನಪಟ್ಟರೂ ಅದು ಬಿಡದೆ ಬೆನ್ನ ಹಿಂದೆಯೇ ಬಂದಿತು. ಕಡೆಗೆ ಓಡುತ್ತಿದ್ದ ತನ್ನ ಕಣ್ಣ ಮುಂದೆ ಒಂದು ದೊಡ್ಡ ಹೊಳೆ ಅಡ್ಡವಾಗಿ. ಅತ್ತ ಹೊಳೆಗೂ ಹಾರಲಾಗದೆ ಇತ್ತ ಸರ್ಪದಿಂದಲೂ ತಪ್ಪಿಸಿಕೊಳ್ಳಲಾಗದೆ ನಿಂತಾಗ ಸರ್ಪ ಹತ್ತಿರ ತೀರಾ ಹತ್ತಿರ ಬಂದು ಇನ್ನೇನು ಹೆಡೆಯೆತ್ತಿ ಅಪ್ಪಳಿಸಿಯೇ ಬಿಟ್ಟಿತು ಅನ್ನುವಷ್ಟರಲ್ಲಿ ತನಗೆ ನಿದ್ದೆಯಿಂದ ಎಚ್ಚರವಾಗಿ ಬಿಟ್ಟಿತು.

ಗೆಂಡೆತಿಮ್ಮ ಎದ್ದವನೆ ಗೌವಳ್ಳಿಯ ಹಳ್ಳದ ಕಡೆಗೆ ಹೋಗಿ ಬರುವಾಗ ಊರ ಮುಂದಿನ ಅರಳಿಕಟ್ಟೆಯ ನಾಗರಕಲ್ಲಿಗೆ ಅಡ್ಡ ಬಿದ್ದು ಬಂದವನೆ ತನ್ನ ಊರಿನ ಕಡೆ ಹೆಜ್ಜೆ ಹಾಕಿದ.

ಗೆಂಡೆತಿಮ್ಮ ತನ್ನ ಊರನ್ನು ಮುಟ್ಟಿದಾಗ ಇಳಿಹೊತ್ತಾಗಿತ್ತು. ಗೂಡೆಯನ್ನು ಹೊತ್ತು ಕೊಂಡೇ ಬಂದ ಗೆಂಡೆತಿಮ್ಮ ಉಳಿಮಾವಿಗೆ

ನೆಂಬುದು ಕಂಡವರಿಗೆ ಸ್ಪಷ್ಟವಾಗಿತ್ತು.

ತನಗಿಂತ ಮುಂಚೆ ಮರಂಕಿ ಬಂದಿದ್ದು ತಿಳಿದು ಗೆಂಡೆತಿಮ್ಮನಿಗೆ ತುಂಬಾ ಸಂತೋಷ ವಾಯಿತು. ಅವಳನ್ನು ಎಷ್ಟು ಬೇಗ ನೋಡಲಿ ಅನ್ನುವ ಬಯಕೆ ಉತ್ಕಟವಾಗಿತ್ತು. ದಾರಿಯುದ್ದಕ್ಕೂ 'ದೇವ್ರೆ ಅವಳ್ಗೆ ಏನೂ ಆಗ್ದೆ ಇದ್ರೆ ಸಾಕು' ಅಂತ ಹೇಳಿಕೊಳ್ಳು ತ್ತಲೇ ಬಂದಿದ್ದ. ಬೆಳಗಿನ ಜಾವ ಕಂಡಿದ್ದ ಕನಸು ಇನ್ನೂ ಅವನನ್ನು ಭಯಗ್ರಸ್ತನ ನ್ನಾಗಿಸಿತ್ತು. ಮನೆಯನ್ನು ಮುಟ್ಟಿದ್ದೆ ಮರಂಕಿಯನ್ನು ಯಾವತ್ತು ಕಂಡಿರದಿದ್ದವ ನಂತೆ ನೋಡಿದ. ಮರಂಕಿಗೆ ಗಂಡನ ವರ್ತನೆ ತಮಾಷೆಯೆನಿಸಿತು. 'ಥೂ... ಇದ್ಯಾಕ್ಹಿಂಗೆ ನೋಡ್ತಾ ಇದ್ದಿರಿ' ಅಂದಳು, ಗೆಂಡೆತಿಮ್ಮನಿಗೆ ಆ ಕನಸನ್ನು ಹೇಗೆ ಹೇಳುವುದು, ಹೇಳಿದರೆ ಮರಂಕಿ ನಕ್ಕು ಬಿಟ್ಟರೆ ಅಂತ ಅಂದುಕೊಂಡು 'ಯಾಕೂ ಇಲ್ಲ ಸುಮ್ಕೆ' ಎಂದವನೆ ಕಾಲು ತೊಳೆದುಕೊಳ್ಳಲು ನೀರು ಮನೆಗೆ ನಡೆದ. ಇಷ್ಟರಲ್ಲಾಗಲೆ ಮರಂಕಿ ಅಡಿಗೆ ಮಾಡಿ ದ್ದಳು. ಗೆಂಡೆತಿಮ್ಮ ಉಣ್ಣಲು ಕೂತಾಗ ಮರಂಕಿ ತವರಿನಿಂದ ತಂದಿದ್ದ ತಿಂಡಿಯನ್ನು ಕೊಟ್ಟಳು. 'ನೀವು ಬರ್ನಿಲ್ಲ ಅಂತ ಅಪ್ಪ, ಚಿಕ್ಕವ್ವಯೆಲ್ಲ ಎಷ್ಟು ಚಿಕ್ಕದಾಗಿ ಮೊಕ ಮಾಡ್ಕಂಡ್ರು ಗೊತ್ತ,' ಅಂದಳು. ತನ್ನ ಮಾವನವರಿಗೆ ನಿಜವಾಗಿಯೂ ಬೇಜಾರಾಗಿರ-ಬೇಕೆಂದುಕೊಂಡ ಗೆಂಡೆತಿಮ್ಮ. ಉಂಡಾದ ಮೇಲೆ ತಣ್ಣಗಿದ್ದ ಗಾರೆಯ ನೆಲದ ಮೇಲೆ ಹಾಗೇ ಮೈ ಚಾಚಿದ. ಅಷ್ಟು ದೂರದಿಂದ ನಡೆದು ದಣಿದಿದ್ದ ಅವನು ಕಣ್ಣು ಮುಚ್ಚಿದ್ದೇ ಗೊರಕೆ ಹೊಡೆಯತೊಡಗಿದ. ಮತ್ತೆ ಅವನು ಎದ್ದಾಗ ಆಗಲೇ ಸಂಜೆಯಾಗಿತ್ತು. ಎದ್ದವನೆ ಹೆಂಡತಿಯ ಮಾತಿಗನುಗುಣವಾಗಿ ಮುಖ ತೊಳೆದ ಕೆರೆಯ ಕಡೆ ನಡೆದ.

ಗೆಂಡೆತಿಮ್ಮ ಕೆರೆಯಿಂದ ಹಿಂತಿರುಗುವಾಗ ಅತ್ಯಂತ ಅಪ್ರಿಯವಾದದ್ದೂ ತನ್ನ ಕಿವಿಗೆ ಕುದಿದ ಎಣ್ಣೆಯನ್ನು ಸುರಿದಷ್ಟು ನೋವನ್ನು ಉಂಟುಮಾಡವಂಥದೂ ಆದ ಸುದ್ದಿ

ತಾನು ಮರಂಕಿಯನ್ನು ಶಿವಣ್ಣನವರ ಜೊತೆ ಕಳಿಸಿದ ದಿನ ಅವರಿಬ್ಬರೂ ಸಿನಿಮಕ್ಕೆ ಹೋದುದಾಗಿಯೂ, ಅವತ್ತು ಇಬ್ಬರೂ ಉಳಿಮಾವಿಗೆ ಹೋಗದೆ ಮೈಸೂರಿನಲ್ಲೇ ರಾತ್ರಿ ಕಳೆದುದನ್ನು ತಾನೇ ಕಂಡುದಾಗಿಯೂ ಮಾರಿಗುಡಿಯ ಆಚೆ ಕೂತಿದ್ದವರಿಗೂ ಕೇಳಿಸು ವಂತೆ ಕಾಳ ಹೇಳಿದ್ದನ್ನು ಕೇಳಿ ಈಗ ಕೇರಿ ಯಲ್ಲೆಲ್ಲ ಅದೇ ಮಾತುಕತೆಯಾಗಿದೆ ಅಂತ ನಾಗ ಹೇಳಿದಾಗ ಗಂಡೆತಿಮ್ಮನಿಗೆ ಕಾಳನ ಮೇಲೆ ಭಯಂಕರ ಕೋಪ ಉಂಟಾಯಿತು.

ಗಂಡೆತಿಮ್ಮ ಮಾರಿಗುಡಿಯ ಹತ್ತಿರ ಬಂದಾಗ ಅಲ್ಲಿ ಸುಮಾರು ಜನ ಗುಡಿಯ ಜಗಲಿಯ ಮೇಲೆ ಹೊರಗೆ ಕಲ್ಲಿನ ಬೆಂಚುಗಳ ಮೇಲೆ ಕೂತಿದ್ದರು. ಕಾಳ ಅಲ್ಲೇ ಗುಡಿಯ ಹಂತದ ಮೇಲೆ ಕೂತಿದ್ದ. ಗಂಡೆತಿಮ್ಮ ಗುಡಿಯ ಹತ್ತಿರ ಬಂದವನೆ ನೇರವಾಗಿ ಕಣ್ಣಿಗೆ ಬಿದ್ದ ಕಾಳನನ್ನು ಹಂತದಿಂದ ಅನಾಮತ್ತಾಗಿ ಎತ್ತಿ ಗುಡಿಯ ಅಂಗಳಕ್ಕೆ ಕುಕ್ಕಿದವನೆ ಅವನು ತಿಂದದ್ದನ್ನೆಲ್ಲ ಅಲ್ಲೇ ಕಕ್ಕಿಕೊಳ್ಳುವಂತೆ ನಾಕು ಮಡಗಿದ. ಏನು ಎಂದು ವಿಚಾರಿಸಲೂ ಇಲ್ಲ. ಅಲ್ಲಿದ್ದವರು ಯಾರೂ ಅವನನ್ನು ತಡೆಯಲಿಲ್ಲ. ಅವರಲ್ಲಿ ಸುಮಾರು ಜನಕ್ಕೆ ಕಾಳ ಅವತ್ತು ರಾತ್ರಿ ಆಡಿದ್ದು ಸರಿಯೆನಿಸಿರ ಲಿಲ್ಲ. 'ಮಗ ಆಡಿದ್ದಕ್ಕೆ ಅನುಭವಸ್ಲಿ ಬುಡು' ಅಂತ ಮಾತಿಲ್ಲದೆ ಕೂತೇ ಇದ್ದರು. ಜೀವ ಹೋಗುವಂತೆ ಗಂಡೆತಿಮ್ಮ ಇಕ್ಕಿದ. ಅಷ್ಟರಲ್ಲಿ ಯಾರೋ ಗಂಡೆತಿಮ್ಮನನ್ನು ದೂರ ಎಳೆದು ಕೊಂಡು ಹೋದರು.

ಕೇರಿಯ ಜಗಳ ಊರ ಮುಂದೆ ಹೋಗು ವುದು ಬೇಡ ಅಂತ ಪರಿಪಾರದ ಕೇರಿಯ ಯಜಮಾನರು ತಮ್ಮ ಕೇರಿಯಲ್ಲೇ ಕೂಟ ಸೇರಿ ಕಾಳನಿಗೆ ಛೀಮಾರಿ ಹಾಕಿ ಗಂಡೆತಿಮ್ಮನ ಕಾಲಿಗೆ ಬಿದ್ದು ತಪ್ಪಾಯ್ತು ಅಂತ ಒಪ್ಪಿ ಕೊಳ್ಳಲು ಹೇಳಿದಾಗ ಕಾಳ ಸದ್ದಿಲ್ಲದೆ ಕೂಟ ದವರ ನಿರ್ಣಯವನ್ನು ಪರಿಪಾಲಿಸಿದ.

ಮರಂಕಿ ಆ ರಾತ್ರಿ ಗಂಡನನ್ನೂ ಪರಿಪರಿ ಯಾಗಿ ಓಲೈಸಿದಳು. ಮೊದಲಿನಿಂದ ನೀವು ಹೀಗೆ ಜೋರಾಗಿದ್ದರೆ ಇಷ್ಟೆಲ್ಲ ರಂಪ ಆಗು ತ್ತಿರಲಿಲ್ಲ' ಅಂದಳು. ಗಂಡೆತಿಮ್ಮನಿಗೆ ಇದು ನಿಜ ಅನ್ನಿಸಿತು.

## ೧೭

ಇಷ್ಟು ಕಾಲ ಋತುಮಾನಗಳಲ್ಲದೆ ಬೇರಾವ ಶಕ್ತಿಯೂ ಗೌವಳ್ಳಿಯ ಬದುಕನ್ನು ಯಾವ ಬಗೆಯ ಏರಿಳಿತಕ್ಕೂ ಒಳಗು ಮಾಡಿರ ಲಿಲ್ಲ. ನೆಮ್ಮದಿಯಿಂದಿದ್ದ ಇಲ್ಲಿನ ಜೀವನಕ್ಕೆ ಇತ್ತೀಚೆಗೆ ಬಿಸಿಗಾಳಿ ಬೀಸತೊಡಗಿತ್ತು. ದುರ್ಗಂಧಮಯವಾದ ಊರಬೀದಿಗಳಲ್ಲಿ ಆಗೀಗ ಸುಗಂಧದ ತೆರೆಯೊಂದು ಹರಿದಂತೆ, ಹಠಾತ್ತನೆ ಕಾಮನಬಿಲ್ಲಿನ ಬಣ್ಣಗಳೆ ಹೆಣ್ಣು ಗಳಾಗಿ ಓಡಾಡುತ್ತಿರುವಂತೆ ಗೌವಳ್ಳಿಯ ಪ್ರಾಯದ ಹುಡುಗರಿಗೆ ಚಿತ್ರವಿಚಿತ್ರವಾದ ಅನುಭವಗಳಾಗತೊಡಗಿದ್ದುವು. ಊರಿನ ಒಂದಲ್ಲ ಒಂದು ಮನೆಯಲ್ಲಿ ಏನಾದರೊಂದು ಆಶ್ಚರ್ಯ ಸಂಭವಿಸಿ ಎಲ್ಲರೂ ತಲ್ಲಣಗೊಳ್ಳು ವುದು ಸಾಮಾನ್ಯವಾಗಿಬಿಟ್ಟಿತು. ಹಾಗೆಯೇ ಎಷ್ಟೋ ಮನೆಗಳು ಯಾವ ಕೇಡು ಕಾದಿ ದೆಯೋ ಎಂದು ಈ ಅಪರಿಚಿತ ವಾಸನೆಗೆ, ಬಣ್ಣಗಳಿಗೆ ಭಯಪಟ್ಟು ತತ್ತರಿಸಿದವು.

ಮಾಲೀಗೌಡರ ದಾಯಾದಿಗಳಾದ ಕುಂಟ ಸಿಂಗ್ರೇಗೌಡರ ಸೊಸೆ ಕೆಂಪಗೌರಿ ಗಂಡೆತಿಮ್ಮ ನಿಂದ ಗಂಧದೆಣ್ಣೆ ತರಿಸಿ ತಲೆಗೆ ಹಚ್ಚಿಕೊಳ್ಳು ತ್ತಿದ್ದುದು ಆಕೆಯ ಅತ್ತೆ ನಾಗಪ್ಪನಿಗೆ ಗೊತ್ತಾದಾಗ ಕೆಂಡವಾದಳು. 'ಎಷ್ಟು ಕಾಳು ಸುರಿದು ತರಿಸಿದಿ' ಎಂದು ಗದ್ದರಿಸಿದಾಗ ಅದು ತನ್ನ ತೌರಿಂದ ತಂದದ್ದು ಎಂದು ಕೆಂಪಗೌರಿ ಮಾರುತ್ತರಿಸಿದಳು. ಮಗ ಸಿದ್ದುರನಂತೂ ಕಾಲು ಕಿತ್ತಿದ. ಕುಂಟ ಸಿಂಗ್ರೇಗೌಡರು ಬಂದು ಜಗಳ ನಿಲ್ಲಿಸಬೇಕಾ ಯಿತು.

ಶಿವಾಚಾರದ ಕೇರಿಯ ಬಸಮ್ಮನ ಮನೆ ಯಲ್ಲಿ ಆಕೆಯ ಸೊಸೆ ಚೆನ್ನಿಯು ಲಂಗ ತೊಟ್ಟಿದ್ದಕ್ಕಾಗಿ ಅತ್ತೆ–ಸೊಸೆಯರಲ್ಲಿ ಖಾಡಾ ಖಾಡಿ ಸುರುವಾಯಿತು. ಮಗನೂ ತನ್ನ ಹೆಂಡತಿಯ ಬೆನ್ನು ಕಟ್ಟಿದ. ಬಸಮ್ಮ ಮಗ–ಸೊಸೆಯರ ವಿರುದ್ಧ ಅನ್ನ ಸತ್ಯಾ

ಗ್ರಹ ಪ್ರಾರಂಭಿಸಿದಳು. ಸಂಜೆಗೆ ಅಕ್ಕ-ಪಕ್ಕದ ಮನೆಯವರು ಬಂದು ಮಗ-ಸೊಸೆಯರಿಂದ 'ತಪ್ಪಾಯ್ತು' ಅನ್ನಿಸಿದಾಗಲೇ ಬಸಮ್ಮ ಶಾಂತಳಾದಳು.

ಹೀಗೆ ಗೌವಳ್ಳಿಯ ಒಂದಲ್ಲ ಒಂದು ಮನೆ ದಿನವೂ ಅಂತಃಕಲಹದಿಂದ ಅಸ್ವಸ್ಥವಾಗ ತೊಡಗಿತ್ತು. ಕೆಲವು ಮನೆಗಳಲ್ಲಿ ಹೆಂಗಸರ ಮಾತಿಗೆ ಗಂಡಸರೂ ತಲೆ ಕೆಡಿಸಿಕೊಂಡರು. ಮಾತಿಗೆ ಮಾತು ಬೆಳೆದು ಕೈ ಕೈ ಮಿಲಾಯಿಸುವ ಮಟ್ಟಕ್ಕೂ ಸ್ಥಿತಿ ಹದಗೆಟ್ಟಿತು. ವಾರಗಿತ್ತಿಯರು ಇರುವ ಮನೆಗಳಲ್ಲಿ ಅವಳಿಗಿಂತ ತಾನೇನು ಕಡಿಮೆ ಅಂತ ಇವಳು ಇವಳಿಗಿಂತ ತಾನೇನು ಕಡಿಮೆ ಅಂತ ಅವಳು ಪೈಪೋಟಿಯಿಂದ ಮನೆಯ ದಿನಸಿಯನ್ನು ಗೆಂಡೆತಿಮ್ಮನಿಗೆ ಸುರಿದು ತಮಗೆ ಬೇಕಿದ್ದನ್ನು ತರಿಸಿಕೊಳ್ಳತೊಡಗಿದರು. ತಮ್ಮ ಹೆಂಡತಿಯರು ಬಯಸಿದ್ದು, ಬಳಸಿದ್ದು ಗುಪ್ತವಾಗಿ ತಮಗೆ ಖುಷಿಯನ್ನುಂಟುಮಾಡುವಂಥದೇ ಆಗಿದ್ದುದರಿಂದ ಗೌವಳ್ಳಿಯ ಪಡ್ಡೆ ಹುಡುಗರು ಒಳಗೊಳಗೆ ಹೆಂಡತಿಯರ ಪರವಾಗಿಯೇ ಇದ್ದರು.

ಯಾರಿಗೆ ಏನೇ ಅನ್ನಿಸಲಿ ಬಿಡಲಿ ಅಂತೂ ಗೌವಳ್ಳಿಯ ಬೀದಿಗಳಲ್ಲಿ ಬೀಸತೊಡಗಿದ್ದ ಹೊಸ ಗಾಳಿ ಎಂಥ ಅಡೆತಡೆಯನ್ನೂ ಲೆಕ್ಕಿಸದೆ ಬಹಳಷ್ಟು ಮನೆಗಳಿಗೆ ನುಗ್ಗಿತ್ತು. ನುಗ್ಗಿದ ಮನೆಗಳಲ್ಲಿ ಉಲ್ಲಾಸದ ಜೊತೆಗೆ ಆತಂಕವನ್ನೂ ಉಂಟುಮಾಡಿತ್ತಾದರೂ ಹೊಸ ಬದುಕಿನ ಆವಾಹನೆಗೆ ಎಲ್ಲರನ್ನೂ ಆಮಂತ್ರಿಸಿತ್ತು.

ಹಾಗೆಯೆ ಗೆಂಡೆತಿಮ್ಮನ ತಲೆಮೇಲಿನ ಗೂಡೆ ಗೌವಳ್ಳಿಯ ಗೂಢಬಯಕೆಗಳ ಗರ್ಭವಾಗಿತ್ತು. ಗೆಂಡೆತಿಮ್ಮ ಮೊದಲು ತಾನು ಸಂಗ್ರಹಿಸಿದ ದಿನಸಿಯನ್ನು ಶಿವರಾಮ ಪೇಟೆಯಲ್ಲಿ ಸೆಟ್ಟರ ಅಂಗಡಿಗಳಿಗೆ ಕೊಟ್ಟು ಬಿಡುತ್ತಿದ್ದವನು ಈಗ ದೊಡ್ಡ ಮಾರ್ಕೆಟ್ಟಿನಲ್ಲಿ ಹರಾಜಿಗೆ ಬಿಡುತ್ತಿದ್ದ. ಆಣೆ ಕಾಸುಗಳ ಲೆಕ್ಕಕ್ಕೆ ಬದಲು ನೋಟುಗಳ ಲೆಕ್ಕವಾಗಿ ಬಿಟ್ಟಿತ್ತು ಅವನ ವ್ಯವಹಾರ. ಆದರೂ ಮನಸ್ಸಿನಲ್ಲಿ ಏನೋ ಅಳುಕು.

ಸಾಲುಂಡಿಯಲ್ಲಿ ಅವತ್ತು ಕಾಳನ ಜೊತೆಗೆ ಆದ ಹೊಡೆದಾಟವನ್ನು ಎಷ್ಟು ಪ್ರಯತ್ನಪಟ್ಟರೂ ಗೆಂಡೆತಿಮ್ಮನಿಗೆ ಮರೆಯಲಾಗುತ್ತಿರಲೇ ಇಲ್ಲ. ಮರಂಕಿ ಅಂಥವಳೆ? ಅವಳಿಗಾಗಿಯೆ ಅಲ್ಲವೆ ಅವ್ವ ಅಣ್ಣ ಅತ್ತಿಗೆಯರನ್ನೂ ಬಿಟ್ಟು ಬೇರೆಯಾಗಿದ್ದು? ಇಷ್ಟಾಗಿಯೂ ತನಗೇಕೆ ದ್ರೋಹ ಬಗೆಯಬೇಕು? ಇಲ್ಲ ಇದೆಲ್ಲ ತಮ್ಮನ್ನು ಕಂಡರಾಗದವರ ಕಿತಾಪತಿಯೆ? ಇದ್ದರೂ ಇರಬೇಕು. ತನ್ನ ಮರಂಕಿ ಯಾವತ್ತೂ ತನ್ನನ್ನು ಅಸಡ್ಡೆಯಿಂದ ಕಂಡವಳಲ್ಲ. ತಾನೇಕೆ ಹೀಗೆ ಅವಳ ಬಗ್ಗೆ ಕೆಟ್ಟದ್ದನ್ನೆಲ್ಲ ಯೋಚಿಸಬೇಕು?

ಒಟ್ಟಾರೆ ಗೆಂಡೆತಿಮ್ಮನ ಮನಸ್ಸು ಇತ್ತೀಚೆಗೆ ಒಳಗೊಳಗೆ ಸವೆಯತೊಡಗಿತ್ತು.

## ೧೮

ಗೆಂಡೆತಿಮ್ಮನಿಗೆ ಮರಂಕಿಯಿಂದಾಗಿ ಸಾಲುಂಡಿಯಲ್ಲಿ ಯಾಕೋ ತಲೆಯೆತ್ತಿ ನಡೆಯುವುದೇ ಕಷ್ಟವಾಗಿತ್ತು. ತಾನು ವ್ಯಾಪಾರಕ್ಕೆ ಹೋಗುವಾಗ ಬರುವಾಗ ಎಲ್ಲರ ಕಣ್ಣುಗಳೂ ತನ್ನನ್ನು ಇರಿಯುತ್ತಿರುವಂತೆ ಭಾಸವಾಗತೊಡಗಿತ್ತು.

ಗೆಂಡೆತಿಮ್ಮನಿಗಿದ್ದ ಇಬ್ಬರೇ ಸಹೃದಯರೆಂದರೆ ಮುದ್ದ ಮತ್ತು ಅವನ ಅವ್ವ ದೇವೀರವ್ವ. ಇಂಥ ವಿಷಯ ಮುದ್ದನ ಜೊತೆ ಆಡುವಂಥದಲ್ಲ. ದೇವೀರವ್ವನಿಗೆ ಹೇಳಬೇಕೆಂದುಕೊಂಡಿದ್ದು ಹೇಳಲಾಗಿರಲೇ ಇಲ್ಲ.

ಅವತ್ತು ಇಳಿಹೊತ್ತು ದೇವೀರವ್ವ ಅವರೆಕಾಯಿ ಕುಯ್ಯುವುದಕ್ಕೆ ಊರ ಮುಂದಿನ ಹುಣಸೆಮರದ ಹೊಲಕ್ಕೆ ಹೊರಟಾಗ ಗೆಂಡೆತಿಮ್ಮನೂ ವ್ಯಾಪಾರ ಮುಗಿಸಿ ಬಂದು ಕೂತಿದ್ದವನು ಅವರ ಜೊತೆ ಹೊರಟ.

ಊರ ಮುಂದಿನ ಹುಣಿಸೆ ಮರದ ದೊಡ್ಡ ಹೊಲವೇ ಮಾಲೇಗೌಡರ ಕಣದ ಹೊಲವೂ ಆಗಿತ್ತು. ಗೌಡರ ಮನೆಯ ಆಳುಗಳೆಲ್ಲ ಕಣ ಮಾಡುವುದರಲ್ಲಿ ನಿರತರಾಗಿದ್ದರು.

ದೇವೀರವ್ವ ಗೇಂಡೆತಿಮ್ಮ ಅವರೆಕಾಯಿ ಕುಯ್ಯುತ್ತಿದ್ದರು.

ಮುದ್ದ ಅವ್ವನ ಹತ್ತಿರ ಬಂದಾಗ ಗೆಂಡೆತಿಮ್ಮನ ಕಣ್ಣಲ್ಲಿ ನೀರು ತುಂಬಿ ಕೊಂಡಿತ್ತು. ಅವನು ಬಿಕ್ಕುತ್ತ ಅವ್ವನಿಗೆ ಏನೋ ಹೇಳುತ್ತಿದ್ದ. ಅವ್ವ ಅವನಿಗೆ ಸಮಾಧಾನದ ಮಾತು ಹೇಳುತ್ತಿದ್ದುದು ಮುದ್ದನಿಗೆ ಏನಂತ ಅರ್ಥವಾಗಲಿಲ್ಲ. ಮುದ್ದ ಬಂದು ತಮ್ಮ ಸಮೀಪವೇ ನಿಂತರೂ ದೇವೀರವ್ವನಾಗಲಿ ಗೆಂಡೆತಿಮ್ಮನಾಗಲಿ ತಮ್ಮ ಮಾತುಕತೆ ನಿಲ್ಲಿಸಲಿಲ್ಲ. ದೇವೀರವ್ವ ಗೆಂಡೆತಿಮ್ಮನಿಗೆ 'ನೋಡು ಗೆಂಡೆತಿಮ್ಮ, ಚೆನ್ನಾಗಿ ಬಾಳದು ಕಂಡ್ರೆ ತಡಕೆಳಕಾಗದ ಜನ ಅಂಗಂದ್ರು, ಇಂಗಂದ್ರು ಅಂತ ನೀನ್ಯಾಕೆ ಯಸನ ಮಾಡ್ತಿ? ಮರಂಕಿ ಚಂದಕ್ಕವಳೆ ಅಂತ ಇಲ್ಲದ್ದ ಆವಳ ತಲೆಗ ಕಟ್ಟದ್ರು ಅಂತ ನೀನೂ ತಲೆ ಕೆಡ್ಸಕಂಡು ಕುಂತಿದ್ದಿಯಲ್ಲ, ನಿಂಗೊಸಿನೂ ಬುದ್ಧಿಯಿಲ್ವಾ ಅಂದು?' 'ಇಲಿ ಹೋಯ್ತು ಅಂದ್ರೆ ಉಲೀನೇ ಹೋಯ್ತು ಅನ್ನ ಜನ ಎಲ್ಲೋಗೇದ್ರು ಅವ್ರೆ, ಯಾರ ಮೆಚ್ಚಿಯಿನಾಗ್ಬೇಕು, ಮೇಲೆ ಉರಿಯೋ ದೇವ್ರು ಮೆಚ್ಚಂಗೆ ನಡ್ಕಂಡ್ರಾಯ್ತು ಬುಡು' ಅಂದರು.

ದೇವೀರವ್ವನ ಮಾತುಗಳು ಗೆಂಡೆತಿಮ್ಮನ ಎದೆಗುದಿಯನ್ನು ಆದಷ್ಟೂ ಸಂತೈಸಿದವು. ಈ ಎಲ್ಲ ಮಾತುಕತೆಯನ್ನು ಪರಮ ಕೌತುಕದಿಂದ ಕೇಳುತಿದ್ದ ಮುದ್ದ ಗೆಂಡೆತಿಮ್ಮ ಅತ್ತಿದ್ದಕ್ಕೆ ಮರಂಕಿಯೇ ಕಾರಣ ಇರಬೇಕು ಅಂತ ಅಂದುಕೊಂಡ.

## ೧೯

ಗೆಂಡೆತಿಮ್ಮ ಗೂಡೆ ಅಂಗಡಿಯ ಗೌಳ್ಳಿಯ ಪ್ರಾಯದ ಹುಡುಗಿಯರ ತುಡಿವೆದೆಗಳನ್ನು ತಣಿಸುವ ಸಂಜೀವಿನಿಯಾಗಿದ್ದಂತೆ ಅದು ಮರಂಕಿಯ ಮನಸ್ಸಿಗೆ ದಿನದಿನವೂ ಹೊಸ ಹೊಸ ಪ್ರಲೋಭನೆಗಳನ್ನು ಉಕ್ಕಿಸುತ್ತಿತ್ತು. ಗೆಂಡೆತಿಮ್ಮನ ಆದಾಯ ಎಷ್ಟು ಶೀಘ್ರವಾಗಿ ಅಭಿವೃದ್ಧಿಸಿತೋ ಅಷ್ಟೇ ಪ್ರಮಾಣದಲ್ಲಿ ಮರಂಕಿಯ ಬೇಡಿಕೆಗಳೂ ಬೆಳೆದವು.

ಈ ಸಲ ಗೆಂಡೆತಿಮ್ಮ ಗೌವಳ್ಳಿಯ ವ್ಯಾಪಾರ ಮುಗಿಸಿ ಸಾಲುಂಡಿಗೆ ಬಂದಾಗ ಮರಂಕಿ ಗಂಡನನ್ನು ಪರಿಪರಿಯಾಗಿ ಓಲೈಸಿದಳು. ಕಡೆಗೆ ಅವನ ಕಿವಿಯಲ್ಲಿ ಅವನು ಪುಳಕಗೊಳ್ಳುವಂಥ ಸುದ್ದಿಯನ್ನು ಪಿಸುಗುಟ್ಟಿದಳು. ಗೆಂಡೆತಿಮ್ಮ ಪರಮಾನಂದದಿಂದ ಹಿಗ್ಗಿದ. ಅವಳು 'ತನಗೆ ಮೂರು ತಿಂಗಳಾಗಿದೆ' ಅಂದಾಗ ಅವಳನ್ನು ಅಪ್ಪಿ ಮುದ್ದಾಡಿದ. ಆ ಕ್ಷಣದಿಂದಲೇ ಮನೆಯ ಸಣ್ಣಪುಟ್ಟ ಕೆಲಸಗಳನ್ನು ತಾನೇ ಮಾಡಿ ಕೊಡಲು ಮುಂದಾಗುತ್ತಿದ್ದ. ತನ್ನ ಗಂಡನ ರೀತಿಗೆ ಮರಂಕಿ ಒಳಗೇ ನಗುತ್ತಿದ್ದಳು.

ಈಗ ಗೆಂಡೆತಿಮ್ಮ ಗೌವಳ್ಳಿಯ ಪರಿವಾರದ ಕೇರಿಯಲ್ಲಿ ತುಂಬಾ ಪ್ರತಿಷ್ಠಿತ ವ್ಯಕ್ತಿಯಾಗಿ ಬಿಟ್ಟಿದ್ದ. ಅವನಿಗೂ ಊರಿನಲ್ಲಿ ಹತ್ತು ಜನದ ಬೆಂಬಲವಿದೆ ಅನ್ನುವುದು ಸ್ವಲ್ಪ ದಿನದ ಹಿಂದೆ ಆದ ಕಾಳನ ಘಟನೆಯಿಂದ ವ್ಯಕ್ತವಾಗಿತ್ತು. ಅವತ್ತಿನಿಂದ ಕೇರಿಯವರು ಅವನನ್ನು ಬಹುವಚನದಲ್ಲಿ ಮಾತಾಡಿಸುತ್ತಿದ್ದರು. ಮರಂಕಿಯನ್ನು ಕಂಡರೂ ಅಷ್ಟೆ ಮರಂಕಿಯೂ ತಾ ಮಾತಾಡಿಸಿದವರೊಡನೆ ತುಂಬಾ ವಾತ್ಸಲ್ಯದಿಂದ ಮಾತಾಡುತ್ತಿದ್ದಳು. ಜೊತೆಗೆ ಯಾರನ್ನು ಆಪ್ತಾಗಿ ಹಚ್ಚಿಕೊಳ್ಳದೆ ಎಷ್ಟುಬೇಕೋ ಅಷ್ಟರಲ್ಲೇ ಇಟ್ಟಿದ್ದಳು. ದಿನವೂ ಬಾವಿಯಿಂದ ನೀರು ತರಲು ಹೋಗುವಾಗ ಬರುವಾಗ ಮರಂಕಿಯನ್ನು ಕದ್ದು ನೋಡುವ ಕಣ್ಣುಗಳು ಮಾತ್ರ ಕಡಿಮೆಯಾಗಲಿಲ್ಲ. ಕಂಡವರೆಲ್ಲ ಒಳಗೇ ದ್ರವಿಸಿಬಿಡುವಂತೆ ಮಾಡುವ ಮೋಡಿ ಮರಂಕಿಯ ಚೆಲುವಿಗಿತ್ತು. ಒಟ್ಟಾರೆ ಅವಳಿಂದಾಗಿ ಸಾಲುಂಡಿಯ ಪರಿವಾರದ ಕೇರಿಗೆ ಒಂದು ಹೊಸ ಕಳೆ ಬಂದಿತು, ಹೊಸ ಬಗೆಯ ಜೀವನ ಪ್ರಾರಂಭವಾಗಿತ್ತು.

ಒಮ್ಮೆ ಗೆಂಡೆತಿಮ್ಮ ವ್ಯಾಪಾರಕ್ಕೆ ಹೊರಟಾಗ ಮರಂಕಿಯೂ ಅವನ ಜೊತೆ ಮೈಸೂರಿಗೆ ಹೊರಟಳು. ತನ್ನ ಹೆಂಡತಿ ಬಸುರಿ ಅಮ್ಮನಸೆ, ಇನ್ನು ಅವಳು ಆಪ್ತಾಗಿ ಓಡಾಡಬ್ಯಾಡ್ದು'

ಅಂತ ಹೇಳಿ 'ನಿಂಗೇನ್ಬೇಕು ಯೇಳು ಕುಂತ-ತಕ್ಕ ತಂದ್ಕೊಡ್ತೀನಿ' ಅಂದ. ಮುರಂಕಿ ಒಪ್ಪ ಲಿಲ್ಲ. ಮನಸ್ಸಿನಲ್ಲಿ ಈ ಸುದ್ದಿ ಯಾರಾದರೂ ಈಗಲೇ ಹೇಳಿಬಿಟ್ಟನೋ ಅಂದುಕೊಂಡು ಹಠ ಮಾಡಿ ಹೊರಟೇಬಿಟ್ಟಳು. ಗೆಂಡೆತಿಮ್ಮ ಮನಸ್ಸಿಲ್ಲದ ಮನಸ್ಸಿನಲ್ಲಿ ಕರೆದೊಯ್ದ. ಮುರಂಕಿ ಇಷ್ಟು ದಿನ ಗ್ರೂಡ ಕೊಟ್ಟಿದ್ದ ದುಡ್ಡ ನ್ನೆಲ್ಲ ಕೂಡಿಟ್ಟಿದ್ದು ಇವತ್ತು ತನ್ನ ಬಹಳ ದಿನದ ಬಯಕೆಯನ್ನು ಇಂಗಿಸಿಕೊಳ್ಳಲು ಹೊರಟಿದ್ದಳು.

ಮೈಸೂರಲ್ಲಿ ಗೆಂಡೆತಿಮ್ಮ ಶೆಟ್ಟಿ ಅಂಗಡಿ ಯಲ್ಲಿ ತನ್ನ ಸಾಮಾನುಗಳನ್ನು ಕೊಳ್ಳುವಷ್ಟ ರಲ್ಲಿ ಮುರಂಕಿಯು ಶೆಟ್ಟಿಯ ಮಗ ರಾಮ ದಾಸಪ್ಪನ ಜೊತೆ ಗ್ರಾಮಾಫೋನನ್ನು ಕೊಂಡು ತಂದೇ ಬಿಟ್ಟಳು. ಗೆಂಡೆತಿಮ್ಮನಿಗೆ ತನ್ನ ಹೆಂಡತಿಯ ಕಾರುಬಾರು ಈಗಷ್ಟೇ ಅರ್ಥ ವಾಯಿತು. 'ಸರಿ, ಬಿಮ್ಮನಿಸೆ ಏನೋ ಬವ-ಸ್ಕಂಡವಳೆ, ನಾಯಾಕೆ ಕ್ವಾಪ ಮಾಡ್ಕಬೇಕು' ಅಂದುಕೊಂಡನು.

ಸಾಲುಂಡಿಯ ಬಸ್ಸಿನ ಹತ್ತಿರ ತನ್ನ ಕೇರಿಯ ತಿಮ್ಮವ್ವನಿಗೆ ಮುರಂಕಿಯನ್ನು ಜೊತೆಗೆ ಕರೆ ದೊಯ್ಯಲು ಹೇಳಿ ಗೆಂಡೆತಿಮ್ಮ ತನ್ನ ದಾರಿ ಹಿಡಿದ. ಮುರಂಕಿ ಜೋಪಾನವಾಗಿ ತನ್ನ ಅಮೂಲ್ಯ ವಸ್ತುವನ್ನು ಊರಿಗೆ ಸಾಗಿಸಿ ದಳು. ತಿಮ್ಮವ್ವ ಹೊತ್ತಿದ್ದ ಕಹಳೆಯನ್ನು ಕಂಡು ಕೆಲವು ಹೈಕಳು ಇದು ಗ್ರಾಮಾಫೋನು ಅಂತ ನಿರ್ಣಯಿಸಿದ್ದೇ ಅವರ ಹಿಂದೆ ಗುಂಪು ಕಟ್ಟಿ ಮುರಂಕಿ ಮನೆ ಮುಟ್ಟುವಷ್ಟರಲ್ಲಿ ವಾನರ ಸೈನ್ಯ ಹಿಂಬಾಲಿಸಿಬಿಟ್ಟಿತು. 'ನಾಳಿಕೆ ಆಕ್ತೀನಿ ಆಗ್ಬನ್ನಿ ಕೇಳಿರಿ' ಅಂತಾ ಮುರಂಕಿ ಅಂದದ್ದೇ ಸೈನ್ಯ ನಿರಾಶೆಯಿಂದ ಸ್ವಸ್ಥಾನಕ್ಕೆ ಮರಳಿತು.

ಅವರೆಲ್ಲ ಹೋದ ಮೇಲೆ ಮುರಂಕಿ ಕುತೂ ಹಲ ತಡೆಯದೆ 'ನಾಗಿನ್' ಸಿನಿಮಾದ ಹಾಡು ಹಾಕಿಯೇ ಬಿಟ್ಟಳು. ಹಾಡು ಮುಗಿಯು ವಷ್ಟರಲ್ಲಿ ಮನೆಮುಂದೆ ಕೋಲಾಹಲವಾದಂ-ತೆನಿಸಿ ಬಾಗಿಲು ತೆರೆದರೆ ದೊಡ್ಡ ಜಾತ್ರೆ. ಬರೀ ಮಕ್ಕಳು. ಅವುಗಳಾಚೆ ದೊಡ್ಡವರ ತಲೆಗಳು ಜಗಲಿಯ ಮೇಲೆ ಒಂದು ಹಿಂಡೇ ಮುರಂಕಿಯ ಆಜ್ಞೆಗನುಗುಣವಾಗಿ ಎಲ್ಲರೂ ಬೀದಿಯಲ್ಲೇ ಉಗುಳೋ ಸಗಣಿಯೋ ಲೆಕ್ಕಿಸದೆ ಅಂಡೂರಿಯೇ ಬಿಟ್ಟರು. ಮುರಂಕಿ ಒಂದು ಜಗಲಿಯ ಮೇಲೆ ಗ್ರಾಮಫೋನ್ ತಂದಿಟ್ಟು 'ಭೂಕೈಲಾಸ'ದ ಹಾಡು ಹಾಕಿದಳು. ಎಲ್ಲರೂ ಕೇಳಿ ತಲೆದೂಗಿದರು. ಆಗದ ಗೂಳನಾಯ-ಕನ ಹೆಂಡತಿಯೂ ಬಾಯಿ ಮೇಲೆ ಕೈಯಿಟ್ಟು ಕೊಂಡಳು. ಕತ್ತಲಾಗುವ ತನಕ ಕೇರಿಯವ ರನ್ನು ಹಾಡುಗಳಿಂದ ತೃಪ್ತಿಗೊಳಿಸಿದಳು.

ಗೌವಳ್ಳಿಯಿಂದ ವಾಪಸ್ಸು ಬಂದ ಗೆಂಡೆತಿಮ್ಮ ಈ ಸೋಜಿಗಕ್ಕೆ ತಾನೂ ಚಕಿತ ನಾಗಿದ್ದ. ಕೇರಿಯ ಇನ್ನಿತರರಂತೆ ಗೂಳ ನಾಯಕ ಮಾತ್ರ ಇದೆಲ್ಲಾ ತಮ್ಮ ಜನಕ್ಕೆ ಹೇಳಿದ್ದಲ್ಲ ಎಂದು ತನ್ನ ತಮ್ಮನ ಹೆಂಡತಿಯ ನಡತೆಗಳು ಒಳ್ಳೆಯದನ್ನೇ ಮಾಡುವಂಥವಲ್ಲ ಅಂದುಕೊಂಡ. ಇವಳಿಂದಾಗಿ ಆಟ ಹೊಡೆ ದಾಟ ಮತ್ತೆ ಇನ್ನಾವ ಅನಿಷ್ಟಗಳು ಕಾದಿ ವೆಯೋಅಂತಾ ಭಯ ಪಟ್ಟ.

ಗ್ರಾಮಾಫೋನು ಬಂದ ವಾರಕ್ಕೆ ಮುರಂಕಿಯ ಅತ್ತೆ ಬೇದಿಯಮ್ಮ ಸತ್ತಳು. ಗ್ರಾಮಾಫೋನ್ ಮೂಲೆಸೇರಿತು. ಗೂಳನಾಯಕ ಮಾತ್ರ ತನ್ನ ಅವ್ವನ ಸಾವಿಗೆ ಮುರಂಕಿ ತಂದ ಅನಿ ಷ್ಟವೇ ಕಾರಣವೆಂದು ಕೂಗಾಡಿದ. ಲೋಕ ತಿಳಿದವರು ಗೂಳನಾಯಕನ ಪೆದ್ದುತನಕ್ಕೆ ನಕ್ಕರು. ಮುರಂಕಿ ಇದಕ್ಕೆ ಕಿವಿಗೊಡಲಿಲ್ಲ. ಅವಳು ಬೇದಿಯಮ್ಮನ ತಿಥಿಗೆ ಬಂದಿದ್ದವ ರನ್ನು ಗ್ರಾಮಾಫೋನಿನಿಂದ ಖುಷಿಪಡಿಸಿದಳು.

೨೦

ರತ್ನವ್ವನ ಮದುವೆ ಸನ್ನಿಹಿತವಾಗಿತ್ತು. ಮಾಲೇಗೌಡರು ಗೆಂಡೆತಿಮ್ಮನಿಗೆ ಹಸೆ ಮಂಟ ಪಕ್ಕೆ ಮತ್ತು ಮದುವೆ ಚಪ್ಪರಕ್ಕೆ ಬೇಕಾದ ಅಲಂಕಾರದ ವಸ್ತುಗಳನ್ನೂ ತರಲು ಸಾಕಷ್ಟು ಹಣ ಕೊಟ್ಟು ಅವನ್ನು ತರುವುದರ ಜೊತೆಗೆ ನಾಲ್ಕು ದಿನ ಮುಂಚೆಯೇ ಅವನ ಹೆಂಡತಿಯನ್ನೂ ಕರೆದು ತರಲು ತಾಕೀತು ಮಾಡಿದರು.

ಗೆಂಡೆತಿಮ್ಮನಿಗೆ ಮರಂಕಿಯನ್ನು ಕರೆದು ತರಲು ಸಮಸ್ಯೆಯಾಗಿತ್ತು. ಗೌಡರೇ ಅದನ್ನು ಬಗೆಹರಿಸಿದರು. ಗೆಂಡೆತಿಮ್ಮ ಮೊದಲ ಬಂದು ಹಸೆ ಕೆಲಸ ಮುಗಿಸಿ, ಸಾಲುಂಡಿಗೆ ಹೋಗಿ ಮರಂಕಿಯನ್ನು ಮೈಸೂರಿಗೆ ಕರೆದು ತಂದರೆ ಅಲ್ಲಿಂದ ಗೌಡರ ಗಾಡಿ ಗೌವಳ್ಳಿಗೆ ಅವಳನ್ನು ಕರೆದು ತರುವುದೆಂದು ನಿರ್ಧಾರವಾಯಿತು. ಗೆಂಡೆತಿಮ್ಮ ಮದುವೆಗೆ ಗ್ರಾಮಾಫೋನು ತರುವುದಾಗಿಯೂ ಹೇಳಿ ಹೊರಟ. ಈ ಎಲ್ಲ ವಿವರಗಳನ್ನು ಅತ್ಯಾಸಕ್ತಿಯಿಂದ ಕೇಳುತ್ತಿದ್ದ ಮುದ್ದ ಅಂತೂ ಕಡೆಗೆ ಗ್ರಾಮಫೋನು ಜೊತೆಗೆ ಮರಂಕಿಯೂ ಬಂದೇ ಬರುವಳೆಂದು ಖುಷಿ ಪಟ್ಟ.

## ೨೧

ಗೆಂಡೆತಿಮ್ಮ ಗೌವಳ್ಳಿಯಿಂದ ಬಂದ ದಿನವೇ ರತ್ನಿಯ ಮದುವೆಗೆ ಗ್ರಾಮಾಫೋನ್ ತೆಗೆದುಕೊಂಡು ಇಬ್ಬರೂ ಹೋಗುವ ವಿಚಾರ ತಿಳಿಸಿದ; ನಗುತ್ತಾ ಸಮ್ಮತಿಸಿದಳು. ರಾತ್ರಿ ಗಂಡನಿಗೆ ಮುಯ್ಯಿ ಮಾಡುವ ವಿಚಾರ ತಿಳಿಸಿ ಇಬ್ಬರೂ ಏನು ಕೊಳ್ಳಬೇಕೆಂದು ಚರ್ಚಿಸಿ ಕಡೆಗೆ ಕುಂಕುಮದ ಬೆಳ್ಳಿ ಭರಣಿಯನ್ನು ಕೊಡುವುದಾಗಿ ನಿರ್ಧರಿಸಿ ಮಲಗಿದರು.

ಮಾಲೇಗೌಡರು ಹೇಳಿದ್ದ ದಿನ ತಾನು ಎದ್ದವನೇ ಗೆಂಡೆತಿಮ್ಮ ಹೆಂಡತಿಗೆ ರತ್ನವ್ವನ ಮದುವೆ ಚಪ್ಪರದ ದಿನ ಮೈಸೂರಿಗೆ ಬರಲು ಹೇಳಿ ತಾನು ಹೊರಟ. ಅವತ್ತು ಮೈಸೂರಿನಲ್ಲಿ ಪಡುವಾರಳ್ಳಿಯ ಕರೀಗೌಡರ ಜೊತೆ ಮದುವೆಗೆ ಬೇಕಿದ್ದ ಸಾಮಾನನ್ನು ವ್ಯಾಪಾರ ಮಾಡಿದ. ಜೊತೆಗೆ ಗೌವಳ್ಳಿಯ ಇನ್ನಿತರರೂ ಹೇಳಿದ್ದ ಸಾಮಾನುಗಳು ಸಿಕ್ಕಿದ್ದು ಹೊಸ ಗೊಡೆಯೊಂದನ್ನು ಕೊಂಡ. ಕೊಳ್ಳುವಾಗ ಯಾಕೋ ಭಯಪಟ್ಟ. ಗೌಡರು ಬೇಗ ಗಾಡಿ ಕಟ್ಟಲು ಅವಸರ ಮಾಡಿದಾಗ ಹೊಸ ಗೊಡೆಗೆ ಪೂಜೆ ಮಾಡಿ ಬಳಸುವುದನ್ನೂ ಮರೆತುಬಿಟ್ಟದ್ದು ಅವನಿಗೆ ನೆನಪಾದದ್ದು ಅರ್ಧ ದಾರಿಗೆ ಬಂದಾಗಲೆ.

ಗಾಡಿಗಳು ಊರು ಮುಟ್ಟಿದಾಗ ಊಟದ ಹೊತ್ತು ಮೀರಿತ್ತು. ದೇವೀರವ್ವ ಎಚ್ಚರವಾಗಿಯೇ ಇದ್ದಳು. ಅವರ ಊಟಕ್ಕೆ ಹಸಿ ತೊಗರಿ ಕಾಳಿನ ಸಾರು ಮಾಡಿ ಕಜ್ಜಾಯನನ್ನು ಉರಿದಿದ್ದಳು. ಗಡದ್ದಾಗಿ ಉಂಡೆದ್ದ ಗೆಂಡೆ-ತಿಮ್ಮ ಜಗಲಿಯಲ್ಲಿ ಮಲಗಿ ಬೆಳಗ್ಗೆ ಎದ್ದ ಕೂಡಲೆ ವ್ಯಾಪಾರ ಮುಗಿಸಿ ಬಂದು ಜಲ್ಲಿ ಕಾಗದದಲ್ಲಿ ಎಂಥೆಂಥ ಚಿತ್ರವನ್ನು ಕೊರೆಯಬೇಕೆಂದು ಯೋಚಿಸಿದ. ಬಿಸಿಲೇರುವಷ್ಟರಲ್ಲಿ ಮಾಲೇಗೌಡರು ಹೇಳಿ ಕಳಿಸಿದ್ದ ಎಲ್ಲ ಮನೆಯಿಂದಲೂ ಮನೆಗೊಂದಾಳು ಚಪ್ಪರ ಹಾಕುವುದಕ್ಕೆ ಬಂದರು. ಊರಿನ ಪಟೇಲರ ಮಾತಿಗನುಗುಣವಾಗಿ ಗೌಡರು ಕೇರಿಯುದ್ದಕ್ಕೂ ಚಪ್ಪರ ಹಾಕಿಸಬೇಕಿತ್ತು. ಪಟೇಲರೇ ಖುದ್ದಾಗಿ ಮೇಲು ವಿಚಾರಣೆಗೆ ನಿಂತರು.

ಎರಡು ದಿನ ದುಡಿದುದರ ಫಲವಾಗಿ ಚಪ್ಪರದ ಕೆಲಸ ಮುಗಿದು ಅದರ ಅಲಂಕಾರ ಮುಗಿದಿರಲಿಲ್ಲ. ಅದೆಲ್ಲ ಗೆಂಡೆತಿಮ್ಮನ ಇಲಾಖೆಗೆ ಸೇರಿತ್ತು. ಅವನು ಚಿತ್ರ ಕೆಲಸ ಮುಗಿಸಿದ್ದ. ಈಗ ಹಸೆ ಮಂಟಪದ ಕೆಲಸಕ್ಕೆ ತೊಡಗಿದ್ದ. ಅದ್ದೂರಿಯ ಈ ಸಿದ್ಧತೆ ಕಂಡು ಗೌವಳ್ಳಿಯ ಜನ ಬಾಯ ಮೇಲೆ ಕೈಯಿಟ್ಟುಕೊಂಡರು.

ಧಾರೆಗೆ ಇನ್ನೂ ಮೂರು ದಿನ ಇರುವಾಗ ರಾತ್ರಿ ಗೌಡರು ಉಂಡು ಹೊರಗೆ ಬರುತ್ತಿದ್ದಂತೆ ಕುಳುವಾಡಿ ನಾಯಿಸಿದ್ದ ಗೌಡರನ್ನು ಚಾವಡಿಗೆ ಕರೆದುಕೊಂಡು ಬರಲು 'ಪಟೇಲರು, ಜೋಯ್ಸರ್ನ್ನೂ, ಜಮ್ಮಾಕೆ ನ್ಯಾಯಂದವ್ರೆಲ್ಲ ಯೇಳವ್ರೆ' ಅಂತ ತಿಳಿಸಿದವನೆ ನೇರವಾಗಿ ಗೆಂಡೆತಿಮ್ಮನ ಹತ್ತಿರ ಹೋಗಿ 'ನಿನ್ನೂ ಕರ್ಕಂಬರಕ್ಕೆ ಯೇಳವ್ರೆ' ಎಂದ. ಗೆಂಡೆತಿಮ್ಮನಿಗೆ ವಿಚಿತ್ರವೆನಿಸಿತು. ನಾಯಿಸಿದ್ದ ಊಟಕ್ಕೂ ಬಿಡದೆ 'ಎಲ್ಲಾರೂ ಕಾಯ್ಕಂಡವ್ರೆ ಜೊತೇಲೇ ಕರ್ಕಂಬಾ ಅಂತ ಯೇಳವ್ರೆ' ಎಂದವನೆ ಅವಸರಿಸಿದ. "ಅದೇನು ನೋಡ್ಬುಟ್ಟು ಬಂದುಣ್ಣುವೆ ಬಾಮಂತೆ.' ಎಂದು ಗೌಡರು ಚಾವಡಿ ಕಟ್ಟೆಗೆ

ಹೊರಟರು.

ಗೆಂಡೆತಿಮ್ಮ ತುಂಬಾ ತಳಮಳದಿಂದ ಗೌಡರನ್ನು ಹಿಂಬಾಲಿಸಿದ. ದಾರಿಯಲ್ಲಿ ನಾಯಿಸಿದ್ದ ನ್ಯಾಯ ತನ್ನ ಮೇಲಿನದೇ ಅಂತ ತಿಳಿಸಿದಾಗ ಗೆಂಡೆತಿಮ್ಮನ ತಲೆಮೇಲೆ ಬಂಡೆಯೊಂದು ಉರುಳಿ ಬಿದ್ದಂತಾಯಿತು.

೨೨

ಗೆಂಡೆತಿಮ್ಮ ಚಾವಡಿಗೆ ಕಾಲಿಡುತ್ತಿದ್ದಂತೆ ಜನಸಮೂಹ ಕಂಡು ಭಯದಿಂದ ಕಂಪಿಸಿದ. ನಾಯಿಸಿದ್ದ ಗೆಂಡೆತಿಮ್ಮನನ್ನು ನೇರವಾಗಿ ನ್ಯಾಯದವರ ಕಾಲುಬುಡಕ್ಕೆ ತಂದು ನಿಲ್ಲಿಸಿದ. ಜಗಲಿಯಲ್ಲಿ ಕೂತಿದ್ದ ಪ್ರತಿಯೊಬ್ಬರೂ ಗೆಂಡೆತಿಮ್ಮನಿಗೆ ಚಿರಪರಿಚಿತರೇ. ಗೌವಳ್ಳಿಯ ಬೀದಿ ಕಲ್ಲುಗಳಷ್ಟೇ ಅವರ ಮುಖಗಳೂ ಅವನಿಗೆ ಬಳಕೆಯಾಗಿದ್ದುವು.

ಗೆಂಡೆತಿಮ್ಮನ ಮೇಲೆ ತಪ್ಪು ಹೊರಿಸಿ ನ್ಯಾಯ ತಂದಿದ್ದವರು ಸುಮಾರು ಆರೇಳು ಜನ. ಪಟೇಲರು ಅವರನ್ನು ಕೂಗಿದರು. ಮೊದಲು ಬಂದ ಕುಂಟ ದ್ಯಾವೇಗೌಡ– 'ಮಾನ ಮರ‍್ಯಾದಿಗೆ ಬದ್ಕವ್ರೆಲ್ಲ ವಸಿ ಕೇಳಿ... ಈ ದೇಶ ಕೆಡ್ಸಿ ಬಂದಿರೋ ಸೂಳೇಮಗ ಕುಂತವ್ನೆ ನೋಡಿ...ಮುಳ್ಳಿ ಕುತಂಗೆ...ಇವ್ನ ನಾವ್ಯಾರೂ ಇಲ್ಲದ ಹೊತ್ನಲ್ಲಿ ಅರೀದ ಯೆಣ್ಣೈಕಳಿಗೆ ಪ್ಯಾಟೇವ್ರು ಆಕೋ ಮನೆ ಆಳ್ಮಾಡೋ ಸಾಮಾನ್ನೆಲ್ಲ ತಂದ್ಕೊಟ್ಟವನೆ...ಅದೆಷ್ಟು ದಿನ್ಸಿ ಕದ್ದು ಕಾಣ್ದಂಗೆ ಸುರಿಸ್ಕಂಡೋಗವ್ನೋ ಕಾಣೆ...ಇವ್ನ ಅನಿಷ್ಟದ ಸಾಮಾನಿಂದ ಅತ್ತಿದ ಜಗಳ ಅರೀದಂಗಾಗದೆ ಕಡೀಕೆ ನನ್ಮಗ ನನ್ಮಕ ಪಾಲ್ಕೊಡು ಅನ್ನಾವಂಟ್ಕೆ ಬಂದು ಕುಂತವ್ನೆ... ಇಂಗೆ ಮನೆ ಆಳ್ಮಾಡೋ ಕೆಲ್ಸ ಮಾಡವ್ನಲ್ಲ ಈ ಜಾತ್ಗೆಟ್ಟ ಬಡ್ಡೀಮಗ... ಇವ್ನಿಂದ ನಾವು ಬದ್ಕಕ್ಬೇಕೋ ಬ್ಯಾಡ್ವೋ ನೀವೇ ಯೇಳಿ.' ಎಂದು ಗೆಂಡೆತಿಮ್ಮನನ್ನು ತಿಂದು ಹಾಕುವಂತೆ ನೋಡಿದ.

ಗೆಂಡೆತಿಮ್ಮ ಮುಖ ಮೇಲೆತ್ತದೆ ಕುಕ್ಕರಗಾಲಲ್ಲಿ ನಡುಗುತ್ತ ಕುಂತಿದ್ದ. ತನ್ನಿಂದ ಹೊಸ ಬಣ್ಣ ಬೆಳಕು ಈ ಊರಿಗೆ ಬಂದಿತೆಂದು ಹಿಗ್ಗಿದ್ದ ಗೆಂಡೆತಿಮ್ಮನ ಅನಿಸಿಕೆ ತಲೆ ಕೆಳಕಾಗಿತ್ತು. ಹೊಸ ಮನೆ ಕೆಂಡಗಣ್ಣಪ್ಪ ಮುಂದೆ ಬಂದು ತನ್ನ ಮನೆಯಲ್ಲಿಯೂ ಇನ್ನೂ ಹತ್ತಾರು ಮನೆಯಲ್ಲಿ ಹೀಗೆಯೇ ಆಗಿರುವ ಅನಾಹುತವನ್ನೂ ಸಭೆಗೆ ಮನವರಿಕೆ ಮಾಡಿ ಗೆಂಡೆತಿಮ್ಮ ಮಾಡಬಾರದ್ದು ಮಾಡಿ ಊರಿಗೆ ಕೇಡು ತಂದವನೇ ಅವನಿಗೆ ಸರಿಯಾದ ದಂಡ ಹಾಕಬೇಕೆಂದು ವಾದಿಸಿದ. ಅಷ್ಟರಲ್ಲಿ ದೊಡ್ಡ ಗಂಟಲೆತ್ತಿ ಮೋಟಮ್ಮ ಬಂದಳು. ಅವಳ ಘಟನೆ ಗೆಂಡೆತಿಮ್ಮನ ಕರುಳನ್ನೇ ಕಿವುಚಿತು. ಅವಳ ಮಕ್ಕಳಾದ ಶಿವಲಿಂಗ, ಗುರುಬಸವ ತಮ್ಮ ಹೆಂಡತಿಯರ ತಾಳಕ್ಕೆ ಕುಣಿದು ತಾಯನ್ನು ಪರದೇಸಿ ಮಾಡಿದ್ದರು.

ಕಡೆಗೆ ಅಲ್ಲೇ ಇದ್ದ ಕೆಂಚಣ್ಣ ದಡಕ್ಕನೆ ಎದ್ದವನೇ 'ಈ ಮನೆ ಆಳ್ಮಾಡೋ ಸೂಳೆ ಮಗ ಇನ್ನು ನಮ್ಮೂರ‍್ಗೆ ಬರದಂಗೆ ಕಟಾಡ್ಬುಡಿ. ಇವ್ನಿಂದಾಗಿ ಬಸವಣ್ಣಂಗಿದ್ದ ನನ್ನ ತಮ್ಮೂ ಬ್ಯಾರೇ ಆಗ್ನೇಬೇಕು ಅಂತ ಕೂತ್ಬುಟ್ಟ. ಕಳ್ಳು ಕತ್ತರ‍್ಸದಂಗೆ ವಂದಾಗಿದ್ದೆಲ್ಲ ಕತ್ತರ‍್ಸಿ ಎರ‍್ಡು ಮಾಡ್ಸದ್ರಿ ನೀವೇ ನ್ಯಾಯ ಮಾಡವ್ರು. ಒಳಗೆ ವಸಿ ಇಣಿ ನೋಡಿದ್ರೆ ಎಲ್ಲಾ ಗೊತ್ತಾಗದು. ಇವ್ನ ಎತ್ಕೊಳ್ನ...ಎಲ್ಲಾ ಈ ಮನೆ ಆಳ್ಮಾಡೋ ಸೂಳೆ ಮಗ್ನಿಂದ್ಲೆ.' ಎಂದು ರೋಷದಿಂದ ಗೆಂಡೆತಿಮ್ಮನ ಕಡೆಗೆ ನುಗ್ಗಿ ಅವನ ಕಳ್ಳು ಬಾಯಿಗೆ ಬರುವಂತೆ ವದ್ದ. ಅಕ್ಕಪಕ್ಕದವರು ಬಿಡಿಸಿದರು.

ನ್ಯಾಯದವರು ಗೆಂಡೆತಿಮ್ಮನನ್ನು ಕರೆದು ವಿಚಾರಿಸತೊಡಗಿದರು. ಗೆಂಡೆತಿಮ್ಮ ಕೈ ಮುಗಿದು ನಿಂತು ಬಿಕ್ಕಿ ಬಿಕ್ಕಿ ಅಳುತ್ತ 'ತಿಳೀದೆ ಮಾಡ್ಬುಟ್ಟೆ ಕಣ್ರಪ್ಪ...ನೀವು ತಿಳ್ದೋರು ಈ ದಿಕ್ಕಿಲ್ಲದ ಪರದೇಶಿ ತಪ್ನ ವಟ್ಟೇಗಾಕಳಿ. ಇನ್ನೊಂದ್ಸಲ ಈ ಪಾಪಕ್ಕೆ ಕೈ ಆಕದ್ರೆ ನನ್ನ ಕೈಗೆ ನಾಗರಾವು ಕಡೀಲಿ' ಎಂದು ಆರ್ತವಾಗಿ ನೋಡಿದ. ಕಡೆಗೆ ಶಾನುಭೋಗರ ಮಾತಿನಂತೆ ಗೆಂಡೆತಿಮ್ಮನಿಗೆ ಐವತ್ತು ರೂಪಾಯಿ ದಂಡ ಹಾಕಿದರು. ಗೆಂಡೆತಿಮ್ಮ ಒಪ್ಪಿದ. ದುಡ್ಡಿಗೆ ಮಾಲೇಗೌಡರನ್ನು

ಜಾಮೀನಾಗಲು ಕೇಳಿದ. ಗೌಡರಿಗೆ ತಮ್ಮ ದುರು ನಡೆದ ಈ ಎಲ್ಲವನ್ನೂ ಕಂಡು ಬೇಜಾರಾಗಿತ್ತು. ಅಲ್ಲದೆ ಕೋಪವೂ ಬಂದಿತ್ತು. 'ಬಡಪಾಯಿ ಸಿಕ್ದ ಅಂತ ಅವ್ನ ಕತ್ನೇ ಕೊಯ್ದ್ ಬಿಡಾದ ಇವ್ರು' ಅಂತ ಮನಸ್ಸಿನಲ್ಲೇ ಅಂದುಕೊಂಡರು. ಇನ್ನೆರಡು ದಿನದಲ್ಲಿ ಆಗಬೇಕಿದ್ದ ಮದುವೆ ಕಾರ್ಯದಿಂದ ಬಾಯಿ ಮುಚ್ಚಿಕೊಂಡರೇ ಹೊರತು ಅದಿಲ್ಲದಿದ್ದರೆ ನ್ಯಾಯ ತಂದವರಿಗೆ 'ಮೊದ್ಲು ನಿಮ್ಮೊಸೇನೋ ಯೆಡ್ಡಿನೋ ಬಿಗಿಯಾಗಿ ಇಟ್ಕೊಳ್ಳೀ ಹೋಗು...ಅವರ್ನ ಇಟ್ಕೊಳ್ಳೂ ಗಂಡಸ್ತನ ಇದ್ದಿದ್ರೆ...ಇಲ್ಲೀತಂಕ ಯಾಕ್ಬರ್ಬೇಕಿತ್ತು!' ಎಂದು ಬಿಡರು ನಾಲಿಗೆ ತನಕ ಬಂದಿದ್ದ ಮಾತನ್ನು ನುಂಗಿದ್ದರು. ಈಗ 'ಜಾಮೀನ್ಯಾಕೆ ತಕೋ ಈಗ್ಲೆ ಬಿಸಾಕು' ಅಂತ ಚಡ್ಡೀ ಜೇಬಿನಿಂದ ಹಣ ತೆಗೆದುಕೊಟ್ಟಾಗ ಅಲ್ಲಿದ್ದ ನ್ಯಾಯದವರ ಮುಖಕ್ಕೆ ಬಾರಿಸಿ ದಂಗಾಯಿತು.

## ೨೩

ನಟ್ಟನಡು ರಾತ್ರಿ. ಹೆಪ್ಪುಗಟ್ಟಿದ ಕತ್ತಲು. ಕಣ್ಣು ಮುಚ್ಚದೆ ಒಂದಿಷ್ಟೂ ಮಿಸುಕಾಡದೆ ಶವದ ಭಂಗಿಯಲ್ಲಿದ್ದ ಗೆಂಡೆತಿಮ್ಮ ಎದ್ದು ಕೂತ. ಬೆಳಿಗ್ಗೆ ಎದ್ದಾಗ ಗೌವಳ್ಳಿಗೆ ಮುಖ ತೋರಿಸುವುದು ಹೇಗೆ? ಕಂಡವರೆಲ್ಲಾ ತನ್ನನ್ನು 'ಇವ್ನೆ ಮನೆ ಹಾಳ ಸೂಳೇ ಮಗ' ಅಂತ ಉಗಿದು ಹೋಗುವ ದೃಶ್ಯವನ್ನು ಕಲ್ಪಿಸಿಕೊಂಡ ಅದಕ್ಕಿಂತ ಸಾಯುವುದೇ ವಾಸಿ ಎನಿಸಿ ಎದ್ದು ನಿಂತ. ಜಗಲಿ ಮೂಲೆಯಲ್ಲಿದ್ದ ಖಾಲಿ ಗೂಡೆಯನ್ನು ಕುಕುಳಲ್ಲಿರುಕಿ ಜಗಲಿಯಿಂದಿಳಿದ. ಅಸಿಷ್ಟದ ಹೊಸ ಗೂಡೆ ಹಟ್ಟಿಯೊಳಗೇ ಇತ್ತು. ಗೆಂಡೆತಿಮ್ಮ ಗೌಡರ ಹಟ್ಟಿಯಿಂದ ನಿರ್ಗಮಿಸಿದ.

ಗೆಂಡೆತಿಮ್ಮ ತನಗೆ ತಾನೇ 'ಇಲ್ಲ ನಾನು ಮನೆ ಮುರುಕ ಅಲ್ಲ, ನಾನೆಂದೂ ಅಂಥ ತಾಬ್ಗುಂಡ ಕೆಲ್ಸಕ್ಕೆ ಮನಸ್ಸು ಕೊಟ್ಟವನಲ್ಲ. ದೇವ್ರೇ ಅಂಥ ಯೋಜನೆ ಮಾಡಿದ್ರೆ ಯಾವುದಾದ್ರೂ ಈಗ್ಲೇ ನನ್ನ ತಿಂದಾಕ್ಲಿ.' ಎಂದು ಜೋರಾಗಿಯೇ ಹೇಳಿಕೊಂಡ. ಅವನ ಕಳಕಳಿಯ ಮಾತಿಗೆ ಉತ್ತರವಾಗಿ ಕಾಡು ಇನ್ನಷ್ಟು ವಿಚಿತ್ರವಾಗಿ ನರಳತೊಡಗಿತು.

ಗೆಂಡೆತಿಮ್ಮನ ಮನಸ್ಸು ಎಷ್ಟೇ ಪ್ರಕ್ಷುಬ್ಧಗೊಂಡರೂ ಅವನ ಕಾಲಗಳು ಮಾತ್ರ ಬಿಡದೆ ಸಾಗುತ್ತಿದ್ದವು. ಗೆಂಡೆತಿಮ್ಮನ ಕಣ್ಣುಗಳು ಬೇಗ ಕಲ್ಲಳ್ಳಿಯನ್ನು ಮುಟ್ಟುವ ಅವಸರದಲ್ಲಿ ಕತ್ತಲನ್ನು ಇರಿದು ಮುಂದೆ ಸಾಗಿದ್ದವು. ಅದನ್ನು ದಾಟಿಬಿಟ್ಟರೆ ಆಚೆಗೆ ಉದ್ದಕ್ಕೂ ಊರುಗಳು. ಆ ಊರಿನ ಹಳ್ಳ ಬಂದಾಗ ಈ ಕಗ್ಗಾಡು ದಾರಿಗೂ ಕೊನೆ ಬಂದಿದೆ ಎನ್ನಿಸಿ ಸ್ವಲ್ಪ ನೆಮ್ಮದಿಯಾಯಿತು. ಹಾಗೆ ಮುಂದೆ ಸಾಗಿ ಕಲ್ಲಳ್ಳಿಯನ್ನು ದಾಟಿ ಹಂಪಾಪುರದ ಕೂಡು ರಸ್ತೆ ಮುಟ್ಟಿದ. ಮುಂದೆ ರಾಜಮಾರ್ಗ. ಭಯವಿಲ್ಲವೆಂದುಕೊಂಡು ಮನೆ ಸೇರುವ ಅವಸರಕ್ಕೆ ಒಳಗಾದ.

ಗೌವಳ್ಳಿಯಲ್ಲಿ ತನಗಾಗಿ ಅವಮಾನವನ್ನು ತಡೆದುಕೊಳ್ಳಲಾಗದೆ ತಾನು ಓಡಿಬಂದಿದ್ದು ನಿಜವಾದ ಕಾರಣವಾಗಿದ್ದರೂ ಈಗ ಮನಸ್ಸು ಮರಂಕಿಯ ಮೇಲಿನ ಹಂಬಲದಿಂದ ಇರಬೇಕೇನೋ ಅನ್ನಿಸತೊಡಗಿತು.

ಸಾಲುಂಡಿಯ ಪರಿವಾರದ ಕೇರಿಯಲ್ಲಾಗಲೆ ಮೊದಲ ಕೋಳಿ ಕೂಗಿತ್ತು, ಬೀಸುಕಲ್ಲಿನ ಪದಗಳ ಏರಿಳಿತಕ್ಕೆ ಕೇರಿ ಇನ್ನೂ ತೂಕಡಿಸುತ್ತಿತ್ತು. ಗೆಂಡೆತಿಮ್ಮನಿಗೆ ಅವನ ಅವ್ವನ ಧ್ವನಿ ನೆನಪಾಯಿತು. ತನ್ನ ಮನೆ ಮುಟ್ಟುವಷ್ಟರಲ್ಲಿ ಕೇರಿಯ ನಾಯಿಗಳ ಆಕ್ರಮಣಕ್ಕೆ ತುತ್ತಾದರೂ ಮನೆ ಕಣ್ಣಿಗೆ ಬಿದ್ದದೇ ಒಂದು ಬಗೆಯ ಸಮಾಧಾನ, ಸಂತೃಪ್ತಿ. ಮನೆ ಮುಟ್ಟಿದ್ದೇ ಗೂಡೆ ಕೆಳಗಿಟ್ಟು ಬಾಗಿಲ ತಟ್ಟಿ 'ಮರುಕಿ' 'ಮರಂಕಿ' ಅಂತ ಕೂಗಿದ. ಬಾಗಿಲು ತೆಗೆಯಲೇ ಇಲ್ಲ. ಜೋರಾಗಿ ಕೂಗುವುದಕ್ಕೂ ಮುಜುಗರ.

ಚಿಲಕ ಅಲ್ಲಾಡಿಸಿ ಕೂಗಿದ. ಒಳಗೆ ಗುಜುಗುಜು. ಗೆಂಡೆತಿಮ್ಮನ ಮೈ ಜುಮ್ಮೆಂದಿತು. ಬಾಗಿಲು ಕಿಂಡಿಗೆ ಕಿವಿಕೊಟ್ಟು ನಿಂತ. ರೋಮಗಳೆಲ್ಲಾ ನೆಟ್ಟಗಾದವು. ಕೆಟ್ಟ ಚಿತ್ರಗಳು ಕಣ್ಣಿಗೆ ನುಗ್ಗಿದವು. ಗೆಂಡೆತಿಮ್ಮ

ಇನ್ನೊಮ್ಮೆ ಕೂಗಬೇಕು ಅನ್ನುವಷ್ಟರಲ್ಲಿ ಬಾಗಿಲು ಮೆಲ್ಲಗೆ ಅರ್ಧ ತೆರೆಯಿತು. ಕತ್ತಲು. ಏನೂ ಕಾಣುತ್ತಿಲ್ಲ. ಗೆಂಡೆತಿಮ್ಮ 'ದೀಪ ಅಚ್ಚಮ್ಮಿ' ಅನ್ನುತ್ತ ಚಡ್ಡಿ ಜೇಬಿಂದ ಬೆಂಕಿ ಕಡ್ಡಿ ತೆಗೆದು ಗೀರುತ್ತಿದ್ದಂತೆ ಮನೆಯೊಳಗಿದ್ದ ಒಂದು ವ್ಯಕ್ತಿ ಹೊರಗೆ ಹಾರಿ, ತಿರುಗಿ ನೋಡುವಷ್ಟರಲ್ಲಿ ಕಣ್ಮರೆಯಾಗಿ ಬಿಟ್ಟಿತು. ಗೆಂಡೆತಿಮ್ಮ ದಿಗ್ಭ್ರಾಂತನಾಗಿ ನಿಂತ. ಅವನು ಗೀರಿದ ಕಡ್ಡಿಯ ಬೆಳಕಿನಲ್ಲಿ ಒಂದಿಷ್ಟೂ ವಿಚಲಿತಳಾಗದೆ ವಿಗ್ರಹದಂತೆ ನಿಂತಿದ್ದ ಮರಂಕಿಯನ್ನೇ ದಿಟ್ಟಿಸಿದ. ವಿಕಾರವಾಗಿ ಕಂಡಳು. ಕತ್ತಲು ಕವಿಯಿತು.

ಗೆಂಡೆತಿಮ್ಮ ಸುಸ್ತಾಗಿ ಬಾಗಿಲ ಪಕ್ಕಕ್ಕೆ ಕುಸಿದ. ಮನೆಯ ಚಾವಣಿ ತಲೆ ಮೇಲೆ ಕಳಚಿ ಬಿದ್ದಿತ್ತು. ಇಷ್ಟು ದಿನ ಯಾವುದನ್ನು ಕಲ್ಪಿಸಿಕೊಳ್ಳುವುದಕ್ಕೂ ಓಕರಿಕೆ ಪಟ್ಟಿದ್ದನೊ ಅದು ತನ್ನ ಕಣ್ಣೆದುರೇ ರುಜುವಾತಾಗಿ ಬಿಟ್ಟಿತು. ತಲೆಯೊಳಗೆ ಕೊಳ್ಳಿ ದೆವ್ವಗಳ ಕುಣಿತ.

ಮರಂಕಿಯು ಅರ್ಧ ತೆರೆದ ಬಾಗಿಲ ಹಿಂದೆ ಬಿಕ್ಕಿ ಬಿಕ್ಕಿ ಅಳುವ ಸದ್ದು ಅವನನ್ನು ರೋಷ, ದುಃಖ ಮತ್ತು ಅವಮಾನಕ್ಕೆ ದೂಡಿತು. ಮತ್ತೆ ಕೂಗಿದ ಕೋಳಿ ಸದ್ದಿಗೆ ಗಡಿಬಿಡಿಯಿಂದ ಎದ್ದು ನಿಂತ. ಖಾಲಿ ಗೂಡೆಯನ್ನು ತಲೆಮೇಲಿಟ್ಟುಕೊಂಡ. ಕೊಳದ ಬಸಪ್ಪನ ಗುಡಿಯ ದಾರಿ ಹಿಡಿದ.

ಅವನು ಈಗ ಯಾವ ದ್ವಂದಕ್ಕೂ ಒಳಗಾಗಿರಲಿಲ್ಲ. ವ್ರತನಿಷ್ಠನಂತೆ ದೃಢವಾದ ಮನಸ್ಸಿನಿಂದಲೇ ಹೆಜ್ಜೆ ಇಡತೊಡಗಿದ.

ಇತ್ತ ಗೌವಳ್ಳಿಯಲ್ಲಿ ಬೆಳಗಾದನಂತರ ಕಂಬ ನೆಡುವ ಶಾಸ್ತ್ರದ ಮೂಲಕ ಮದುವೆ ಸಡಗರ ಪ್ರಾರಂಭವಾಯಿತು. ಅಷ್ಟರಲ್ಲೇ ಬಂಧು ಬಾಂಧವರ ಗಾಡಿಗಳು ಸದ್ದು ಮಾಡುತ್ತಾ ಬರತೊಡಗಿದವು. ಇಳಿ ಹೊತ್ತಿಗೆ ಸರಿಯಾಗಿ ಗಂಡಿನ ಕಡೆಯವರ ಗಾಡಿಗಳೂ ಬಂದವು. ಊರ ಅಂಕದಲ್ಲೇ ಪ್ಯಾಟಿಯವರು ಗಾಡಿಯಿಂದ ಇಳಿದು ಊರ ಬೀದಿಯುದ್ದಾ ನಡೆದುಕೊಂಡೇ ಬಂದರು. ಪ್ಯಾಟಿಯ ಹುಡುಗಿಯರಿರಲಿ, ನಡು ವಯಸ್ಸಿನ ಹೆಂಗಸರೂ ಕೂಡ ಗೌವಳ್ಳಿಯ ಪಾಲಿಗೆ ಅನಿಷ್ಟವೆನಿಸಿದ್ದ, ಗೆಂಡೆತಿಮ್ಮನ ಗಡಿಪಾರಿಗೆ ಕಾರಣವಾಗಿದ್ದ ಸಮಸ್ತ ವಸ್ತುಗಳನ್ನು ತೊಟ್ಟಿದ್ದರು. ತಕ್ಷಣ ಗೌವಳ್ಳಿಯ ಹೆಣ್ಣು ಮಕ್ಕಳು ನಾಳೆ ರತ್ನಿಯ ಮದುವೆಗೆ ತಾವೂ ಕದ್ದಿಟ್ಟುಕೊಂಡಿದ್ದ ಅಂಥವೇ ಅಮೂಲ್ಯ ಸಾಧನಗಳನ್ನು ನಿರ್ಭಯವಾಗಿ ತೊಟ್ಟು ಓಡಾಡಲು ನಿರ್ಧರಿಸಿದರು. ಪ್ಯಾಟಿಯವರ ಆಗಮನ ಗೌವಳ್ಳಿಯ ಗುಪ್ತ ಬಯಕೆಗಳು ಅರಳಲು ಕುಮ್ಮಕ್ಕು ಕೊಟ್ಟಿತು.

ಮುದ್ದನ ಕಣ್ಣುಗಳು ಮಾತ್ರ ಈ ಯಾವ ನೆಂಟರ ಬರುವಿಕೆಯಿಂದಲೂ ತೃಪ್ತವಾಗಲಿಲ್ಲ. ಅವನ ತವಕವೆಲ್ಲ ಗೆಂಡೆತಿಮ್ಮ-ಮರಂಕಿಯರಿಗಾಗಿ ಹಾತೊರೆಯುತ್ತಿತ್ತು. ದೇವೀರವ್ವ ಮರಂಕಿ ಬರದಿದ್ದುದಕ್ಕೆ ನಿರಾಶೆಗೊಂಡರು. ರತ್ನಿಗೂ ಬೇಜಾರಾತು, ಗಂಡಿನ ಕಡೆ ತುಂಬಾ ಥಳಕಾಗಿದ್ದ ಹೆಂಗಸೊಬ್ಬಳು ತಾನೇ ರತ್ನಿಯನ್ನು ಅಲಂಕರಿಸಿದಳು. ಈ ಕೆಲಸವನ್ನು ಮರಂಕಿಯೇ ಮಾಡುವುದೆಂದು ನಿಶ್ಚಿತವಾಗಿದ್ದು, ಅದನ್ನು ನೆನೆದು ದೇವೀರವ್ವ ನಿಟ್ಟುಸಿರು ಬಿಟ್ಟರು. ಸರ್ವಾಲಂಕಾರಭೂಷಿತಳಾಗಿ ಕೂತ ಮದುಮಗಳನ್ನು ಗೌವಳ್ಳಿಯ ಹೆಂಗಸರು ವಿಸ್ಮಯದಿಂದ ನೋಡಿದರು. ಮೈಸೂರಿನಿಂದ ಬಂದಿದ್ದ ವಾದ್ಯ ಗೌವಳ್ಳಿಗೆ ಅಪರಿಚಿತ ಲೋಕವೊಂದರ ಅನುಭವವನ್ನು ಉಂಟುಮಾಡಿತು. ಈ ಯಾವ ಸಡಗರಕ್ಕೂ ಪುಳಕಿತನಾಗದೆ ಆ ರಾತ್ರಿಯನ್ನು ಕಳೆದ ಓರ್ವ ವ್ಯಕ್ತಿಯೆಂದರೆ ಮುದ್ದ. ಚಪ್ಪರದ ರಾತ್ರಿ ಕಳೆದು ಬೆಳಗಾಗಿ ಧಾರೆ ಮುಹೂರ್ತ ಸಮೀಪಿಸತೊಡಗಿತು. ಮುದ್ದ ತಡೆದುಕೊಳ್ಳಲಾಗದೆ ಅವ್ವನನ್ನು ಪೀಡಿಸಿದ. ಅವನ ಅವ್ವ 'ಸುಮ್ನಿರ್ಲ ಬತ್ತಾರೆ. ಗೊರಕಲ ವೋಗವ್ನೆ ಕರ್ಪಂಬರಕ್ಕೆ' ಎಂದು ತಮ್ಮ ಕೆಲಸದಲ್ಲಿ ಮಗ್ನರಾದರು. ಮುದ್ದನಿಗೆ ಮತ್ತೆ ಆಸೆಯ ಮಿಂಚೊಂದು ಸುಳಿಯಿತು, ಚಪ್ಪರದ ಒಂದು ತುದಿಗೆ ನಿಂತು ತನಗೆ ಬೇಕಿದ್ದ ಮುಖಗಳನ್ನು ಊರಿನಿಂದ ಪರಿದು ಬರುತ್ತಿದ್ದ ಜನ ಪ್ರವಾಹ

ದಲ್ಲಿ ಹುಡುಕಿದ. ಅವು ಕಾಣಲಿಲ್ಲ. ವಾದ್ಯಗಳು ಮೊರೆದವು. ಧಾರೆ ಮುಗಿದೇ ಹೋಯಿತು. ಮುದ್ದನ ಬಯಕೆ ಮಾತ್ರ ತಣ್ಣಗಾಯಿತು. ಕಣ್ಣಲ್ಲಿ ನೀರು ತುಂಬಿಕೊಂಡವು.

ಮುಹೂರ್ತವೆಲ್ಲ ಮುಗಿಯಿತು. ಎಲ್ಲ ಊಟಕ್ಕೆ ಕೂತರು. ಮುದ್ದ ತಿನ್ನುವ ತವಕವಿಲ್ಲದೆ ಚಪ್ಪರದಾಚೆಗೆ ಕಣ್ಣರಳಿಸಿದ. ತಟ್ಟನೆ ಏನೋ ಕಂಡವನಂತೆ ಅಲ್ಲಿಂದ ಹಾರಿದ. ಅವನ ಕಣ್ಣಿಗೆ ಬಿದ್ದವನು ಗೂರಕಲ. ಒಂದೇ ಉಸಿರಿಗೆ ಪ್ರಶ್ನಿಸಿ. ಗೊರಕಲ 'ಪಸಿ ಅಪ್ಪಾವರನ್ನು ಕರ್ಕಂಬನ್ನಿ ಇಲ್ಲಿ, ಯೇಳ್ತಿನ್ನಿ' ಎಂದು ಮುದ್ದನನ್ನು ಕಳಿಸಿದ. ಗೌಡರು ಬಂದು ವಿಚಾರಿಸಿದಾಗ ಗೊರಕನಡೆದ ದುರಂತವನ್ನು ಪಿಸುಗುಟ್ಟಿದ, ಗೌಡರು ಗೊರಕಲನಿಗೆ 'ಈಗ್ಲೆ ಯಾರಗ್ಲೂ ಬಾಯ್ಬಿಡಬೇಡಾ' ಎಂದು ಭಾರವಾದ ಮನಸ್ಸಿನಿಂದ ಕೆಲಸಕ್ಕೆ ತೊಡಗಿದರು.

ಗೊರಕಲನ ಪಿಸು ಮಾತುಗಳನ್ನೂ ಮುದ್ದನ ಕಿವಿಗಳು ನುಂಗಿ ಬಿಟ್ಟಿದ್ದವು. ಪರಸ್ಪರ ಬಿಟ್ಟಿರಬೇಕಾಗಿರುವ ಅನಿವಾರ್ಯಕ್ಕೆ ಸದ್ದಿಲ್ಲದೆ ದುಃಖದಿಂದ ದ್ರವಿಸುತ್ತಿದ್ದ ದೇವೀರವ್ವ ಮತ್ತು ರತ್ನಿಯರ ಕಿವಿಗಳಿಗೂ ಮುದ್ದ ಈ ಸೂತಕದ ಸುದ್ದಿಯನ್ನು ಮುಟ್ಟಿಸಿದಾಗ, ಅವರ ಹೃದಯಗಳು ಇನ್ನಷ್ಟು ನೋವಿಗೊಳಗಾದವು. ಸಂಜೆಯಾಗುತ್ತಿದ್ದಂತೆ ಚಪ್ಪರವೆಲ್ಲ ಶೂನ್ಯವಾಗತೊಡಗಿತು. ಅಪ್ಪಗಳೆಲ್ಲ ಚದುರಿದ್ದರು. ಮುದ್ದ ಮೂಲೆಯಲ್ಲೇ ಕೂತು ಬಿಕ್ಕಿ ಬಿಕ್ಕಿ ಅತ್ತ- ಗೆಂಡೆತಿಮ್ಮನಿಂದ ಶೃಂಗಾರಗೊಂಡು ಜಗಜಗಿಸುತ್ತಿದ್ದ ಚಪ್ಪರ ಈಗ ಗೌಳಿಯ ವಾನರ ಪಡೆಯ ಆಕ್ರಮಣಕ್ಕೆ ತುತ್ತಾಗಿತ್ತು. ಬಣ್ಣ ಬಣ್ಣದ ಚಿತ್ರಗಳೆಲ್ಲ ಹರಿದು ಜೂಲಾಗಿದ್ದವು. ಮುದ್ದನ ಮನಸ್ಸನ್ನು ಈ ಚಿತ್ರ ಇನ್ನಷ್ಟು ಗೀರಿತು. ಅವನ ಪುಟ್ಟ ಹೃದಯಕ್ಕೆ ಆಳವಾಗಿ ಆಗಿದ್ದ ಗಾಯ ಯಾರಿಗೂ ಕಾಣಿಸಲಿಲ್ಲ.

ಮದುವೆಯಾದ ಬೆಳಿಗ್ಗೆ ಗೆಂಡೆತಿಮ್ಮ ಮುರಂಕಿಯರ ಸಾವು ಬಿರುಗಾಳಿಯಂತೆ ಗೌಳಿಯ ಉದ್ದಗಲಕ್ಕೂ ವ್ಯಾಪಿಸಿತು. ತಿಮ್ಮೂರಿನ ನ್ಯಾಯದಿಂದಾಗಿ ಗೆಂಡೆತಿಮ್ಮ ಸತ್ತನೆಂದು ಗೌಳಿಗೆ ದೃಢವಾಗಿ ಬಿಟ್ಟಿತ್ತು. ನ್ಯಾಯದೇವರು ಕೂಡ ಪಶ್ಚಾತ್ತಾಪಪಟ್ಟರು. ಈ ದುರ್ಘಟನೆಯನ್ನು ಕೇಳಿದವರೆಲ್ಲಾ ಕಣ್ಣೀರು ತುಂಬಿಕೊಂಡರು. ಮಾಲೇಗೌಡರು ತಡೆದುಕೊಂಡಿದ್ದ ಕಹಿಯನ್ನೆಲ್ಲ ಎಲ್ಲರೆದುರಿಗೂ ಕಾರಿದರು.

ಗೆಂಡೆತಿಮ್ಮನ ಸಾವು ತನ್ನ ಕರಿಣ ಕೃತ್ಯದಿಂದಲೇ ಆಯಿತೆಂಬ ಪಾಪ ಪ್ರಜ್ಞೆಗೆ ಗೌಳಿಯನ್ನು ಒಳಗುಮಾಡಿದರೆ ಅತ್ತ ಸಾಲುಂಡಿಯಲ್ಲಿ ನೀರು ಕುಡಿದು ಊದಿಕೊಂಡು ವಿಕಾರವಾಗಿದ್ದ ಅವನ ಮೃತ ದೇಹದ ಜೊತೆಗೆ ನೇಣು ಹಾಕಿಕೊಂಡು ಸತ್ತಿದ್ದ ಮುರಂಕಿಯ ಹೆಣವೂ ಇಡೀ ಊರಿಗೆ ದೊಡ್ಡ ಸಮಸ್ಯೆಯಾಗಿದ್ದವು.

ರೆಕ್ಕ ಸುಬ್ಬ [illegible]




"ಹೇಗೊ ಓದ್ದೋದು ಕಂಪ್ಯೂಟರ್ ಅಷ್ಟೇ ಅಂತ ಪರೀಕ್ಷೆಲಿ ಬೇರೆ ಏನೂ ಬರೆಯದಿದ್ದರೂ ನಂಬರೊಂದು ಸರಿಯಾಗಿ ಬರೆದಿದ್ದ ಕಣೋ."

ಯಾತನೆಯಿಂದ ಒದ್ದಾಡುತ್ತಿದ್ದ ಮರಂಕಿ ಗೆಂಡೆತಿಮ್ಮನ ಸಾವಿನ ಸುದ್ದಿ ಕಿವಿಗೆ ಬಿದ್ದದ್ದೇ ಸಿಡಿಲು ಬಡಿದಂತಾಗಿ ನೆಲಕ್ಕೊರಗಿದ್ದಳು. ಕೇರಿಯ ಒಂದೊಂದು ದನಿಯೂ ಇರಿಯುತ್ತಿರುವಂತೆ, ಕಣ್ಣಲ್ಲಿ ರಕ್ತ ಜಿನುಗುತ್ತಿರುವಂತೆ ಅನ್ನಿಸಿ ಬಿಕ್ಕಿ ಬಿಕ್ಕಿ ಅಳತೊಡಗಿದ್ದಳು. ತನ್ನ ತಿಳಿಗೇಡಿತನದಿಂದಾಗಿ ಸಂಭವಿಸಿದ ದುರಂತದಿಂದ ಚೇತರಿಸಿಕೊಳ್ಳಲಾಗಲಿಲ್ಲ. ಮರಂಕಿ ಕೂತಲ್ಲೆ ನೆಲವಾದರೂ ಬಾಯಿ ಬಿಟ್ಟು ನುಂಗಿ ಬಿಡಬಾರದೆ ಎಂದು ಹಲುಬಿದಳು. ಹೊರಗೆ ಮಾಗಿ ಬಿಸಿಲು ಪ್ರಖರವಾಗಿ ಸಾಲುಂಡಿಯ ಬೀದಿಯೂ ಧಗಧಗಿಸ ತೊಡಗಿ ತನ್ನ ಗಂಡ ಸತ್ತ ಸುದ್ದಿಗೂ ಹೊರಗೆ ಬರದೆ ಇದ್ದ ಮರಂಕಿಯನ್ನು ನೋಡಲು ಹೋದ ಕೇರಿಯವರಿಗೆ ಕಂಡಿದ್ದು ನಾಲಿಗೆ ಹಿರಿದು ಕೊಂಡು ಭಯವನ್ನುಂಟು ಮಾಡುವಂತೆ ತೊಲೆಯಿಂದ ನೇತಾಡುತ್ತಿದ್ದ ಮರಂಕಿಯ ಘೋರವಾದ ದೃಶ್ಯ.

ಗೆಂಡೆತಿಮ್ಮ—ಮರಂಕಿಯರ ಸಾವು ಸಾಲುಂಡಿಯ ಜನರನ್ನು ದಿಗ್ಭ್ರಾಂತರನ್ನಾಗಿ ಮಾಡಿತ್ತು. ಊರಿನ ಮುಖ್ಯರೂ ಯಾವ ಇತ್ಯರ್ಥಕ್ಕೂ ಬರಲಾಗದೆ ತಳಮಳದಿಂದ ಉಳಿಮಾವಿಗೆ ಸುದ್ದಿ ಕಳಿಸಿ ಕಾದು ಕೂತರು. ಮರಂಕಿಯ ಅಪ್ಪನ ವ್ಯವಹಾರಜ್ಞಾನ ಸಾಲುಂಡಿಗೆ ಘೋರವೆನಿಸಿದನ್ನು ಸರಳವಾಗಿ ಪರಿಹರಿಸಿತ್ತು. ಅವರ ಜಾತಿಯ ರೂಢಿಯಂತೆ ಮಣ್ಣು ಮಾಡುವ ಬದಲು ಅವರನ್ನು ಒಟ್ಟಿಗೇ ಸುಟ್ಟುಬಿಟ್ಟರು. ಸಾಲುಂಡಿಯ ಎಲ್ಲ ಕೇರಿಯವರೂ ಈ ದುರಂತಕ್ಕೆ ಅನುಕಂಪಿಸಿದರು. ಹಾಗೆಯೇ ಅವರೆಲ್ಲರಿಗೂ ಇವರಿಬ್ಬರ ಸಾವು ಒಡೆಯದ ಒಗಟಾಗಿಯೇ ಉಳಿಯಿತು.

ಈ ದುರಂತ ಕತೆ ಸಂಭವಿಸಿ ಇಪ್ಪತ್ಮೂರು ವರ್ಷಗಳಾಗಿ ಹೋದವು. ಆದರೆ ಸಾಲುಂಡಿಯಲ್ಲಿ ಅದರಲ್ಲೂ ಗೌವಳ್ಳಿಯಲ್ಲಿ ಅವರ ಸಾವಿನ ಸುದ್ದಿ ಇನ್ನೂ ಹಸಿಹಸಿಯಾಗಿಯೇ ಇದೇ. ಗೌವಳ್ಳಿಯಂತ ಕಗ್ಗಾಡು ಕೊಂಪೆಯ ಯಾವ ಕೇರಿಗೆ ಹೋದರೂ ಮರಂಕಿ ಬಿತ್ತಿದ ಬಯಕೆಗಳು ಬೆಳೆದು ಹೂ ಬಿಟ್ಟು ನಿಂತಿವೆ. ಇಪ್ಪರಲ್ಲಿ ಗೌವಳ್ಳಿಗೆ ಬಸ್ಸಿನ ದಾರಿಯೂ ಆಗಿ ಊರ ಹಿರಿಯರು ಎಷ್ಟು ಬಗೆಯಿಂದ ತಡೆದರೂ ಲೆಕ್ಕಿಸದೆ ಅವರ ಕಲ್ಪನೆಯ ಅನಿಷ್ಟ ಶಕ್ತಿಗಳು ನುಗ್ಗಿ ಆ ಕ್ರುಸುವುದರಲಿ, ಊರೇ ತಾನಾಗಿ ಆ ಶಕ್ತಿಗಳನ್ನೆಲ್ಲ ಆವಾಹನೆ ಮಾಡತೊಡಗಿದೆ. ಊರಿಗೊಬ್ಬಳೊ ಇಲ್ಲವೆ ಕೇರಿಗೊಬ್ಬಳೊ ಮರಂಕಿಯಿದ್ದ ಊರಿನಲ್ಲೀಗ ಪ್ರತಿ ಮನೆ ಮನೆಯಲ್ಲೂ ಅನೇಕ ಮರಂಕಿಯರು ಅವತರಿಸಿಬಿಟ್ಟಿದ್ದಾರೆ. ಇವತ್ತಿಗೂ ಗೌವಳ್ಳಿಯಲ್ಲಾಗಲಿ ಇಲ್ಲವೆ ಸಾಲುಂಡಿಯಲ್ಲಾಗಲಿ ಯಾರನ್ನಾದರೂ ಗೆಂಡೆತಿಮ್ಮ–ಮರಂಕಿಯರ ಬಗ್ಗೆ ಪ್ರಶ್ನಿಸಿದ ಕೂಡಲೆ ಅವರು ಕ್ಷಣ ಮೌನ ತಳೆದು ಮತ್ತೆ ಅವರಿಬ್ಬರ ಮರೆಯಲಾಗದ ದುರಂತವನ್ನು ನೆನೆದು ನಿಟ್ಟುಸಿರುಬಿಡುವುದನ್ನು ಕಾಣಬಹುದು. ✡



This magazine owned by the Karnataka Patrika Private Ltd. is printed & published by Bhomeshwar Das Kohli at the Samyukta Karnatak Press Koppikar Road, Hubli. Representatives: Bombay: V. S. Mani, Phone: 472794 Calcutta: H· Muzamdar: Phone: 46-4238; Madras: P. N. Srinivasan, Phone 3748; New Delhi: P. R. Chopra, Phone: 224130.

# "ಸ್ನಾಯು ಹಿಡಿತವು ಕ್ರಿಕೆಟ್ ಪಟುಗಳಿಗೆ ದೊಡ್ಡ ತಲೆನೋವೇ ಸೈ"

ಎನ್ನುತ್ತಾರೆ **ಕ್ಲೈವ್ ಲೊಯ್ಡ್.**



## "ಅಯೊಡೆಕ್ಸ್

## ಹಚ್ಚೆ, ನಾನು ಮೊದಲಿನಂತೆಯೇ ಆಟಕ್ಕೆ ಸಿದ್ಧ".

ಅಯೊಡೆಕ್ಸ್ -
ಗುಣಪಡಿಸುವ ಮುಲಾಮು




**ಅಯೊಡೆಕ್ಸ್ ಹಚ್ಚಿರಿ, ಮತ್ತೆ ಓಡಾಡಿರಿ**

*Registered with the Registrar of Newspapers for India under No. 3633/57*



